# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಸಮಾಜೋಭಾಷಿಕ ಅಧ್ಯಯನ

(ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಹೆಗ್ಡಾಳ್ ಹುಲುಗಪ್ಪ



ಮಾರ್ಗದರ್ಶಕರು
ಡಾ. ಡಿ. ಪಾಂಡುರಂಗಬಾಬು
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ






ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೬

735

# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಸಮಾಜೋಭಾಷಿಕ ಅಧ್ಯಯನ

(ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ)

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು
**ಹೆಗ್ಡಾಳ್ ಹುಲುಗಪ್ಪ**

ಮಾರ್ಗದರ್ಶಕರು
**ಡಾ. ಡಿ. ಪಾಂಡುರಂಗಬಾಬು**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ



**ಕನ್ನಡ ಭಾಷಾಧ್ಯಯನ ವಿಭಾಗ**
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ–೫೮೩ ೨೭೬
೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಹೆಗ್ಡಾಳ್ ಹುಲುಗಪ್ಪ** ಅವರು ನನ್ನ ಮಾರ್ಗದರ್ಶನದಲ್ಲಿ **"ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಸಮಾಜೋಭಾಷಿಕ ಅಧ್ಯಯನ"** (ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಎಂಬ ಸಂಶೋಧನಾ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಡಿ. ಪಾಂಡುರಂಗಬಾಬು**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ : 12/12/16
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಘೋಷಣಾ ಪತ್ರ

**ಡಾ. ಡಿ. ಪಾಂಡುರಂಗಬಾಬು,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ **"ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಸಮಾಜೋಭಾಷಿಕ ಅಧ್ಯಯನ"** (ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಎಂಬ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಾದರಪಡಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಣೆಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

**ಹೆಗ್ಡಾಳ್ ಹುಲುಗಪ್ಪ**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ದಿನಾಂಕ : 12/12/16

ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ವ್ಯಾಪ್ತಿ
೧.೩. ಅಧ್ಯಯನದ ವೈಧಾನಿಕತೆ
೧.೪. ಅಧ್ಯಯನದ ಸ್ವರೂಪ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

ಭಾರತೀಯ ಸಾಂಸ್ಕೃತಿಕ ಚರಿತ್ರೆಯಲ್ಲಿ ದೇವ–ದೇವತೆಗಳ ಕಲ್ಪನೆ ರೋಚಕವಾದುದು. ಭಾಷೆ ಇನ್ನೂ ರೂಪಗೊಳ್ಳುವ ಮೊದಲು ಕೇವಲ ಕೂಗು, ಸನ್ನೆಗಳಿಂದಲೇ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವಂತಹ ಕಾಲದಲ್ಲಿ, ಸ್ವರ್ಗ, ನರಕ, ಪಾಪ, ಪುಣ್ಯ ಯಾವುದರ ಬಗ್ಗೆಯೂ ಪರಿಕಲ್ಪನೆಯಿಲ್ಲದ ಆದಿಮಾನವರಿಗೆ ಪ್ರಕೃತಿಯೇ ಎಲ್ಲವೂ ಆಗಿತ್ತು. ತನ್ನ ಬದುಕಿನ ಸುಖ ದುಃಖಕ್ಕೆ ಕಾರಣವಾಗುವ ಸೃಷ್ಟಿಯ ಪ್ರತಿಯೊಂದು ವಸ್ತುವಿನ ಬಗೆಗೂ ಆತನಲ್ಲಿ ಭಯ, ಶ್ರದ್ಧೆ, ಭಕ್ತಿ ಬೆಳೆದು ನಿಂತವು. ಆಗ ಸೃಷ್ಟಿಯ ಗೋಚರಾಗೋಚರ ವಸ್ತುಗಳೆಲ್ಲವೂ ಅವನಿಗೆ ಉಪಾಸನ ಯೋಗ್ಯ ದೇವತೆಗಳೆನಿಸಿದವು. ಹೀಗೆ ದೇವತೆಗಳ ಸಂಖ್ಯೆ ಬೆಳೆಯುತ್ತಾ, ಕೋಟಿಗಳಿಗೂ ಹೆಚ್ಚು ದೇವತೆಗಳು ಸೃಷ್ಟಿಯಾದವೆಂದು ನಂಬಿದ್ದೇವೆ. ತಮಗೆ ಬರುವ ಅನಿಷ್ಟಗಳಿಂದ ದೂರಾಗಲು ಪ್ರಕೃತಿಯನ್ನು ಆರಾದಿಸಿದ ಇವರು ಪ್ರಕೃತಿಯನ್ನೇ ಆದಿಶಕ್ತಿ ಎಂದು ಬಗೆದರು. ಹೀಗೆ ದೇವ ದೇವತೆಗಳ ಉಗಮವಾಯಿತು. ದ್ರಾವಿಡರಲ್ಲಿ ಕೃಷಿಕರು ಮಾತೃ ಆರಾಧಕರಾಗಿದ್ದರೆ, ವಲಸೆ ದ್ರಾವಿಡರು ಪಶುಪತಿ, ಶಿವಾರಾಧಕರಾಗಿದ್ದರು. ಈ ಎರಡೂ ಸಂಸ್ಕೃತಿಯ ಸಂಕೇತಗಳು ಸಿಂಧೂಕೊಳ್ಳದಲ್ಲಿ ದೊರೆಯುತ್ತವೆ. ಒಟ್ಟಿನಲ್ಲಿ ಮಾತೃಪ್ರಧಾನ ವ್ಯವಸ್ಥೆಯನ್ನು ಒಳಗೊಂಡ ಕೃಷಿಕರಲ್ಲಿ ಸ್ತ್ರೀಪ್ರಧಾನ ದೇವತೆಗಳ ಕಲ್ಪನೆಯಿದ್ದರೆ, ಪಿತೃಪ್ರಧಾನ ವ್ಯವಸ್ಥೆಯನ್ನು ಒಳಗೊಂಡ ಪಶುಪಾಲಕ ವಲಸೆಗಾರರಲ್ಲಿ ಶಿಷ್ಟ ದೇವತೆಗಳ ಕಲ್ಪನೆ ಕಂಡುಬರುತ್ತದೆ.

ಅಲೆಮಾರಿ ಜೀವನದಿಂದ ಪ್ರಾರಂಭವಾದ ಮನುಷ್ಯರ ಬದುಕು ಕ್ರಮೇಣ ಒಂದು ಕಡೆ ನೆಲೆನಿಲ್ಲುವಂತಾಯಿತು. ಮುಂದೆ ಆಹಾರ ಉತ್ಪಾದನೆ ಅಥವಾ ಕೃಷಿಯನ್ನು ಕಂಡುಕೊಂಡರು. ಇದು ಜನರ ಸ್ಥಿರ ನೆಲೆಗಳಿಗೆ ಕಾರಣವಾಯ್ತು. ಮೊದಮೊದಲು ಒಟ್ಟಾಗಿ ನೆಲೆಸುತ್ತಿದ್ದಂತಹ ಇವರು ಮುಂದೆ ಕುಟುಂಬಗಳಾಗಿ ಒಡೆದಿರಬೇಕು. ಹಲವು ಕುಟುಂಬಗಳು ಒಂದು ಪ್ರದೇಶದಲ್ಲಿ ಸಾಂಘಿಕ ಬದುಕನ್ನು ಆರಂಭಿಸಿದ್ದರ ಪರಿಣಾಮವಾಗಿ, ಹೆಚ್ಚು ಜನರು ಒಂದು ಪರಿಸರದಲ್ಲಿ ನೆಲೆನಿಲ್ಲು ವಂತಾಯಿತು. ಹೀಗೆ ಗ್ರಾಮಗಳ ಉದಯಕ್ಕೆ ಕಾರಣವಾಯಿತು. ಜನರ ನೆಲೆಸುವಿಕೆಯ ಪ್ರಮಾಣ ಜಾಸ್ತಿಯಾದಂತೆಲ್ಲಾ ವ್ಯಕ್ತಿಯನ್ನು ಗುರುತಿಸಲಿಕ್ಕೆ ಕಷ್ಟವಾಗಿರಬಹುದು. ಇದರಿಂದ ಹೆಸರಿನ ಅಗತ್ಯ

ಕಂಡುಬಂದು ವ್ಯಕ್ತಿಗಳಿಗೆ ಹೆಸರುಗಳನ್ನು ಇಡಲು ಪ್ರಾರಂಭಿಸಿರಬೇಕು. ಹಿಂದಿನ ನಾಮಾಧ್ಯಯನಕಾರರು ಮತ್ತು ವಿದ್ವಾಂಸರು ಪ್ರಾರಂಭದಲ್ಲಿ ವ್ಯಕ್ತಿಗೆ ಅನ್ವರ್ಥಕ ನಾಮಗಳನ್ನು ಇಡುತ್ತಿದ್ದಿರಬಹುದೆಂದು ಅಭಿಪ್ರಾಯಪಡುತ್ತಾರೆ. ಆತನ ಶಾರೀರಿಕ ಲಕ್ಷಣ ಮತ್ತು ಗುಣಗಳಿಗನುಗುಣವಾಗಿ ಹೆಸರಿಡುತ್ತಿದ್ದರು. ಉದಾ. ಕಪ್ಪಗಿದ್ದರೆ ಕರಿಯಾ, ಕೆಂಪಗೆ ಇದ್ದರೆ ಕೆಂಪ, ಗಿಡ್ಡಿಯಾಗಿದ್ದರೆ ಗಿಡ್ಡಿ, ಸಣ್ಣಗೆ ಇದ್ದರೆ ಸಣ್ಣ ಎಂದು ಕರೆದಿರಬೇಕು.

ಆದಿಮಾನವರು ನಾಗರೀಕರಾದಂತೆಲ್ಲಾ ವೈವಿಧ್ಯಮಯ ಜೀವನ ಸಂಸ್ಕೃತಿಯನ್ನು ಆರಾಧನಾ ಪದ್ಧತಿಗಳನ್ನು ರೂಢಿಸಿಕೊಂಡರು. ಪರಿಣಾಮವಾಗಿ ಅನ್ವರ್ಥಕ ನಾಮಗಳಿಗೆ ಬದಲಾಗಿ ದೈವ, ಸಾಂಸ್ಕೃತಿಕ ನಾಯಕರ ಹೆಸರು ಪ್ರಕೃತಿನಿಷ್ಠ, ವ್ಯಕ್ತಿನಾಮಗಳನ್ನು ನಿರ್ದೇಶನ ಮಾಡುವುದು ರೂಢಿಗೆ ಬಂತು. ಹಾಗೆಯೇ ಸ್ಥಳನಾಮಗಳು ಪ್ರಾರಂಭಿಕ ಹಂತದಲ್ಲಿ ಪ್ರಕೃತಿನಿಷ್ಠವಾಗಿದ್ದವು ಮುಂದೆ ಭೌಗೋಳಿಕ ಚಹರೆಗಳಿಂದ ಭಿನ್ನವಾಗಿ, ಸಮುದಾಯನಿಷ್ಠೆ, ದೈವನಿಷ್ಠೆ ಜನಾಂಗದ ವ್ಯಕ್ತಿಗಳ, ಚಾರಿತ್ರಿಕ ವ್ಯಕ್ತಿಗಳ, ಧಾರ್ಮಿಕ ವ್ಯಕ್ತಿಗಳ, ಹೆಸರುಗಳನ್ನು ಕೊಡಲು ಮುಂದಾದದ್ದು ಗ್ರಾಮನಾಮಗಳ ಇತಿಹಾಸದಿಂದ ತಿಳಿಯುತ್ತದೆ.

ಪ್ರಸ್ತುತ ಅಧ್ಯಯನವು 'ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಸಮಾಜೋಭಾಷಿಕ ಅಧ್ಯಯನ' ಎಂಬ ವಿಷಯದ ಬಗೆಗೆ ಅಧ್ಯಯನ ನಡೆಸಲು ದೈವಸಂಬಂಧಿ ಹೆಸರುಗಳನ್ನು ಮುಖ್ಯವಾಗಿಟ್ಟುಕೊಂಡು, ಅವುಗಳಿಗೆ ದೈವಸಂಬಂಧಿ ಹೆಸರುಗಳನ್ನು ಇಡುವುದರ ಹಿಂದಿರುವ ನಂಬಿಕೆಯೇನು ಎಂಬುದನ್ನು ಕೂಲಂಕಶವಾಗಿ ಅಭ್ಯಾಸ ಮಾಡಬೇಕಿದೆ. ಹೆಸರುಗಳು ಇಂದು ವ್ಯಾಕರಣದ ವ್ಯಾಪ್ತಿಯನ್ನು ಮೀರಿ ಒಂದು ಜನಾಂಗದ ಸಾಂಸ್ಕೃತಿಕ ಅಧ್ಯಯನದ ಮಹತ್ವಪೂರ್ಣ ಸಾಧನವಾಗಿ ಪರಿಣಮಿಸಿದೆ. "ಬಾಹ್ಯದಲ್ಲಿ ಹೆಸರುಗಳು ಕೇವಲ ಶಬ್ದಗಳಾಗಿ ಕಂಡರೂ ಅವುಗಳಲ್ಲಿ ಆಕೃತಿ ದೃಷ್ಟಿಯಿಂದ ಒಂದು ವೈಜ್ಞಾನಿಕ ರಚನೆ ಕಂಡುಬರುತ್ತದೆ, ಆಶಯ ದೃಷ್ಟಿಯಿಂದ ಸಾಂಸ್ಕೃತಿಕ ದ್ರವ್ಯ ತುಂಬಿಕೊಂಡಿರುತ್ತದೆ. ಪರಸ್ಪರ ಕೊಂಡಿ ಕಳಚಿಬಿದ್ದರೂ ಆಳವಾದ ಅಧ್ಯಯನದಿಂದ ಅವುಗಳ ರಾಚನಿಕ, ಸಾಂಸ್ಕೃತಿಕ ಕೊಂಡಿಯನ್ನು ಮತ್ತೆ ಜೋಡಿಸಬಹುದಾಗಿದೆ" ಎಂದು ಸಂಶೋಧಕರಾಗಿದ್ದತಂಹ ಕಲ್ಬುರ್ಗಿ ಎಂ.ಎಂ. ಅವರು ತಮ್ಮ 'ಕನ್ನಡ ನಾಮವಿಜ್ಞಾನ' ಕೃತಿಯಲ್ಲಿ ಹೇಳುತ್ತಾರೆ.

ದೈವಸಂಬಂಧಿ ಹೆಸರುಗಳನ್ನು ವ್ಯಕ್ತಿನಾಮಗಳಾಗಿ ಬಳಸಿಕೊಳ್ಳುವುದು ಹಳೆಯ ಪರಂಪರೆ. ದೇವರ ಹೆಸರುಗಳನ್ನು ವ್ಯಕ್ತಿನಾಮಗಳಾಗಿ ಇಡುವುದರ ಹಿಂದೆ ಜನರಲ್ಲಿ ಅನೇಕ ನಂಬಿಕೆಗಳಿವೆ. ವ್ಯಕ್ತಿನಾಮಗಳಂತೆ ಸ್ಥಳನಾಮಗಳೂ ಐತಿಹಾಸಿಕ ಮಹತ್ವವನ್ನು ಪಡೆದಿವೆ. ಇವುಗಳ ನಾಮಕರಣದ ಹಿಂದೆ ಒಂದು ಜನಸಮುದಾಯದ ಸಮೂಹಶಕ್ತಿ ಅಥವಾ ಒಬ್ಬ ವ್ಯಕ್ತಿ ಇರುತ್ತಾನೆ. ಆರಂಭದಲ್ಲಿ ನೆಲೆನಿಂತ ಕುಟುಂಬಗಳು ತಾವು ನಿಂತ ಸ್ಥಳಕ್ಕೆ ತಮ್ಮಲ್ಲಿಯೇ ಒಬ್ಬ ವ್ಯಕ್ತಿಯ ಹೆಸರನ್ನು ಅಥವಾ ತಾವು ನಂಬಿರುವ ದೈವದ ಹೆಸರನ್ನು ಇಡಬಹುದು. ಉದಾಹರಣೆಗೆ ರಾಮನಮಲೆ, ವೆಂಕಟೇಶ್ವರ

ಕ್ಯಾಂಪ್, ತಾಯಕ್ಕನಹಳ್ಳಿ, ವೆಂಕಟಾಪುರ, ವ್ಯಾಸನಕೆರೆ, ಶಂಕರಬಂಡೆ, ಶಿವಪುರ, ಪರಮದೇವನಹಳ್ಳಿ, ನಾರಾಯಣದೇವರಕೆರೆ, ಶ್ರೀನಿವಾಸ ಕ್ಯಾಂಪ್, ಕೃಷ್ಣಾಪುರ ಹೀಗೆ ಆ ಹೆಸರುಗಳು ಎಲ್ಲಾ ಜನರ ಒಪ್ಪಿಗೆ ಪಡೆದು ಮನ್ನಣೆಗೆ ಪಾತ್ರವಾಗುತ್ತದೆ. ಹೆಸರುಗಳು ಜನ್ಮ ತಾಳಲು ಪ್ರಬಲವಾದ ಕಾರಣಗಳಿರುತ್ತವೆ. ಚಾರಿತ್ರಿಕವ್ಯಕ್ತಿ ಚಾರಿತ್ರಿಕಘಟನೆ, ದೈವಸ್ಮರಣೆಗಾಗಿ ಇಲ್ಲವೆ ಭೌಗೋಳಿಕ ಸಾಂಸ್ಕೃತಿಕ ವೈಶಿಷ್ಟ್ಯಗಳ ಅಭಿವ್ಯಕ್ತಿರೂಪಕವಾಗಿ ಸ್ಥಳನಾಮಗಳು ಹೆಸರು ಪಡೆದಿವೆ. ಊರು, ಸಮಾಜ, ಸಂಸ್ಥೆಯ ದೃಷ್ಟಿಯಲ್ಲಿ ವ್ಯಕ್ತಿನಾಮಗಳಿಗೆ ಮಹತ್ವವಿರುವಂತೆ ಪ್ರಾಂತೀಯ ದೃಷ್ಟಿಯಿಂದ ನೋಡಿದಾಗ ಊರಿನ ಹೆಸರುಗಳಿಗೂ ಮಹತ್ವವಿರುವುದುಂಟು. ಪ್ರತಿಯೊಂದು ಊರಿಗೂ ಅನೇಕ ವರ್ಷಗಳ ಇತಿಹಾಸ ಮತ್ತು ಸಾಂಸ್ಕೃತಿಕ ಮೌಲ್ಯವಿರುತ್ತದೆ. ಸ್ಥಳನಾಮಗಳು ತಮ್ಮ ನಾಗರೀಕತೆಯ ಜೀವನಮೌಲ್ಯಗಳ ಆಕರಗಳೆಂದರೆ ತಪ್ಪಾಗಲಾರದು.

ವ್ಯಕ್ತಿ ಮತ್ತು ಸ್ಥಳಗಳಿಗೆ ದೈವಮೂಲದ ಹೆಸರುಗಳನ್ನು ಇಡುವ ಪರಂಪರೆ ಏಕೆ ಬಂತು? ಉದಾಹರಣೆಗೆ: ಸುಂಕಲಮ್ಮ, ಕರಿಯಮ್ಮ, ಕೆಂಚಮ್ಮ, ಗಾಳೆಮ್ಮ, ಗುಳೆಲಕ್ಕಮ್ಮ, ಮಾರೆಮ್ಮ, ದುರುಗಮ್ಮ, ಮಾಯಮ್ಮ, ತಾಯಪ್ಪ, ತಿಮ್ಮಪ್ಪ, ಯಂಕಪ್ಪ, ಯರಿಯಪ್ಪ, ಮಲ್ಲಪ್ಪ, ಶಿವಣ್ಣ, ರಾಮಕೃಷ್ಣ, ಪರಮೇಶ, ಗಣೇಶ, ರಾಘವೇಂದ್ರ, ತಿರುಮಲ, ಈಶ್ವರ, ಗಂಗ, ಪಾರ್ವತಿ, ಲಕ್ಷ್ಮಿ, ಸರಸ್ವತಿ, ಭುವನೇಶ್ವರಿ ಈ ಹೆಸರುಗಳ ಪೂರ್ವ ಮತ್ತು ಉತ್ತರ ಭಾಗದಲ್ಲಿ ಕುಲನಾಮ, ಅಡ್ಡ ಹೆಸರು, ಜಾತಿ, ವೃತ್ತಿನಾಮದ ಜೊತೆಗೆ ಇನ್ನೂ ಅನೇಕ ಮಾಹಿತಿಗಳನ್ನು ಕ್ಷೇತ್ರಾಧ್ಯಯನ ಮೂಲಕ ಕಂಡುಕೊಳ್ಳಬೇಕಿದೆ. ಹಾಗೆಯೇ ಸ್ಥಳನಾಮಗಳಾದ ಗಾಳೆಮ್ಮನಗುಡಿ, ಹುಲಿಗಿ, ಉಚ್ಚಂಗಿದುರ್ಗ, ಅಮ್ಮನಕೆರೆ, ಹಂಪಾಪಟ್ಟಣ, ಹಂಪಾಸಾಗರ, ತಾಯಮ್ಮನಕೊಳ್ಳ, ಲಕ್ಷ್ಮೀಪುರ, ಲಿಂಗದೇವನಹಳ್ಳಿ, ಸಿಂಗದೇವನಹಳ್ಳಿ, ತಿಮ್ಮಪ್ಪನಗುಡ್ಡ, ಅಂಜನಾದ್ರಿ, ಅಮರದೇವರಗುಡ್ಡ, ಬೈರದೇವನಹಳ್ಳಿ, ಗಂಗಲಾಪುರ, ಮುರಾರಿಪುರ ಮುಂತಾದ ದೈವಸಂಬಂಧೀ ವ್ಯಕ್ತಿ ಮತ್ತು ಸ್ಥಳನಾಮಗಳು ಹೇಗೆ ಬಂದವು ಎಂಬುದನ್ನು ಜನಪದರ, ಪಂಡಿತರ ಮತ್ತು ನಿಜನಿಷ್ಪತ್ತಿಯ ಮೂಲಕ ಇವುಗಳನ್ನು ಅಧ್ಯಯನ ಮಾಡಿ ವಿಶ್ಲೇಷಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶಗಳಲ್ಲಿ ಒಂದು. ಈ ಅಧ್ಯಯನವು ಬಳ್ಳಾರಿ ಪರಿಸರದಲ್ಲಿರುವ ಕೆಲ ತಾಲೂಕುಗಳ ಗೆಜೆಟಿಯರ್‌ಗಳನ್ನು, ಕಂದಾಯ ಇಲಾಖೆಯಲ್ಲಿರುವ ವ್ಯಕ್ತಿ ಮತ್ತು ಗ್ರಾಮನಾಮಗಳ ಪಟ್ಟಿಗಳನ್ನು, ಮತದಾರರ ಪಟ್ಟಿಯಲ್ಲಿರುವ ಮೂರು ತಲೆಮಾರಿನ ಹೆಸರುಗಳನ್ನು ಸರ್ಕಾರಿ ಶಾಲೆಗಳ ನೋಂದಾವಣಿ ಪುಸ್ತಕದಲ್ಲಿರುವ ಹಿಂದಿನ ಮತ್ತು ಪ್ರಸ್ತುತ ಹೆಸರುಗಳ ಮಾಹಿತಿಗಳನ್ನು ಜೊತೆಗೆ ಕ್ಷೇತ್ರಾಧ್ಯಯನ ಈ ಅಧ್ಯಯನಕ್ಕೆ ಪ್ರಮುಖ ಆಕರವಾಗಿದೆ.

### ೧.೧. ಅಧ್ಯಯನದ ಉದ್ದೇಶ

೧. ನಾಮಾಧ್ಯಯನಕ್ಕೆ ಸಂಬಂಧಿಸಿದಂತೆ ಕನ್ನಡದಲ್ಲಿ ಅಧ್ಯಯನಗಳಾಗಿರುವುದು ವಿರಳ. ವ್ಯಕ್ತಿ ಮತ್ತು ಸ್ಥಳನಾಮಗಳು ಎರಡಕ್ಕೂ ಸಂಬಂಧಿಸಿದಂತೆ ಬಳ್ಳಾರಿ ಪರಿಸರದಲ್ಲಿರುವ ಪ್ರಸಿದ್ಧ ದೇವ-ದೇವತೆಗಳಾದ ಕೊಟ್ಟೂರಿನ ಕೊಟ್ಟೂರೇಶ್ವರ, ಕುರುಗೋಡಿನ ಬಸವೇಶ್ವರ, ಚೇಳಗುರಿಕೆಯ ಯರ್ರಿತಾತ, ನಾಯಕನಹಟ್ಟಿಯ ತಿಪ್ಪೇಸ್ವಾಮಿ, ಬಳ್ಳಾರಿ ದುರುಗಮ್ಮ, ಹುಲಿಗಿಯ ಹುಲಿಗೆಮ್ಮ,

ಗಾಣಗಟ್ಟೆ ಮಾಯಮ್ಮ, ಬೆನ್ನಳ್ಳಿ ದುರುಗಮ್ಮ, ಗಾಳೆಮ್ಮನ ಗುಡಿಯ ಗಾಳೆಮ್ಮ ಹೀಗೆ ಇನ್ನೂ ಅನೇಕ ದೇವ-ದೇವತೆಗಳು ಹೇಗೆ ವ್ಯಕ್ತಿ ಮತ್ತು ಸ್ಥಳನಾಮಗಳ ಮೇಲೆ ಪ್ರಭಾವ ಬೀರಿವೆ ಮತ್ತು ಅದರ ಹಿಂದಿನ ನಂಬಿಕೆಯೇನು ಎಂಬುದನ್ನು ತಿಳಿಯಪಡಿಸುವುದು.

೨. ಕನ್ನಡ ವ್ಯಕ್ತಿ ಮತ್ತು ಸ್ಥಳನಾಮಗಳ ಬಳಕೆಯ ವಿವಿಧ ನೆಲೆಗಳನ್ನು ಅನುಲಕ್ಷಿಸಿ ಸಾಮಾಜಿಕ ಸಂರಚನೆಯೊಂದಿಗಿನ ಅಂತಸಂಬಂಧಗಳನ್ನು ಗುರುತಿಸುವುದು.

೩. ವ್ಯಕ್ತಿ ಮತ್ತು ಸ್ಥಳನಾಮಗಳನ್ನು ಕುರಿತು ಹೆಚ್ಚಾಗಿ ವರ್ಣನಾತ್ಮಕವಾಗಿ ಅಧ್ಯಯನಗಳಾಗಿವೆ. ಸಮಾಜೋಭಾಷಿಕ ನೆಲೆಯಿಂದ ಈ ಅಧ್ಯಯನವನ್ನು ಮಾಡುವುದು.

೪. ಆಧುನೀಕರಣದಿಂದಾಗಿ ಬದುಕಿನ ವಿಧಾನಗಳಲ್ಲಿನ ಪಲ್ಲಟಗಳು, ವ್ಯಕ್ತಿ ಮತ್ತು ಸ್ಥಳನಾಮಗಳ ಮೇಲೆ ಬೀರುವ ಪ್ರಭಾವಗಳನ್ನು ಪರಿಶೀಲಿಸಲಾಗುವುದು.

೫. ವ್ಯಕ್ತಿ ಮತ್ತು ಸ್ಥಳನಾಮಗಳಿಗೆ ದೈವನಾಮಗಳು ಆಕರಗಳಾಗುವಲ್ಲಿನ ಹಿಂದಿನ ಸಮಾಜೋ ಸಾಂಸ್ಕೃತಿಕ ಪ್ರೇರಣೆಗಳನ್ನು ಪರಿಶೀಲಿಸುವುದು.

೬. ದೈವಸಂಬಂಧಿ ಹೆಸರುಗಳು ಭಾಷಾಧ್ಯಯನದ ದೃಷ್ಟಿಯಿಂದ ಹೇಗೆ ಮಹತ್ವ ಪಡೆದಿವೆ ಎಂಬುದನ್ನು ವಿವರಿಸಲಾಗುವುದು.

## ೧.೨. ಅಧ್ಯಯನದ ವ್ಯಾಪ್ತಿ

ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಸಮಾಜೋಭಾಷಿಕ ಅಧ್ಯಯನ (ಬಳ್ಳಾರಿ ಪರಿಸರವನ್ನು ಅನುಲಕ್ಷಿಸಿ) ಎಂಬ ವಿಷಯಕ್ಕೆ ಬಳ್ಳಾರಿ ಪರಿಸರವನ್ನು ವ್ಯಾಪ್ತಿಯಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಇಲ್ಲಿ 'ಪರಿಸರ' ಎಂಬ ಪದವನ್ನು 'ಭೌಗೋಳಿಕ ಗಡಿಪ್ರದೇಶ' ಎಂಬರ್ಥದಲ್ಲಿ ಬಳಸಿರದೆ, ಸಾಂಸ್ಕೃತಿಕ ಗಡಿಪ್ರದೇಶ ಎಂದು ಪರಿಭಾವಿಸಿಕೊಳ್ಳಲಾಗಿದೆ.

ಈ ಪ್ರಬಂಧಕ್ಕೆ ಬಳ್ಳಾರಿ ಜಿಲ್ಲೆಯ ಏಳೂ ತಾಲೂಕುಗಳನ್ನು ಆಯ್ದುಕೊಂಡಿಲ್ಲ. ಇಲ್ಲಿ ಮಾದರಿಗಾಗಿ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಂಡೂರು, ಹೊಸಪೇಟೆ ಮತ್ತು ಕೂಡ್ಲಿಗಿ ಈ ನಾಲ್ಕು ತಾಲೂಕುಗಳಿಗೆ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಳ್ಳಲಾಗಿದೆ. ಕೆಲವು ಸಂದರ್ಭಗಳಲ್ಲಿ ಇತರ ತಾಲೂಕುಗಳ ಉದಾಹರಣೆಗಳನ್ನು ಮಾದರಿಗಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ರಾಜಕೀಯ ಗಡಿಗಳನ್ನು ಮೀರಿ ಭಾಷಿಕ, ಭೌಗೋಳಿಕ ವ್ಯಾಪ್ತಿಯನ್ನು ಗಮನಿಸಲಾಗಿದೆ. ಆಂಧ್ರಪ್ರದೇಶದ ಗಡಿಭಾಗಗಳ, ಉತ್ತರ ಹಾಗೂ ದಕ್ಷಿಣ ಕರ್ನಾಟಕದ ಕೆಲವು ಹೆಸರುಗಳನ್ನು ಮಾದರಿಗಾಗಿ ಬಳಸಿಕೊಳ್ಳಲಾಗಿದೆ.

## ೧.೩. ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನವು ಪ್ರಧಾನವಾಗಿ ಕ್ಷೇತ್ರಕಾರ್ಯವನ್ನು ನಡೆಸಿ ಇತರ ಪೂರಕ ಆಕರಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಸಾಮಾಜಿಕವಾಗಿ, ಭಾಷಿಕವಾಗಿ, ಪ್ರಾದೇಶಿಕವಾಗಿ ದೈವಮೂಲ

ವ್ಯಕ್ತಿ ಮತ್ತು ಸ್ಥಳನಾಮಗಳ ಸ್ವರೂಪ ಹಾಗೂ ಬಳಕೆಯ ಆಯಾಮಗಳನ್ನು ತಿಳಿದುಕೊಳ್ಳಲು ಸಮಾಜೋಭಾಷಿಕ ಅಧ್ಯಯನ ಶಿಸ್ತಿಗೆ ಚೌಕಟ್ಟನ್ನು ರೂಪಿಸಿಕೊಳ್ಳಲಾಗಿದೆ. ಪ್ರಶ್ನಾವಳಿ ಹಾಗೂ ಕ್ಷೇತ್ರಾಧ್ಯಯನದ ಮೂಲಕ ಮಾಹಿತಿಯನ್ನು ಪಡೆದುಕೊಂಡು ವಿಶ್ಲೇಷಣೆಗೊಳಪಡಿಸಲಾಗಿದೆ.

**೧.೪. ಅಧ್ಯಯನದ ಸ್ವರೂಪ**

ಅಧ್ಯಯನದ ಉದ್ದೇಶಕ್ಕನುಗುಣವಾಗಿ ಅಧ್ಯಾಯಗಳನ್ನು ಈ ರೀತಿ ಯೋಜಿಸಿಕೊಳ್ಳಲಾಗಿದೆ.

**ಅಧ್ಯಾಯ: ಒಂದು: ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ.**

ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಉದ್ದೇಶ, ವ್ಯಾಪ್ತಿ, ವೈಧಾನಿಕತೆಯನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಅಧ್ಯಯನದ ಸ್ವರೂಪದ ಭಾಗದಲ್ಲಿ ಅಧ್ಯಯನಕ್ಕೆ ಪೂರಕವಾಗಿ ಯೋಜಿಸಿಕೊಂಡ ಅಧ್ಯಾಯಗಳನ್ನು ಸಂಕ್ಷಿಪ್ತವಾಗಿ ಅರ್ಥೈಸಿಕೊಳ್ಳಲಾಗಿದೆ.

**ಅಧ್ಯಾಯ: ಎರಡು: ಈ ವರೆಗಿನ ಅಧ್ಯಯನಗಳ ಸಮೀಕ್ಷೆ**

ಈ ಅಧ್ಯಾಯದಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಬಂದಿರುವ ಪಿಎಚ್.ಡಿ., ಎಂ.ಫಿಲ್ ಪ್ರಬಂಧಗಳು, ಬಿಡಿ ಲೇಖನಗಳು, ಸಂಪಾದನ ಕೃತಿಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪೂರಕ ಎನ್ನುವುದರ ಜೊತೆಗೆ ಈ ಅಧ್ಯಯನಕ್ಕೆ ಭಿನ್ನ ಎಂಬುದನ್ನು ಅವಲೋಕಿಸಲಾಗಿದೆ.

**ಅಧ್ಯಾಯ: ಮೂರು : ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು–ಸ್ವರೂಪ ಮತ್ತು ವರ್ಗೀಕರಣ**

ಈ ಅಧ್ಯಾಯದಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳ ಸ್ವರೂಪವನ್ನು ತಿಳಿಸಿ, ವ್ಯಕ್ತಿನಾಮಗಳನ್ನು ಗ್ರಾಮದೇವತೆಗೆ ಸಂಬಂಧಿಸಿದ ವ್ಯಕ್ತಿನಾಮಗಳು, ಶಿಷ್ಟದೇವತೆಗಳಿಗೆ ಸಂಬಂಧಿಸಿದ ವ್ಯಕ್ತಿನಾಮಗಳ ಮತ್ತು ದೈವತ್ವಕ್ಕೇರಿದ ದಾರ್ಶನಿಕರಿಗೆ ಸಂಬಂಧಿಸಿದ ವ್ಯಕ್ತಿನಾಮಗಳೆಂದು ವರ್ಗೀಕರಿಸಿ ವಿವರಿಸಲಾಗಿದೆ. ಹಾಗೂ ಸ್ಥಳನಾಮಗಳನ್ನು ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಸ್ಥಳನಾಮಗಳೆಂದು ವರ್ಗೀಕರಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಾಯ: ನಾಲ್ಕು: ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳ ರಚನೆ**

ಈ ಅಧ್ಯಾಯದಲ್ಲಿ ವ್ಯಕ್ತಿನಾಮಗಳಿಗೆ ಸಂಬಂಧಿಸಿದಂತೆ ರಚನೆಯ ಕ್ರಮವನ್ನು ನೋಡಿ ವ್ಯಕ್ತಿನಾಮಗಳನ್ನು ಎಂಟು ವಿಧಗಳಲ್ಲಿ ವರ್ಗೀಕರಿಸಿ ವಿಶ್ಲೇಷಣೆ ಮಾಡಲಾಗಿದೆ. ಹಾಗೆಯೇ ಸ್ಥಳನಾಮಗಳ ರಚನೆಯ ಸ್ವರೂಪವನ್ನು ಗಮನಿಸಿ ಕ್ಯಾಂಪ್, ಹಳ್ಳಿ, ಗುಡ್ಡದಿಂದ ಕೊನೆಯಾಗುವ ಸ್ಥಳನಾಮಗಳನ್ನು ವಿವರಿಸಲಾಗಿದೆ.

**ಅಧ್ಯಾಯ: ಐದು: ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು–ಸಾಮಾಜಿಕ ಮತ್ತು ಮೌಖಿಕ ದೃಷ್ಟಿಕೋನ**

ಈ ಅಧ್ಯಾಯದಲ್ಲಿ ಬಳ್ಳಾರಿ ಪರಿಸರದ ಭೌಗೋಳಿಕ, ಚಾರಿತ್ರಿಕ, ಸಾಂಸ್ಕೃತಿಕ ಮತ್ತು ಭಾಷಿಕ ಹಿನ್ನೆಲೆಯ ಕುರಿತು ಹೇಳಲಾಗಿದೆ. ವ್ಯಕ್ತಿನಾಮಗಳ ಸಾಮಾಜಿಕ ಅಧ್ಯಯನದಲ್ಲಿ ಸಮುದಾಯಗಳ

ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳನ್ನು ವಿಶ್ಲೇಷಿಸಲಾಗಿದೆ. ಜೊತೆಗೆ ಇಸ್ಲಾಂ ಪರಿಸರದ ವ್ಯಕ್ತಿನಾಮಗಳನ್ನು ಗಮನಿಸಿ ಬಳ್ಳಾರಿ ಪರಿಸರದ ವ್ಯಕ್ತಿನಾಮ ದ್ವಿಪಗಳು ಹೆಸರುಗಳ ಮೇಲೆ ಹೇಗೆ ಪ್ರಭಾವ ಬೀರಿವೆ ಎಂಬುದನ್ನು ವಿವರಿಸಲಾಗಿದೆ. ಸ್ಥಳನಾಮಗಳ ಸಾಮಾಜಿಕ ದೃಷ್ಟಿಕೋನದಲ್ಲಿ ಜಾತಿಯಾಧಾರಿತ ಸ್ಥಳನಾಮಗಳನ್ನು ಉದಾಹರಿಸಲಾಗಿದೆ. ಮೌಖಿಕ ದೃಷ್ಟಿಕೋನದಲ್ಲಿ ಐತಿಹ್ಯ, ಗಾದೆ, ಒಗಟು, ಒಡಪು ಮತ್ತು ಜನಪದರ ಹಾಡುಗಳಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳನ್ನು ಗುರುತಿಸಿ, ವಿಶ್ಲೇಷಣೆ ಮಾಡಲಾಗಿದೆ.

**ಅಧ್ಯಾಯ: ಆರು: ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಆಧುನಿಕತೆ**

ಈ ಅಧ್ಯಾಯದಲ್ಲಿ ಪರಂಪರೆ, ಜಾತಿ, ವೃತ್ತಿ, ದೈವ, ಚರಿತ್ರೆ, ಸಾಮಾಜಿಕ ಆಯಾಮಗಳು, ಲಿಂಗಸಂಬಂಧಿ ಆಯಾಮಗಳ ಮೂಲಕ ವ್ಯಕ್ತಿನಾಮಗಳು ಆಧುನಿಕತೆಯಿಂದ ಹೇಗೆ ಬದಲಾವಣೆಗೊಳಪಟ್ಟಿವೆ ಹಾಗೂ ಸ್ಥಳನಾಮಗಳು ಪ್ರಭುತ್ವ ಅನ್ಯ ಭಾಷೆಗಳು ಮತ್ತು ಸಾಮಾಜಿಕ ಕಾರಣಗಳಿಂದ ಹೇಗೆ ಬದಲಾವಣೆಗೆ ಸರಿದಿವೆ ಎಂಬುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಲಾಗಿದೆ.

**ಅಧ್ಯಾಯ: ಏಳು: ಸಮಾರೋಪ**

ಈ ಅಧ್ಯಾಯದಲ್ಲಿ ಒಟ್ಟಾರೆ ಅಧ್ಯಯನದ ಮೂಲಕ ಕಂಡುಕೊಂಡ ಫಲಿತಗಳು, ಪ್ರಶ್ನಾವಳಿ, ವಕ್ತೃವಿವರ, ಪರಾಮರ್ಶನ ಗ್ರಂಥಗಳ ಸೂಚಿಯನ್ನು ನೀಡಲಾಗಿದೆ.



# ಅಧ್ಯಾಯ: ಎರಡು

# ವ್ಯಕ್ತಿ ಮತ್ತು ಸ್ಥಳನಾಮಗಳ ಕುರಿತು ಈವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಪಶ್ಚಿಮದ ರಾಷ್ಟ್ರಗಳಲ್ಲಿ ಶತಮಾನದ ಹಿಂದಿನಿಂದಲೂ ವ್ಯಕ್ತಿನಾಮ, ಸ್ಥಳನಾಮ ಅಧ್ಯಯನಗಳು ನಡೆದು ಬಂದಿರುವುದು ತಿಳಿದುಬರುತ್ತದೆ. ಭಾಷೆಗಳಲ್ಲಿ ಅಲ್ಲಲ್ಲಿ ವ್ಯಕ್ತಿನಾಮದ ಬಗೆಗೆ ಅಧ್ಯಯನಗಳು ನಡೆದಿರಬಹುದಾದರೂ ಆ ಕುರಿತಂತೆ ಮಾಹಿತಿ ಕಡಿಮೆ ಎನ್ನಬಹುದು. ಕನ್ನಡದಲ್ಲಿ ನಾಮಾಧ್ಯಯನ ಕಾರರು ಬಹಳಷ್ಟು ಸಂದರ್ಭಗಳಲ್ಲಿ ಸ್ಥಳನಾಮಗಳ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಕೆಲವು ಕಡೆ ಮಾತ್ರ ವ್ಯಕ್ತಿನಾಮಗಳ ಬಗೆಗೆ ಪ್ರಸ್ತಾಪಿಸಿದ್ದಾರೆ. ವ್ಯಕ್ತಿನಾಮಗಳ ಕುರಿತಂತೆ, ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು ಎನ್ನುವ ಒಂದು ಪಿಎಚ್.ಡಿ, ಪ್ರಬಂಧದ ಅಧ್ಯಯನವು ನನ್ನ ಗಮನಕ್ಕೆ ಬಂದಿದೆ. ಕೆ.ವಿ. ನಾರಾಯಣ ಸಂಪಾದಿತ "ವ್ಯಕ್ತಿನಾಮಗಳು: ಸ್ವರೂಪ ವಿಶ್ಲೇಷಣೆ" ಎಂಬುದು ವ್ಯಕ್ತಿನಾಮಗಳ ಬಗೆಗಿರುವ ಇಡಿಯಾದ ಪುಸ್ತಕವಾಗಿದೆ. ಜೊತೆಗೆ ಸಂಶೋಧನಾತ್ಮಕ ಅಧ್ಯಯನ ಮಾದರಿಯಲ್ಲಿ ಮೂಡಿಬಂದಿರುವ ಮೊದಲ ಕೃತಿಯಾಗಿದೆ. ಇದರಲ್ಲಿ ಒಟ್ಟು ಆರು ಲೇಖನಗಳಿದ್ದು, ಹೆಸರು ತಾತ್ವಿಕತೆ ಎಂಬ ಲೇಖನದಲ್ಲಿ ಕೆ.ವಿ. ನಾರಾಯಣ ಅವರು ಧಾರ್ಮಿಕ ಆವರಣದಲ್ಲಿ ಹಲವು ದೈವಗಳಿಗೆ ನೂರಾರು ಹೆಸರುಗಳಿರುತ್ತವೆ. ಆ ಹೆಸರುಗಳ ವ್ಯಾಖ್ಯೆ ಬಹು ದೀರ್ಘವಾದ ಸಂಕಥನವನ್ನು ನಿರ್ಮಿಸುತ್ತದೆ. ತ್ರಿಪುರಾರಿ; ಮಧುಸೂಧನ, ಸಹಸ್ರಾಕ್ಷ, ವಹ್ನಿಕೇಶಿ ಅಂಬುಜನಾಭ ಮುಂತಾದವು ಹೆಸರುಗಳಾದರೆ, ಅವು ವ್ಯಾಖ್ಯಾನಗಳಾಗಿ ಕೆಲಸ ಮಾಡುತ್ತವೆ. ವಿವಿಧ ಸಂಕಥನಗಳನ್ನು ಪ್ರತಿಪಾದಿಸುತ್ತವೆ ಎಂದಿದ್ದಾರೆ.

ವ್ಯಕ್ತಿನಾಮ: ಆಕರಗಳು ಎನ್ನುವ ಲೇಖನದಲ್ಲಿ ಅಶೋಕಕುಮಾರ ರಂಜೇರೆಯವರು ಚರಿತ್ರೆಯುದ್ದಕ್ಕೂ ಮತ್ತು ಕಾವ್ಯ, ಪುರಾಣ, ಶಾಸನಗಳಲ್ಲಿ ದೊರೆಯುವ ವ್ಯಕ್ತಿನಾಮಗಳನ್ನು ಗಮನಿಸಿದರೆ, ವಿಶಿಷ್ಟವಾದ ಹೆಸರುಗಳು ಕಂಡುಬರುತ್ತವೆ ಎಂದು ಹೇಳಿ ಅವುಗಳನ್ನು ೧೦ ವಿಧಗಳಲ್ಲಿ ವರ್ಗೀಕರಿಸಿ ಸ್ಥೂಲವಾಗಿ ವಿವರಿಸಿದ್ದಾರೆ. 'ವ್ಯಕ್ತಿನಾಮಗಳು ರಾಚನಿಕ ಅಧ್ಯಯನ' ಎಂಬ ಲೇಖನದಲ್ಲಿ ಸಾಂಬಮೂರ್ತಿಯವರು ವ್ಯಕ್ತಿನಾಮಗಳನ್ನು ಗುರುತಿಸಿಕೊಂಡು ನಂತರ ರಾಚನಿಕ ವಿಶ್ಲೇಷಣೆ

ಮಾಡಿದ್ದಾರೆ. ವ್ಯಕ್ತಿನಾಮಗಳು: ಚಾರಿತ್ರಿಕ ನೆಲೆ ಎನ್ನುವ ಲೇಖನದಲ್ಲಿ ಪಿ. ಮಹಾದೇವಯ್ಯ ಅವರು ವ್ಯಕ್ತಿನಾಮಗಳ ಅಧ್ಯಯನವನ್ನು ಚಾರಿತ್ರಿಕ ನೆಲೆಯಿಂದ ಅಧ್ಯಯನ ಮಾಡುವುದಕ್ಕಿಂತ ಧಾರ್ಮಿಕ ನೆಲೆಯಿಂದ ಶೋಧಿಸುವುದು ಯುಕ್ತ ಎಂದಿದ್ದಾರೆ. ವ್ಯಕ್ತಿನಾಮಗಳು: ಸಾಮಾಜಿಕ ನೆಲೆ ಎನ್ನುವ ಲೇಖನದಲ್ಲಿ ಡಿ. ಪಾಂಡುರಂಗಬಾಬು ಅವರು ವ್ಯಕ್ತಿನಾಮಗಳು ವ್ಯಕ್ತಿ ಮತ್ತು ಸಮಾಜದ ನಡುವಿನ ಕೊಂಡಿಯಾಗಿ ಹೇಗೆ ಕೆಲಸ ಮಾಡುತ್ತವೆಂಬುದನ್ನು ಜಾತಿ, ವೃತ್ತಿ, ಸ್ತರ ಸೂಚಕ ಅಂಶಗಳನ್ನು ಸ್ಥೂಲವಾಗಿ ವಿವರಿಸುವುದರ ಮೂಲಕ ಹೇಳಿ ವ್ಯಕ್ತಿನಾಮಗಳು ಆಧುನಿಕರಣದಿಂದ ಬದಲಾವಣೆ ಯಾಗುವುದನ್ನು ತಿಳಿಸಿದ್ದಾರೆ. ಎಸ್.ಎಸ್. ಅಂಗಡಿಯವರು ಕರ್ನಾಟಕ ಕುಲನಾಮಗಳ ಬಗೆಗೆ ಸ್ಥೂಲವಾದ ಮಾಹಿತಿಯನ್ನು ಒದಗಿಸಿದ್ದಾರೆ. ಒಟ್ಟಾರೆಯಾಗಿ ವ್ಯಕ್ತಿನಾಮಗಳ ಬಗೆಗೆ ಅಧ್ಯಯನ ಮಾಡುವವರಿಗೆ ಈ ಕೃತಿಯು ಮಹತ್ವದ್ದೆನಿಸುತ್ತದೆ.

ಚಿದಾನಂದಮೂರ್ತಿ ಎಂ. ಅವರ 'ಕರ್ನಾಟಕ ವ್ಯಕ್ತಿನಾಮಗಳು' (ವಾಗರ್ಥ) ಕೃತಿಯಲ್ಲಿರುವ ಚಿಂತನೆಗಳು ವ್ಯಕ್ತಿನಾಮಾಧ್ಯಯನಕಾರರಿಗೆ ದಾರಿಯನ್ನು ತೋರಿಸುತ್ತದೆ. ಅವರು ಹೆಸರುಗಳಲ್ಲಿ ಐದು ಬಗೆಯನ್ನು ಗುರುತಿಸಿ, ದೈವಮೂಲ ಹೆಸರುಗಳಲ್ಲಿ ಭಾರತೀಯ ದೈವಗಳನ್ನು ಹೆಸರಿಸುತ್ತಾ ದೈವಗಳಿಗೆ ಸಮಾನವಾದ ಧಾರ್ಮಿಕ ನಾಯಕರಾದ ಬಸವ, ಸಿದ್ಧರಾಮ, ಮಧ್ವ, ರಾಮಾನುಜ, ವಾದಿರಾಜ, ಶಂಕರ–ಪವಿತ್ರ ಕ್ಷೇತ್ರಗಳಾದ ಕೊಟ್ಟೂರು, ಎಡೆಯೂರು, ಉಜ್ಜಯಿನಿಗಳನ್ನು ಹೆಸರಿಸಿದ್ದಾರೆ. ಬೇರೆ ಬೇರೆ ದೈವಗಳಿಗೋ, ಮಠಗಳಿಗೋ ಹರಸಿಕೊಂಡು ಮಗು ಹುಟ್ಟಿದರೆ, ಆ ಮಗುವಿಗೆ ಆ ದೈವದ ಹೆಸರನ್ನು ಇಡುವುದು ರೂಢಿ ಎಂದು ಹಲವು ದೈವಗಳನ್ನು ಉದಾಹರಣೆ ಕೊಟ್ಟು ವಿಶ್ಲೇಷಿಸಿದ್ದಾರೆ. ಎಂ.ಎಂ. ಕಲಬುರ್ಗಿಯವರ 'ಕನ್ನಡ ನಾಮವಿಜ್ಞಾನ' ಕೃತಿಯು ಅಧ್ಯಯನಕಾರರಿಗೆ ಹೊಸ ಸುಳುಹುಗಳನ್ನು ನೀಡಿ ನಾಮಾಧ್ಯಯನಕ್ಕೆ ಪ್ರೇರೇಪಿಸುತ್ತದೆ.

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' (೨೦೦೯) ಎಂಬ ಪಿಎಚ್.ಡಿ. ಮಹಾಪ್ರಬಂಧವು ವ್ಯಕ್ತಿನಾಮಾಧ್ಯಯನಕ್ಕೆ ಸಣ್ಣಪಾಪಯ್ಯ ಅವರು ಒಂದು ಚೌಕಟ್ಟನ್ನು ರೂಪಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಏಳು ಅಧ್ಯಾಯಗಳಿವೆ. 'ವ್ಯಕ್ತಿನಾಮಗಳ ಸಾಮಾಜಿಕ ಅಧ್ಯಯನ' ಎನ್ನುವ ಪ್ರಮುಖ ಅಧ್ಯಾಯದಲ್ಲಿ ಬ್ರಾಹ್ಮಣ, ಲಿಂಗಾಯತ, ರೆಡ್ಡಿ, ಕುರುಬ, ಗೊಲ್ಲ, ವೈಶ್ಯ, ಮರಾಠಿ, ವಿಶ್ವಕರ್ಮ, ಲಂಬಾಣಿ ಜಾತಿಗಳು ಸಮಾಜದಲ್ಲಿ ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ಕ್ಷೇತ್ರಕಾರ್ಯ ಮಾಡುವುದರ ಮೂಲಕ ವಿವರಿಸಿದ್ದಾರೆ. ವ್ಯಕ್ತಿನಾಮಗಳು ಬಳಕೆಯಲ್ಲಿ ಹೇಗೆ ವಿವಿಧ ರೂಪವನ್ನು ಪಡೆಯುತ್ತವೆ, ವ್ಯಕ್ತಿನಾಮಗಳಲ್ಲಿ ಸಾಂಸ್ಕೃತಿಕ ದೃಷ್ಟಿಕೋನವನ್ನು ಯಾವ ರೀತಿಯಲ್ಲಿ ನೋಡಬಹುದು ಎಂಬುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಿದ್ದಾರೆ.

'ವ್ಯಕ್ತಿನಾಮಗಳು: ಆಧುನಿಕತೆ' ಎಂಬ ಕೊನೆಯ ಅಧ್ಯಾಯದಲ್ಲಿ ವಿಜ್ಞಾನ, ತಂತ್ರಜ್ಞಾನದಿಂದ ಬದಲಾಗುತ್ತಿರುವ ಸಮಾಜದಲ್ಲಿ ವ್ಯಕ್ತಿನಾಮಗಳು ತನ್ನ ಸ್ವರೂಪದಲ್ಲಿ ಹೇಗೆ ಬದಲಾಗುತ್ತವೆ ಹೆಸರಿಡುವ ಇಂದಿನ ಜನರ ದೃಷ್ಟಿಕೋನ ಎಂತಹುದು ಎನ್ನುವುದನ್ನು ಸಂಶೋಧಕರು ವಿವರಿಸಿದ್ದಾರೆ.

ಒಟ್ಟಾರೆಯಾಗಿ ಈ ಪಿಎಚ್.ಡಿ. ಮಹಾಪ್ರಬಂಧವು ವ್ಯಕ್ತಿನಾಮಾಧ್ಯಯನಕ್ಕೆ ಒಂದು ಚೌಕಟ್ಟನ್ನು ರೂಪಿಸಿಕೊಟ್ಟಿದೆ. ಸಂಶೋಧಕರು ಈ ಅಧ್ಯಯನಕ್ಕೆ ಚಿತ್ರದುರ್ಗದ ಕೇವಲ ಮೂರು ತಾಲ್ಲೂಕುಗಳನ್ನು ಮಾತ್ರ ಬಳಸಿಕೊಂಡಿದ್ದಾರೆ. ಎಲ್ಲ ತಾಲೂಕುಗಳನ್ನು ಬಳಸಿಕೊಂಡಿದ್ದರೆ, ಮಹಾಪ್ರಬಂಧಕ್ಕೆ ಇನ್ನಷ್ಟು ಗಟ್ಟಿತನ ಬರುತ್ತಿತ್ತು ಎಂದೆನಿಸುತ್ತದೆ. ಈ ಮೇಲಿನ ಕೃತಿಗಳಲ್ಲದೆ, ವ್ಯಕ್ತಿನಾಮಗಳ ಬಗೆಗೆ ಲೇಖನ ಮಾದರಿಯ ಬಿಡಿಬಿಡಿ ಅಧ್ಯಯನಗಳು ನಡೆದಿವೆ ಈ ಎಲ್ಲಾ ಸಂಗತಿಗಳು ವ್ಯಕ್ತಿನಾಮಾಧ್ಯಯನಕ್ಕೆ ಪ್ರೇರಣೆಯಾಗಿವೆ.

ಶಾಸ್ತ್ರೀಯವಾಗಿ ನಡೆಯಬೇಕಾದ ಅಧ್ಯಯನಗಳಲ್ಲಿ ಸ್ಥಳನಾಮ ಅಧ್ಯಯನವೂ ಒಂದು. ಬಹುಶಿಸ್ತೀಯ ಅಧ್ಯಯನದ ನೆಲೆಯಲ್ಲಿ ಸ್ಥಳನಾಮಗಳನ್ನು ವಿಶ್ಲೇಷಿಸುತ್ತಾ ಹೋದಂತೆಲ್ಲಾ ಅವುಗಳ ಸಾಂಸ್ಕೃತಿಕ, ಜಾನಪದೀಯ ಹಾಗೂ ಭಾಷಿಕ ಮಹತ್ವಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಇತ್ತೀಚಿನ ದಿನಗಳಲ್ಲಿ ಪ್ರಪಂಚದಾದ್ಯಂತ ಹೆಚ್ಚು ಜನರ ಕುತೂಹಲವನ್ನು ಕೆರಳಿಸಿ, ತನ್ನ ಕಡೆಗೆ ಆಕರ್ಷಿಸಿರುವ ಸ್ಥಳನಾಮ ಅಧ್ಯಯನವು ಮಾನವನ ಬದುಕಿನಲ್ಲಿ ಒಂದು ಅನಿವಾರ್ಯ ಪ್ರಕ್ರಿಯೆಯಾಗಿ ಬೆಳೆದುಬಂದಿದೆ. ಇಂಥ ಸ್ಥಳನಾಮ ಅಧ್ಯಯನವನ್ನು ವೈಜ್ಞಾನಿಕ ಹಿನ್ನೆಲೆಯಲ್ಲಿ ಪರಿಶೀಲಿಸುವುದಲ್ಲದೆ ಅದರ ಮಹತ್ವವನ್ನು ಗುರುತಿಸಿ ಅರ್ಥೈಸುವುದು ಸ್ಥಳನಾಮ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

'ಅರ್ಥವಿಲ್ಲದ ಸ್ಥಳನಾಮವಿಲ್ಲ' ಎಂಬ ಹಿರಿಯರ ನಿರ್ಣಯದಂತೆ, ಕರ್ನಾಟಕದ ಒಂದೊಂದು ಊರಿನ ಹೆಸರುಗಳೂ, ಒಂದೊಂದು ಪ್ರದೇಶದ, ಸೀಮೆಯ ಹೆಸರುಗಳೂ ಕೂಡ ವೈವಿಧ್ಯತೆಯಿಂದ ಉಲ್ಲೇಖಗೊಂಡಿವೆ. ಈ ಹಿನ್ನೆಲೆಯಲ್ಲಿ ಸ್ಥಳನಾಮಗಳ ಅಧ್ಯಯನದ ವಿವರಣಾತ್ಮಕ ನೆಲೆಗಳನ್ನು ಗುರುತಿಸಬಹುದು. ಕರ್ನಾಟಕ ಪ್ರಾಂತ್ಯವನ್ನು ಕದಂಬರಿಂದ ಹಿಡಿದು, ಮೈಸೂರು ಒಡೆಯರವರೆಗೂ ಆಳಿದ್ದಾರೆ. ಕವಿರಾಜಮಾರ್ಗದ ಉಲ್ಲೇಖದ ಪ್ರಕಾರ ಕನ್ನಡನಾಡು ಎಂಬುದು ದಕ್ಷಿಣದ ಕಾವೇರಿಯಿಂದ ಹಿಡಿದು ಗೋದಾವರಿಯವರೆಗಿದ್ದ ನಾಡು. ನಂಜುಂಡ ಕವಿಯ ರಾಮನಾಥ ಚರಿತ(ಸು. ೧೫೫೦) ದಲ್ಲಿಯ ಉಲ್ಲೇಖವೂ ಈ ವಿಷಯವನ್ನು ಘೋಷಿಸುತ್ತದೆ. ಕವಿರಾಜಮಾರ್ಗದ ಕರ್ತೃ ಹೇಳುವ ಪ್ರಕಾರ ಬಿಜಾಪುರ ಜಿಲ್ಲೆಯ ಪಟ್ಟದಕಲ್ಲು, ರಾಯಚೂರು ಜಿಲ್ಲೆಯ ಲಕ್ಷ್ಮೇಶ್ವರ ಮತ್ತು ಬೆಳಗಾಂ ಜಿಲ್ಲೆಯ ಒಕ್ಕುಂದ ಇವುಗಳ ನಡುವೆ ಇದ್ದ ಪ್ರದೇಶ ಕನ್ನಡ ನಾಡಿನ ತಿರುಳು. ಇವುಗಳ ಗುರುತಿಸುವಿಕೆ ಸಾಧ್ಯವಾಗಿರುವುದು ಶಾಸನಗಳು, ಸಾಹಿತ್ಯ ಮತ್ತು ಸ್ಥಳನಾಮಗಳ ಆಧಾರದ ಮೇಲೆ ಎಂಬುದು ಪ್ರಮುಖವಾದ ಸಂಗತಿಯಾಗಿದೆ.

ಸ್ಥಳನಾಮಗಳ ಅಧ್ಯಯನ ವೈಜ್ಞಾನಿಕವಾಗಿ ಪ್ರಾರಂಭಗೊಂಡದ್ದೇ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ, ಎರಡೂವರೆ ಸಾವಿರ ವರ್ಷಗಳ ಹಿಂದೆಯೇ ಪಾಣಿನಿ ಸ್ಥಳನಾಮಗಳ ಸಾಂಸ್ಕೃತಿಕ ಲಕ್ಷಣಗಳನ್ನು ಗುರುತಿಸಿದ್ದ. ಅಲ್ಲಿಂದೀಚೆಗೆ ಸ್ಥಳನಾಮಗಳ ಉಲ್ಲೇಖ ಸಾಹಿತ್ಯ ಗ್ರಂಥಗಳಲ್ಲಿ ಕಾಣಿಸಿ ಕೊಂಡರೂ, ಸರ್ಕಾರಿ ಕಡತ ಹಾಗೂ ದಾಖಲೆಗಳಲ್ಲಿ ಅವುಗಳ ಪಟ್ಟಿ ಪ್ರಕಟಗೊಂಡರೂ, ಅವುಗಳ ಉಪಯುಕ್ತತೆಯನ್ನು ಕಂಡುಕೊಂಡವರಿರಲಿಲ್ಲ. ೧೭೬೮ರಲ್ಲಿ ಜರ್ಮನಿಯ ಗಾಟ್‌ಫ್ರೀಡ್ ವಿಲ್‌ಹೆಲ್ಮ್

ಲಿಬ್ನೀಜ್ (Gottfried Whilhelm Libniz) ಎಂಬ ವಿದ್ವಾಂಸ ಸ್ಥಳನಾಮಗಳು ಅರ್ಥಗರ್ಭಿತವಾದವುಗಳೆಂದೂ, ಅವುಗಳ ಪ್ರಾಚೀನ ರೂಪಗಳಿಂದ ಅರ್ಥವನ್ನು ನಿರ್ಣಯಿಸಬಹುದೆಂದೂ ಪ್ರಪ್ರಥಮವಾಗಿ ಘೋಷಿಸಿದನು. ಆ ಹೊತ್ತಿಗಾಗಲೇ ಯುರೋಪಿನ ಗ್ರಾಮಗಳ ಪ್ರಾಚೀನ ನಾಮಗಳಲ್ಲಿ ಹಲವು ಕಣ್ಮರೆಯಾಗಿದ್ದವು. ಇಂಥ ಪರಿಸ್ಥಿತಿಯಲ್ಲಿ ಸ್ಥಳನಾಮ ವಿಜ್ಞಾನದ ವಿಕಾಸಕ್ಕೆ ಭದ್ರವಾದ ಬುನಾದಿ ಹಾಕಿದವನು ಇಂಗ್ಲೆಂಡಿನ ಸ್ಕೀಟ್ ಮಹಾಶಯ. ಜರ್ಮನಿಯಲ್ಲಿ ಫಾರ್ ಸ್ಟೀಮನ್ (Forstman), ಫ್ರಾನ್ಸಿನಲ್ಲಿ ಲಾಂಗ್ಮನ್ (Longman), ನಾರ್ವೆಯಲ್ಲಿ ರೈ (Ryah) ಮತ್ತು ಸ್ವೀಡನ್‌ನಲ್ಲಿ ನೋರಿನ್ (Noreen) ಆ ಕ್ಷೇತ್ರದಲ್ಲಿ ಕೆಲಸ ಮಾಡಿದವರಾಗಿದ್ದಾರೆ. ಸ್ಥಳನಾಮ ಸಂಶೋಧನೆಯಲ್ಲಿ ಹೆಸರುಗಳ ಐತಿಹಾಸಿಕ ವಿಕಾಸಕ್ಕೂ, ಭೌಗೋಳಿಕ ಪರಿಸ್ಥಿತಿ ಸನ್ನಿವೇಶಗಳ ವಿವರಣೆಗೂ ಗಮನ ನೀಡತಕ್ಕದ್ದೆಂದು ಅವರು ಸ್ಪಷ್ಟಪಡಿಸಿದರು. ಅವುಗಳ ಅಧ್ಯಯನದಿಂದ ಸಾಂಸ್ಕೃತಿಕ ಲಾಭ ಮಾತ್ರವಲ್ಲ, ಹಲವಾರು ಜ್ಞಾನಶಾಖೆಗಳಿಗೆ ಪ್ರಯೋಜನವಾಗುತ್ತದೆಯೆಂದು ಅವರು ಸೂಚಿಸಿದರು.

ಬೆಲ್ಜಿಯಂನ ಲೂವೈನಿನಲ್ಲಿ ೧೯೨೧ರಲ್ಲಿ ಸ್ಥಾಪನೆಗೊಂಡ ಆಂಗ್ಲ ಸ್ಥಳನಾಮ ಸಂಶೋಧನ ಮಂಡಳಿ, ಸ್ಥಳನಾಮ ವಿಜ್ಞಾನದಲ್ಲಿ ಪ್ರಮುಖವಾದ ಮೈಲುಗಲ್ಲಾಗಿ ಉಳಿದುಕೊಂಡಿದೆ. ಭಾಷಾ ವಿಜ್ಞಾನಿಗಳ, ಇತಿಹಾಸಕಾರರ, ಇನ್ನಿತರ ಮಾನವಿಕ ಶಾಸ್ತ್ರಜ್ಞರ ನೆರವಿನಿಂದ ಸ್ಥಳನಾಮ ಅಧ್ಯಯನಕ್ಕೆ ಈ ಸಂಸ್ಥೆಯು ವೈಜ್ಞಾನಿಕ ಸ್ವರೂಪವನ್ನು ನೀಡಿತು. ಸಾಂಸ್ಕೃತಿಕ ಚರಿತ್ರೆಯ ರಚನೆಗೆ ಸ್ಥಳನಾಮ ಅಧ್ಯಯನವು ಅನಿವಾರ್ಯ ಮತ್ತು ಅದರ ಪ್ರಯೋಜನವೇನೆಂಬುದರ ಬಗೆಗೆ ಖಚಿತವಾಗಿ ಸ್ಪಷ್ಟಪಡಿಸುವಲ್ಲಿ ಗಣನೀಯ ಸೇವೆಯನ್ನು ಮಾಡಿತು. ಪ್ರಾದೇಶಿಕವಾರು ಸ್ಥಳನಾಮಗಳ ಅಧ್ಯಯನದಿಂದ, ಸ್ಥಳೀಯ ಭಾಷೆ, ಸಮಾಜ, ಸಂಸ್ಕೃತಿಯ ತಿಳುವಳಿಕೆಗೆ ಪ್ರಮುಖ ಆಕರ ಸಿಗುತ್ತದೆಂಬ ಮಾಹಿತಿಯನ್ನು ಪ್ರಚಾರ ಮಾಡುವ ಮೂಲಕ ಈ ಸಂಸ್ಥೆ ನಾಮಾಧ್ಯಯನಕ್ಕೆ ಮೀಸಲಾಗಿ ನಿಂತಿತು. ಈ ಸಂಸ್ಥೆಯಿಂದ ಆಂಗ್ಲ ಸ್ಥಳನಾಮ ನಿಘಂಟು ರಚನೆಗೊಂಡಿತು. ಇದು ಪ್ರಯೋಜನಕಾರಿ ಕೋಶವಾಗಿದೆ. ಎಫ್.ಎಂ. ಸ್ಟೆಂಟಾನ್, ಎ.ಎಚ್. ಸ್ಮಿತ್ ಮತ್ತು ಪಿ.ಎಚ್. ರೀನಿ ಈ ಕ್ಷೇತ್ರದಲ್ಲಿ ದುಡಿದವರಾಗಿದ್ದಾರೆ.

ಇತರ ಯುರೋಪಿಯನ್ ರಾಷ್ಟ್ರಗಳಲ್ಲಿ, ಮುಖ್ಯವಾಗಿ ಜರ್ಮನಿ, ಫ್ರಾನ್ಸ್, ಡೆನ್ಮಾರ್ಕ್, ನಾರ್ವೆಗಳಲ್ಲಿ ಸ್ಥಳನಾಮಗಳ ಅಧ್ಯಯನ ಸರಾಗವಾಗಿ ನಡೆದಿದೆ. ಆದರೆ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಆಗಿರುವ ಕೆಲಸವನ್ನು ಗಮನಿಸಿದಾಗ ಆಶ್ಚರ್ಯವಾಗುತ್ತದೆ. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಜಾನ್ ಹೆಕ್‌ವೆಲ್ಡರ್ (John Hekwelder) ಮತ್ತು ಹೆನ್ರಿ ಆರ್. ಸ್ಕೂಲ್‌ಕ್ರ್ಯಾಪ್ಟ್ ಎನ್ನುವವರು ಆದಿವಾಸಿಗಳ ಸ್ಥಳನಾಮಗಳನ್ನು ಕುರಿತು ವಿಶ್ಲೇಷಣೆ ನಡೆಸಿದರು. ೧೮೭೨ರಲ್ಲಿ ಪ್ರಕಟಗೊಂಡ 'ನಾಗರಿಕತೆಯ ಪ್ರಗತಿಯಲ್ಲಿ ನಾನಾ ನಾಮಗಳ ಪಾತ್ರ' ಎಂಬ ಲೇಖನವನ್ನು ಬರೆದರು. ಫ್ರಾನ್ಸಿನ ಇ. ಸಾಲ್ವರ್ತೆ ಇತಿಹಾಸ, ಭೂಗೋಳ ಮತ್ತು ಭಾಷೆಗಳ ಅಧ್ಯಯನದಲ್ಲಿ ಸ್ಥಳನಾಮ ವಿಜ್ಞಾನದ ಪಾತ್ರ ಮಹತ್ತರವಾದುದು ಎಂಬುದನ್ನು ಸ್ಪಷ್ಟಪಡಿಸಿದನು. ಯುರೋಪಿನ ವಿದ್ವಾಂಸರಿಗೆ ಸಂಸ್ಕೃತ ಭಾಷೆ ಪರಿಚಯವಾಗಿ, ಸಮಸ್ತ ಭಾಷೆಗಳ ತೌಲನಿಕ ಅಧ್ಯಯನ ಒಂದು ಹಂತಕ್ಕೆ ಮುಟ್ಟಿದ ನಂತರ ಸ್ಥಳನಾಮಗಳ ಅಧ್ಯಯನಕ್ಕೆ ಪುರಸ್ಕಾರ ದೊರೆತು,

ವೈಜ್ಞಾನಿಕ ಸಂಶೋಧನೆ ಆರಂಭವಾಯಿತೆನ್ನಬಹುದು. ಈ ಶತಮಾನದ ಪೂರ್ವಭಾಗದಲ್ಲಿ ವಾರನ್ ಅಪ್‌ಹ್ಯಾಮ್, ಲೂಯಿಸ್ ಪೌಂಡ್ ಮೊದಲಾದವರ ಮಾರ್ಗದರ್ಶನ ಪ್ರೋತ್ಸಾಹಗಳಿಂದ ಪ್ರಾರಂಭವಾದ ಈ ಕಾರ್ಯವು ಎಲ್ಲ ಕಡೆ ವ್ಯಾಪಿಸಿ ವಿಶ್ವವಿದ್ಯಾನಿಲಯಗಳ ವಿದ್ವಾಂಸರು ಮಾತ್ರವಲ್ಲ, ಸಂಶೋಧನೆಯಲ್ಲಿ ಆಸಕ್ತಿವುಳ್ಳವರೂ, ಹವ್ಯಾಸಿಗಳೂ ಸಹಾ ಈ ಕ್ಷೇತ್ರದಲ್ಲಿ ದುಡಿದರು. ೧೯೨೪ರಲ್ಲಿ ಲಿಲಿಯನ್ ಲಂಡರ್ ಫಿಟ್ಜ್ ಪ್ಯಾಟ್ರಿಕ್ ಎನ್ನುವವರು ಡಾಕ್ಟೋರೇಟ್ ಪದವಿಗಾಗಿ ನೆಬ್ರಾಸ್ಕಾ ಸ್ಥಳನಾಮಗಳ ಬಗ್ಗೆ ಸಂಶೋಧನೆ ನಡೆಸಿ, ಮಹಾನಿಬಂಧವನ್ನು ಸಿದ್ಧಪಡಿಸಿದರು.

ಅಯೋವಾ ಸ್ಥಳನಾಮಗಳನ್ನು ಕುರಿತು ಅಲೆನ್ ವಾಕರ್‌ರೀಡ್ ಅವರೂ, ಮಿಸ್ಸೋರಿ ಸ್ಥಳನಾಮಗಳನ್ನು ಕುರಿತು ರಾಬರ್ಟ್ ಎಲ್. ರ್‍ಯಾಮ್‌ಸೇ ಅವರೂ ಅಧ್ಯಯನ ನಡೆಸಿ ನಿಬಂಧಗಳನ್ನು ರಚಿಸಿದರು. ಅಮೇರಿಕೆಯ ಸ್ಥಳನಾಮಗಳ ಪರಿವೀಕ್ಷಣೆಗೆಂದು ೧೯೩೮ರಲ್ಲಿ ಹ್ಯಾರಿ ಮೋರ್ಗನ್ ಆಯರ್ಸ್ತ್ ಅವರ ನೇತೃತ್ವದಲ್ಲಿ ಅಮೇರಿಕಾ ಸ್ಥಳನಾಮ ಸಂಸ್ಥೆ ಜನ್ಮ ತಳೆಯಬೇಕಾಗಿತ್ತು, ದ್ವಿತೀಯ ಮಹಾಯುದ್ಧದ ಪರಿಣಾಮವಾಗಿ, ನಿಂತುಹೋಯಿತು. ಜಾರ್ಜ್ ಆರ್. ಸ್ಟಿವರ್ಟ್ ಅಮೇರಿಕಾ ಸ್ಥಳನಾಮ ನಿಘಂಟುವಿನ ಅವತರಣಕ್ಕೆ ಕಾರಣರಾದರು. ಎಡ್ವರ್ಡ್ ಸಿ. ಎಹ್ರಾನ್ ಸ್ಪೆರ್ಗರ್, ಜೆ.ಟಿ. ಲಿಂಕ್, ಬರ್ಡ್ ಗ್ರಾಂಗರ್, ಇ. ವಾಲೇಸ್ ಮ್ಯಾಕ್‌ಮುಲನ್, ಫ್ರಾನ್ಸಿಸ್ ಲೀ ಉಟ್ಲೆ ಮುಂತಾದ ತಜ್ಞರ ನಿರಂತರ ಕೃಷಿಯಿಂದ ಈ ಕ್ಷೇತ್ರ ವಿಶಿಷ್ಟ ಉಪಯೋಗಗಳನ್ನು ನೀಡುವಂತಾಯಿತು.

ಹತ್ತು ಹನ್ನೆರಡು ವರ್ಷಗಳ ಹಿಂದೆಯೇ ಪ್ರಾರಂಭವಾಗಬೇಕಾಗಿದ್ದ, ಅಮೇರಿಕಾ ಸ್ಥಳನಾಮ ಸಂಸ್ಥೆ ೧೯೫೦ರಲ್ಲಿ ಅಸ್ತಿತ್ವಕ್ಕೆ ಬಂದಿತು. ಮರು ವರ್ಷವೇ 'ನಾಮಗಳು' ಎಂಬ ತ್ರೈಮಾಸಿಕೆಯನ್ನು ಪ್ರಕಟಿಸಿತು. ಆ ಸಂಸ್ಥೆಯ ಮುಖ್ಯ ಉದ್ದೇಶಗಳು ಈ ಕೆಳಗಿನಂತಿವೆ.

೧. ಮಾನವ ಜೀವನದ ಸಕಲ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ನಾಮಗಳ ಪ್ರಾಮುಖ್ಯವನ್ನು ಅಮೇರಿಕಿಯರ ಗಮನಕ್ಕೆ ತರುವುದು ಮಾತ್ರವಲ್ಲ, ಅವುಗಳ ಬಗೆಗೆ ಅವರ ಆಸಕ್ತಿಯನ್ನು ಕೆರಳಿಸುವುದು.

೨. ನಾಮಗಳ ನಿಷ್ಪತ್ತಿ, ಉಚ್ಚಾರಣೆ ಮತ್ತು ತಿದ್ದುಪಡಿಗಳ ಬಗೆಗೆ ಸರ್ಕಾರಿ ಕಛೇರಿಗಳಿಗೆ ಹಾಗೂ ಸಾರ್ವಜನಿಕ ಸಂಸ್ಥೆಗಳಿಗೆ ಸಲಹೆ ನೀಡವುದು.

೩. ಎಲ್ಲ ಬಗೆಯ ಹೆಸರುಗಳ ಮೂಲ, ವಿಕಾಸ, ನಿಷ್ಪತ್ತಿ ಅರ್ಥ ಮತ್ತು ಪ್ರಯೋಗಗಳನ್ನು ಕುರಿತು ಸಂಶೋಧನೆ ನಡೆಸಿ, ಫಲಿತಾಂಶಗಳನ್ನು ಪ್ರಕಟಿಸುವುದು.

೪. ಸ್ಥಳನಾಮಗಳಿಗೆ ಮೀಸಲಾದ ಪತ್ರಿಕೆಗಳನ್ನೂ, ಪುಸ್ತಕಗಳನ್ನೂ ಮುದ್ರಿಸುವುದಲ್ಲದೇ ಎಲ್ಲ ಹೆಸರುಗಳ ನಿಘಂಟುಗಳನ್ನು ತಯಾರಿಸುವುದು. ಅಂಥ ಪ್ರಕಟನೆಗಳಿಗೆ ಸಹಾಯ ಪ್ರೋತ್ಸಾಹ ಒದಗಿಸುವುದು. ಇತ್ತೀಚೆಗಂತೂ ಸಂಯುಕ್ತ ಸಂಸ್ಥಾನಗಳಲ್ಲಿ ಸಕಲ ಸ್ಥಳನಾಮಗಳ ಸರ್ವೇಕ್ಷಣೆ ನಡೆದು, ವೈವಿಧ್ಯಮಯವೂ ಬಹೂಪಯುಕ್ತವೂ ಆದ ಸಾಮಾಗ್ರಿಯನ್ನು ಅಪಾರ ಪ್ರಮಾಣದಲ್ಲಿ ಸಂಗ್ರಹಿಸಿ, ರಾಷ್ಟ್ರೀಯ ಸ್ಥಳನಾಮ ಕೇಂದ್ರದಲ್ಲಿ ರಕ್ಷಿಸಲಾಗಿದೆ. ಪ್ರತಿಯೊಂದು ಹೆಸರಿನ

ಪೂರ್ವ ಚರಿತ್ರೆ, ಅವುಗಳ ಆಧುನಿಕ ರೂಪಗಳು, ಅವುಗಳ ಉಚ್ಚಾರಕ್ರಮ ಇವೇ ಮೊದಲಾದ ಹಲವಾರು ಮಾಹಿತಿಗಳು ಅಲ್ಲಿ ದೊರೆಯುತ್ತವೆ. ಅವುಗಳ ವಿಶ್ಲೇಷಣೆಗೆ ಕಂಪ್ಯೂಟರ್ ಮತ್ತು ಎಲೆಕ್ಟ್ರಾನಿಕ್ ಸಾಧನಗಳನ್ನು ಬಳಸಿಕೊಳ್ಳಲಾಗಿದೆ. ಹೀಗಾಗಿ ಸ್ಥಳನಾಮಗಳ ಅಧ್ಯಯನ ಒಂದು ಮಟ್ಟವನ್ನು ಮುಟ್ಟಿದೆ.

ಇಂಗ್ಲೆಂಡಿನಲ್ಲಿ ೮ನೆಯ ಶತಮಾನದ ಬೀಡೆ ತನ್ನ ಧಾರ್ಮಿಕ ಇತಿಹಾಸದಲ್ಲಿ ಕೆಲವು ಸ್ಥಳನಾಮಗಳ ವಿವರಣೆಯನ್ನು ಲ್ಯಾಟಿನ್ನಿನಲ್ಲಿ ಕೊಡುತ್ತಾನೆ. ೧೦ನೇ ಶತಮಾನದ ಆಸರ್ ತಾನು ರಚಿಸಿದ ಆಲ್‌ಫ್ರೆಡ್ ದೊರೆಯ ಜೀವನ ಚರಿತ್ರೆಯಲ್ಲಿ ಕೆಲವು ಸ್ಥಳನಾಮಗಳ ನಿಷ್ಪತ್ತಿಯನ್ನು ಲ್ಯಾಟಿನ್ನಿನಲ್ಲಿ ವಿಶದಪಡಿಸುತ್ತಾ, Sheppy ಎನ್ನುವುದು ಕುರಿಗಳ ದ್ವೀಪವೆಂದು ವಿವರಿಸುತ್ತಾನೆ. ೧೮ನೇ ಶತಮಾನದ ಇತಿಹಾಸಕಾರರಾದ ಹಂಟಿಂಗ್ ಡನ್ನಿನ ಹೆನ್ರಿ, ಮಾಲ್ಮೆಸ್ ಬರಿಯ ವಿಲಿಯಂ ಮುಂತಾದವರು ಸ್ಥಳನಾಮಗಳ ಬಗೆಗೆ ಆಸಕ್ತಿ ವ್ಯಕ್ತಪಡಿಸಿದ್ದಾರೆ.

ಯಾಸ್ಕ್, ಪಾಣಿನಿ ಮುಂತಾದ ಪ್ರಾಚೀನ ವಿದ್ವಾಂಸರು ಭಾಷೆಯ ಪ್ರತಿಯೊಂದು ಪದಕ್ಕೂ ನಿರುಕ್ತ ಹೇಳುವ ಸಂಕಲ್ಪ ಹೊಂದಿದ್ದರಷ್ಟೇ ಅಲ್ಲದೆ ಭೌಗೋಳಿಕ ನಾಮಗಳಿಗೂ ಅರ್ಥ ಹೇಳುವ ಪರಿಪಾಠವಿಟ್ಟುಕೊಂಡಿದ್ದರು. ಪಾಣಿನಿಯ ಅನೇಕ ಸ್ಥಳನಾಮಗಳಿಗೆ ನಿರುಕ್ತ ನೀಡಿದ್ದುಂಟು. ಅವನ ಕಾಲದಲ್ಲಿ ಕಾಡು, ಪೊದೆ, ಕಣಿವೆ, ನದಿ, ಬೆಟ್ಟ, ಬಂಡೆ ಮೊದಲಾದ ನೈಸರ್ಗಿಕ ಕೋಟೆಗಳೇ ಗ್ರಾಮಗಳ ಮೇರೆಗಳಾಗಿದ್ದವು. ಊರುಗಳು ಆಕಸ್ಮಿಕವಲ್ಲ. ಸಾಮಾಜಿಕ, ಚಾರಿತ್ರಿಕ, ಸ್ಥಿತಿಗಳ ಪರಿಣಾಮವಾಗಿ ಉದ್ಭವಗೊಂಡ ಅರ್ಥಘಟಕಗಳೆಂಬುದು ಪಾಣಿನಿಯ ಅಭಿಪ್ರಾಯವಾಗಿತ್ತು.

ಪಾಶ್ಚಾತ್ಯ ರಾಷ್ಟ್ರದಲ್ಲಿಯೇ ಸ್ಥಳನಾಮಾಧ್ಯಯನ ಮೊದಲು ಪ್ರಾರಂಭವಾಯಿತೆನ್ನುವುದು ಖಚಿತವಾದ ಸಂಗತಿಯಾಗಿದೆ. ಭಾರತದಲ್ಲಿರುವ ಈ ಅಧ್ಯಯನ ಆರಂಭವಾಯಿತು. ಅಧಿಕೃತವಾಗಿ ಅಧ್ಯಯನದ ಆರಂಭಕ್ಕೆ ಮುಂಚೆ ದೇಶೀಯ ವಿದ್ವಾಂಸರು ಅಲ್ಲಲ್ಲಿ ದಾಖಲಿಸಿದ ಮಾಹಿತಿಗಳು ಪ್ರಮುಖವೆಂದೆನಿಸುತ್ತವೆ.

ಅಪ್ಪಯ್ಯ ದೀಕ್ಷಿತನ 'ನಾಮಸಂಗ್ರಹಮಾಲ'ದಲ್ಲಿ ಅನೇಕ ಹೆಸರುಗಳ ವಿವರಣೆಯಿದೆ. ಅಲ್ಲದೇ ಗ್ರಾಮಗಳಲ್ಲಿ ದೊರೆಯುವ ಸ್ಥಳಪುರಾಣ ಕೃತಿಗಳಲ್ಲಿ ಈ ಕೃತಿಯ ಉಲ್ಲೇಖಗಳಿರುವುದು ಗಮನೀಯ ಅಂಶ. ಈಚೆಗೆ ಎಚ್. ಬಾಲಲೋಚನ ೧೮೨೩ರಲ್ಲಿ 'Contrubtuion of place names to the geography and history of Bengal' ಎಂಬ ಲೇಖನದಲ್ಲಿ ಸ್ಥಳನಾಮಾಧ್ಯಯನದ ಸಾಧ್ಯತೆಗಳು ತಿಳಿಸಿದ್ದಾರೆ. ರಾಮ್‌ಕೋಮಲ್‌ಸೇನ್ ೧೮೩೪ರಲ್ಲಿ 'Dictionary in english and Bengali' ಎಂಬ ಸ್ಥಳನಾಮಕೋಶವನ್ನು ಸಿದ್ಧಪಡಿಸಿದ್ದಾರೆ. ೧೮೭೭ರ ಅವಧಿಯಲ್ಲಿ ಗುಂಡರ್ಟ್ ಕೇರಳದ ಸ್ಥಳನಾಮಗಳನ್ನು ಮಲೆಯಾಳಿ ನಿಘಂಟಿನಲ್ಲಿ ದಾಖಲಿಸಿದ್ದಾರೆ.

Aciatic Society of Bangali and Bombay, Mythic Society of India, Indian Antiqehary and anuals of oriental research' ನವರು ನಾಮಗಳಿಗೆ ಸಂಬಂಧಿಸಿದ ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಅಲ್ಲದೇ ಆರ್.ಪಿ. ಬ್ರಾನ್‌ಪಿಲ್, ಆರ್.ಎಸ್. ವೈಟ್‌ವೇಯ್ಸ (೧೮೯೬), ಪದ್ಮನಾಭ

ಮೆನನ್ (೧೯೦೨), ಜೆ.ಎಫ್.ಫ್ಲೀಟ್, ರೆವರೆಂಡ್ ಪೆರಾರ್ಡ್‌ಹಾಹಾನ್, ಹಯವದನರಾವ್, ಎಸ್.ಕೆ. ಚಟರ್ಜಿ, ಎನ್.ಕೆ. ಬೋಸ್, ಹಿರಲಾಲ್, ಸಿ. ನಾರಾಯಣರಾವ್, ಸೇತುಪಿಳ್ಳೈ, ನಾರಾಯಣರೆಡ್ಡಿ, ತ್ಯಾಗರಾಜು ಮುಂತಾದವರು ಸ್ಥಳನಾಮಗಳ ಅಧ್ಯಯನವನ್ನು ಆರಂಭಿಸಿದರು. ದ್ರಾವಿಡ ಸ್ಥಳನಾಮಗಳ ನಿಘಂಟು, ಶಾಸನೋಕ್ತ ಸ್ಥಳನಾಮಗಳು, ಭೌಗೋಳಿಕ ಮಹತ್ವ ಹೀಗೆ ಹಲವಾರು ದೃಷ್ಟಿಯಿಂದ ಅಧ್ಯಯನಕ್ಕೆ ಬುನಾದಿ ಹಾಕಿದರು.

ತಜ್ಞರ ಆಸಕ್ತಿಯನ್ನು ಕೆರಳಿಸಿ, ಸಂಶೋಧನಾ ಅಧ್ಯಯನಗಳಿಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ೧೯೭೮ರಲ್ಲಿ ಭಾರತೀಯ ಸ್ಥಳನಾಮ ಸಂಸ್ಥೆ ಮೈಸೂರಲ್ಲಿ ಜನ್ಮ ತಾಳಿತು. ಸ್ಥಳನಾಮಗಳನ್ನು ಕುರಿತ ಪ್ರಬುದ್ಧ ಲೇಖನಗಳು ಐದಾರು ದಶಕಗಳಿಂದ ವಿರಳವಾಗಿ ಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದರೂ, ಅವುಗಳ ಅಧ್ಯಯನಕ್ಕೆ ಪೂರ್ಣಸ್ವರೂಪವನ್ನು ನೀಡಿ, ಭದ್ರವಾದ ಬುನಾದಿ ನಿರ್ಮಿಸಿದ ಕೀರ್ತಿ ಪೂನಾದ ದಕ್ಕನ್ ಕಾಲೇಜಿನ ಪುರಾತತ್ವ ಇಲಾಖೆಯ ಅಧ್ಯಕ್ಷರೂ ನಾಡಿನ ಮಹಾ ವಿದ್ವಾಂಸರೂ ಆದ ಎಚ್.ಡಿ. ಸಂಕಾಲಿಯಾ ಅವರಿಗೆ ಸಲ್ಲಬೇಕು. ಸ್ಥಳನಾಮಗಳ ಪೂರ್ವಾಪರ ಪ್ರತ್ಯಯಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ, ಧಾರ್ಮಿಕ ಸಂಪ್ರದಾಯಗಳ ಹಿನ್ನೆಲೆಯಲ್ಲಿ ಅವುಗಳನ್ನು ವಿಶ್ಲೇಷಿಸುವುದಾದರೆ ಜನಾಂಗೀಯ ಭೌಗೋಳಿಕ ಹಂಚಿಕೆಯ ವಿವರಣೆ ಸಾಧ್ಯವೆನ್ನುವುದನ್ನು ತೋರಿಸಿಕೊಟ್ಟರು. ಭಾರತದಲ್ಲಿ ಸ್ಥಳನಾಮಾಧ್ಯಯನ ಅತ್ಯಂತ ಪ್ರಗತಿದಾಯಕವಾಗಿ ನಡೆದದ್ದು ತಮಿಳುನಾಡು ಮತ್ತು ಆಂಧ್ರ ಪ್ರದೇಶಗಳಲ್ಲಿ ನಾಚಿಮುತ್ತು, ಸೇತುಪಿಳ್ಳೆ, ನಾರಾಯಣರೆಡ್ಡಿ, ಗಂಗಾಧರರಾವ್ ಮುಂತಾದ ವಿದ್ವಾಂಸರು ವಿಶ್ವವಿದ್ಯಾಲಯದಲ್ಲಿ ಸ್ಥಳನಾಮ ಕುರಿತು ಸಂಶೋಧನೆಯನ್ನು ಕೈಗೊಂಡು ಆ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿದ್ದಾರೆ. ಆಂಧ್ರಪ್ರದೇಶದಲ್ಲಿ ಜಿಲ್ಲಾವಾರು ಗ್ರಾಮನಾಮಗಳ ಅಧ್ಯಯನದಿಂದ ಸಂಶೋಧನಾ ನಿಬಂಧಗಳನ್ನು ರಚಿಸಲಾಯಿತು.

ಕರ್ನಾಟಕದಲ್ಲಿ ಸ್ಥಳನಾಮಗಳ ಬಗೆಗೆ ಪ್ರಾರಂಭದಲ್ಲಿ ಹೆಚ್ಚಾಗಿ ಅಧ್ಯಯನಗಳಾಗಿರಲಿಲ್ಲ. ಕಿಟೆಲ್ ನಿಘಂಟು ಕೆಲವು ಊರುಗಳ ಹೆಸರುಗಳನ್ನು ಗುರುತಿಸುತ್ತದೆಯೇ ಹೊರತು, ಅವುಗಳ ನಿಷ್ಪತ್ತಿಯ ಬಗೆಗೆ ತಟಸ್ಥವಾಗಿದೆ. ಹಯವದನರಾಯರು ಮೈಸೂರು ಗೆಝಟಿಯರ್‌ನಲ್ಲಿ ಕೆಲವು ನಾಮಗಳನ್ನು ಕುರಿತು ನಡೆಸಿರುವ ವಿಶ್ಲೇಷಣೆ ಅಧ್ಯಯನಕಾರರಿಗೆ ಮಾರ್ಗಸೂಚಿಯಾಗಿವೆ. ಮಾಸ್ತಿ, ದೇಜಗೌ, ಆರ್.ಸಿ. ಹಿರೇಮಠ ಮುಂತಾದವರು ಕೆಲವು ಲೇಖನಗಳ ಮೂಲಕ ಸ್ಥಳನಾಮದ ಕುರಿತು ನಿರ್ದಿಷ್ಟ ಮಾಹಿತಿಯನ್ನು ನೀಡಿದರು. ಕನ್ನಡ ಸ್ಥಳನಾಮಗಳ ಮೇಲೆ ಮೊಟ್ಟ ಮೊದಲ ಬಾರಿಗೆ ಕಣ್ಣು ಹಾಯಿಸಿದವರೆಂದರೆ ಶಂ.ಬಾ. ಜೋಶಿಯವರು. ಅವರು 'ಕಂನಾಡ ಕತೆ'ಯಲ್ಲಿ ಸ್ಥಳನಾಮಗಳ ಅಧ್ಯಯನದ ಪರಿಣಾಮವಾಗಿ ಮಾಡಿದ ತತ್ವಗಳನ್ನು ಪ್ರತಿಪಾದಿಸಿರುವರಲ್ಲದೆ, ಅವುಗಳ ಹಿನ್ನೆಲೆಯಲ್ಲಿ ಇತಿಹಾಸ, ಪುರಾಣ, ಧರ್ಮ, ಜನಾಂಗ ಮತ್ತು ಸಂಸ್ಕೃತಿಗಳ ಮೇಲೆ ಮಹತ್ವಪೂರ್ಣವಾದ ಬೆಳಕು ಚೆಲ್ಲಿದ್ದಾರೆ. ಉತ್ತರ ಭಾರತದ ಸ್ಥಳನಾಮಗಳಲ್ಲಿ ಕನ್ನಡ ಹೆಜ್ಜೆಗಳನ್ನು ಗುರುತಿಸಲು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ. ಹಾಗೆಯೇ ಎಂ.ಎಂ. ಕಲಬುರ್ಗಿ, ಎಂ. ಚಿದಾನಂದಮೂರ್ತಿ, ಹಂಪನಾ, ಎಂ.ಬಿ. ನೇಗಿನಹಾಳ, ವಿ. ಗೋಪಾಲಕೃಷ್ಣ, ಕೆಮ್ಮೂರು ರಘುಪತಿಭಟ್ಟ, ಪಂಜೆ,

ಸೇಡಿಯಾಪು ಕೃಷ್ಣಭಟ್ಟ, ದೇಜಗೌ ಮುಂತಾದ ವಿದ್ವಾಂಸರು ಸ್ಥಳನಾಮ ಕ್ಷೇತ್ರಕ್ಕೆ ತಾತ್ವಿಕ ರೂಪರೇಶೆಯನ್ನು ನೀಡಿದರು.

ದೇಜಗೌ ಅವರು ೧೯೭೦ರಲ್ಲಿ ಮೈಸೂರಿನಲ್ಲಿ Place name society of India ಎಂಬ ಸ್ಥಳನಾಮ ಸಂಸ್ಥೆಯನ್ನು ಸ್ಥಾಪಿಸಿ ಆ ಮೂಲಕ ಭಾರತದಾದ್ಯಂತ ಸ್ಥಳನಾಮ ಸಂಶೋಧನೆಗೆ ಗಮನಹರಿಸಿದ್ದು, ಮಹತ್ವಪೂರ್ಣವಾದ ಕೆಲಸವಾಗಿದೆ. ಭೌಗೋಳಿಕ ಹಿನ್ನೆಲೆಯಲ್ಲಿ ಆಯಾ ಪ್ರಾದೇಶಿಕ ವೈಶಿಷ್ಟ್ಯಗಳೊಂದಿಗೆ ಸ್ಥಳನಾಮಗಳ ಕುರಿತು ಈ ಸಂಸ್ಥೆ ಅನೇಕ ಲೇಖನಗಳನ್ನು ಪ್ರಕಟಿಸಿ ನಾಮಾಧ್ಯಯನ ಕಾರರಿಗೆ ಉಪಯೋಗಕಾರಿಯಾಗಿದೆ. ವಾರ್ಷಿಕ ಅಧಿವೇಶನಗಳನ್ನು ಈ ಸಂಸ್ಥೆ ಏರ್ಪಡಿಸಿ ಸ್ಥಳನಾಮಗಳ ವಿಚಾರಗೋಷ್ಠಿಗಳನ್ನು ನಡೆಸಿತ್ತು. ಇತ್ತೀಚೆಗೆ ಈ ಸಂಸ್ಥೆ ತನ್ನ ಕಾರ್ಯವನ್ನು ನಿಲ್ಲಿಸಿರುವುದು ವಿಷಾದನೀಯ. ನಾಮಾಧ್ಯಯನವು ಅತ್ಯಂತ ಪ್ರಯೋಜನಕಾರಿಯೆಂಬುದನ್ನರಿತ ಇಂದಿನ ಅಧ್ಯಯನಕಾರರು, ಸ್ಥಳನಾಮಗಳ ಅಧ್ಯಯನಕ್ಕೆ ಹೆಚ್ಚು ಹೆಚ್ಚು ತೊಡಗಿಸಿಕೊಂಡಿದ್ದಾರೆ. ವಿಶ್ವವಿದ್ಯಾಲಯಗಳಲ್ಲಿಯೂ ಒಂದೊಂದು ಜಿಲ್ಲೆಯ ಕುರಿತಂತೆ, ಮತ್ತು ಪ್ರತ್ಯೇಕ ತಾಲ್ಲೂಕುವಾರು ಸ್ಥಳನಾಮಾಧ್ಯಯನಗಳಾಗುತ್ತಿರುವುದು ಗಮನೀಯ ಸಂಗತಿಯಾಗಿದೆ.

ಶಂಬಾ ಜೋಶಿ ಅವರು 'ಎಡೆಗಳು ಹೇಳುವ ಕಂನಾಡ ಕಥೆ' (೧೯೪೭) ಕೃತಿಯಲ್ಲಿ ಕನ್ನಡದಲ್ಲಿ ಸ್ಥಳನಾಮಗಳ ಅಧ್ಯಯನದಿಂದ ಕರ್ನಾಟಕದ ಸಂಸ್ಕೃತಿಯನ್ನು ರೂಪಿಸುವ ಪ್ರಯತ್ನವೊಂದು ನಡೆದಿರುವುದು ಪ್ರಮುಖವೆನಿಸುತ್ತದೆ. ನಾಡಿನ ಭವ್ಯ ಪರಂಪರೆಯನ್ನು ನಾಡವರಿಗೆ ತಿಳಿಸಿಕೊಡುವುದು ಅಂದು ಅಮೂಲ್ಯವೆನಿಸಿತ್ತು. ಆದ್ದರಿಂದ ಶಂಬಾ ಈ ಕಾರ್ಯವನ್ನು ಶ್ರದ್ಧೆ ಹಾಗೂ ಉತ್ಸಾಹದಿಂದ ಮಾಡಿದರು. ಸ್ಥಳನಾಮಗಳ ಅಧ್ಯಯನ ಈಗಿನಷ್ಟು ವೈಜ್ಞಾನಿಕವಾಗಿ ಅಲ್ಲದಿದ್ದರೂ, ದೊರೆತ ಮಾಹಿತಿಗಳ ಮೂಲಕ ಪ್ರಾಮಾಣಿಕವಾಗಿ ನಡೆದಿತ್ತು. ಇದು ಮೆಚ್ಚಬೇಕಾಗಿರುವ ಅಂಶವಾಗಿದೆ. 'ಎಡೆಗಳು ಹೇಳುವ ಕಂನಾಡ ಕತೆ' ಶಂ.ಬಾ ಅವರ ಪ್ರಮುಖವಾದ ಕೃತಿಯಾಗಿದೆ. ಸ್ಥಳನಾಮಗಳನ್ನೇ ಪ್ರಧಾನವಾಗಿ ಅಭ್ಯಸಿಸಿ, ಅವುಗಳಲ್ಲಿ ಒಳಗೊಂಡಿರುವ ಅಮೂಲ್ಯವಾದ ಸಾಂಸ್ಕೃತಿಕ ಸಂಗತಿಗಳನ್ನು ತಿಳಿಪಡಿಸುವ ನೆಲೆಯಲ್ಲಿ ಈ ಸಂಶೋಧನೆಯು ಕ್ರಿಯಾತ್ಮಕವಾಗಿದೆ. ಎಡೆಗಳ ಹೆಸರಿನ ಹಿನ್ನೆಲೆಯಲ್ಲಿ ನಮ್ಮ ನಾಡಿನ ರೂಢಿ, ಸಂಪ್ರದಾಯ ಮತ್ತು ಪೂರ್ವ ಪರಂಪರೆಗಳನ್ನು ಮಾನವ ಸಮಾಜ ವಿಕಾಸಶಾಸ್ತ್ರದ ಬೆಂಬಲದಿಂದ ಹೊಂದಿಸಿ ಹೇಳಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ.

ಸ್ಥಳನಾಮಗಳ ಸಾಮಾಜಿಕ ಇತಿಹಾಸದಲ್ಲಿ ಮನುಷ್ಯನನ್ನು ತಿಳಿಯುವಲ್ಲಿ ಹೇಗೆ ಮಹತ್ವದ್ದಾಗಿದೆ ಎಂಬುದನ್ನು ವಿವರಿಸುತ್ತಾರೆ. ಪಟ್ಟಿ, ಪಾಡಿ, ವಾಡ–ಹಟ್ಟಿ ಮೊದಲಾದವು ಗ್ರಾಮನಾಮದ ರೂಪಗಳು. ಜನಾಂಗದ ವಾಸಸ್ಥಾನ ಸೂಚಕಗಳು ಎಂದು ಶಂ.ಬಾ. ಅಭಿಪ್ರಾಯಪಡುತ್ತಾರೆ. ಹೀಗೆ ಕನ್ನಡ ನಾಡಿನಲ್ಲಿ ಸ್ಥಳನಾಮ ಅಧ್ಯಯನದ ಬುನಾದಿಯನ್ನು ಹಾಕಿದರು. ಕುಂತಲ–ಕರ್ನಾಟಕದ ಬಗ್ಗೆಯೂ ಚರ್ಚಿಸುತ್ತಾರೆ. ಭಾರತದಲ್ಲಿ ಆರ್ಯರು ಮತ್ತು ದ್ರಾವಿಡರಿಗಿಂತಲೂ ಮೊದಲು, ವಾಸವಿದ್ದ ಜನ ಕೋಲರು ಮತ್ತು ಮುಂಡರ ಹೆಸರಿನ ಸ್ಥಳಗಳು ಕಂನಾಡಿನಲ್ಲಿ ವಿಶೇಷವಾಗಿವೆ ಎಂದು ತಿಳಿಸಿಕೊಡುತ್ತಾರೆ.

ಕರ್ನಾಟಕ ಮತ್ತು ಮಹಾರಾಷ್ಟ್ರದ ಸಂಬಂಧವನ್ನು ಕನ್ನಡ ಮತ್ತು ಮರಾಠಿಯ ಮೂಲಕ, ಭಾಷಿಕ, ಧಾರ್ಮಿಕ, ಸಾಮಾಜಿಕ ನಡವಳಿ, ಸಂಪ್ರದಾಯ ಮುಂತಾದವುಗಳೊಂದಿಗೆ ಸ್ಥಳನಾಮಗಳ ಮೂಲಕ ಅಂತರ್ ಸಂಬಂಧವನ್ನು ಬೆಸೆಯುತ್ತಾರೆ. ಈ ಕೃತಿಯೊಂದೇ ಅಲ್ಲದೆ, ಅವರ 'ಕಣ್ಮರೆಯಾದ ಕನ್ನಡ ಮತ್ತು ಕನ್ನಡದ ನೆಲೆ', 'ಮಹಾರಾಷ್ಟ್ರದ ಮೂಲ', 'ಕಂನುಡಿಯ ಹುಟ್ಟು ಹಾಗೂ ಕನ್ನಡ ನುಡಿಯ ಜೀವಾಳ', 'ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ' ಎಂಬ ಕೃತಿಗಳಲ್ಲಿಯೂ ಸ್ಥಳನಾಮಗಳ ಮೂಲಕ ಕನ್ನಡ ಭಾಷೆ, ಸಂಸ್ಕೃತಿ ಭೌಗೋಳಿಕ ಎಲ್ಲೆಯನ್ನು ಗುರುತಿಸುವ ಚರ್ಚೆ ಮಾಡಿದ್ದಾರೆ. ಈ ದೃಷ್ಟಿಯಿಂದ ಅವರ ಎಲ್ಲ ಕೃತಿಗಳು ನಾಮಾಧ್ಯಯನಕ್ಕೆ ಮುಖ್ಯವಾದ ಆಕರಗಳೆನಿಸುತ್ತವೆ.

ಚಿದಾನಂದ ಮೂರ್ತಿ ಎಂ. ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (೧೯೬೬) ಎಂಬ ಕೃತಿಯಲ್ಲಿ 'ದೇವಸ್ಥಾನ ಒಂದು ಸಾಮಾಜಿಕ ಸಂಸ್ಥೆ' ಎಂಬ ಅಧ್ಯಾಯದಲ್ಲಿ ವ್ಯಕ್ತಿಯ ಹೆಸರಿನಲ್ಲಿ ದೇವಸ್ಥಾನ ಎಂಬಲ್ಲಿ ವ್ಯಕ್ತಿಗಳ ಹೆಸರು ಹೇಗೆ ದೇವಸ್ಥಾನಗಳಾಗಿವೆ ಎಂಬುದನ್ನು ಈ ಕೆಳಗಿನಂತೆ ಪ್ರಸ್ತಾಪಿಸುತ್ತಾರೆ. ವ್ಯಕ್ತಿಗೆ ತಂದೆ ತಾಯಿಗಳು ಇಟ್ಟ ಹೆಸರು ಯಾವುದೇ ಆಗಿರಲಿ ಆ ವ್ಯಕ್ತಿ ತನ್ನ ಹೆಸರಿಗೆ ಈಶ್ವರ ಎಂಬ ಪದವನ್ನೋ ಭಟ್ಟಾರಕ ಎಂಬ ಪದವನ್ನೋ ಸೇರಿಸಿ ಆ ಹೆಸರಿನ ದೇವರನ್ನು ಪ್ರತಿಷ್ಠಾಪಿಸುವ ಸಂಗತಿಯು ಹಲವು ಶಾಸನಗಳ ಮೂಲಕ ಚಿದಾನಂದಮೂರ್ತಿಯವರು ತಿಳಿಸುತ್ತಾರೆ. ಉದಾಹರಣೆಗೆ ವಿಜಯಾದಿತ್ಯ ಸತ್ಯಾಶ್ರಯನು ಪ್ರತಿಷ್ಠಾಪಿಸಿದ ದೇವರು ವಿಜಯಾದಿತ್ಯ ಭಟ್ಟಾರಕ, ಲೋಕಮಹಾದೇವಿ–ಲೋಕೇಶ್ವರ ದೇವಸ್ಥಾನ, ಸಿಪಿಲಂಕರಾಮ–ಸಿಪಿಲೇಶ್ವರ, ಕೋಟಿಗಾವುಂಡ–ಕೋಟೇಶ್ವರ, ಒದ್ದಿರಾಜ–ಒದ್ದೇಶ್ವರ ಎಂದು ಹಾಗೆಯೇ ದೇವರುಗಳಿಗೆ ವ್ಯಕ್ತಿಗಳ ಹೆಸರುಗಳನ್ನಿಡುವುದು ಅನುಚಿತವೆಂದು ಅನ್ನಿಸಿರಬೇಕು. ಬಹುಶಃ ಅದರ ಫಲವಾಗಿ ವ್ಯಕ್ತಿಯ ಹೆಸರುಗಳಲ್ಲಿ ಕಟ್ಟಿಸಿದ ದೇವಸ್ಥಾನಗಳು ಉಳಿದರೂ, ಆ ದೇವತೆಗಳ ಹೆಸರುಗಳು ಮಾತ್ರ ಮಾರ್ಪಾಟಾದವು ಎಂದು ಹೇಳಿದ್ದಾರೆ. ಈ ಕೃತಿಯು ಸಂಸ್ಕೃತಿಯ ಅಧ್ಯಯನಕ್ಕೆ ಒಂದು ಉತ್ತಮ ಆಕರವಾಗಿದೆ.

ಚಿದಾನಂದಮೂರ್ತಿ ಎಂ. ಅವರ 'ಸಂಶೋಧನ ತರಂಗ–೨' (೧೯೭೦) ಕೃತಿಯಲ್ಲಿ 'ಹರಿಹರ ಕ್ಷೇತ್ರ ಮತ್ತು ಹರಿಹರ ಕವಿಯ ಕಾಲ' ಎಂಬ ಲೇಖನದಲ್ಲಿ ಹರಿಹರ ಸ್ಥಳನಾಮದ ಬಗೆಗೆ ಪ್ರಸ್ತಾವಿಕವೆಂಬಂತೆ ಬರೆದಿದ್ದಾರೆ. ಇದು ದಾವಣಗೆರೆಯ ತುಂಗಭದ್ರೆಯ ದಡದ ಮೇಲಿನ ಹರಿಹರ ನಗರವೇ ಆಗಿದ್ದು, ಹರಿ+ಹರ ಎಂಬುದು ಧರ್ಮಸಾಮರಸ್ಯದ ಸಂಕೇತ ಎಂದು ಶಾಸನಗಳ ಉಲ್ಲೇಖದಿಂದ ವಿವರಿಸಿದ್ದಾರೆ.

ಕೃಷ್ಣಭಟ್ಟ ಸೇಡಿಯಾಪು ಅವರ 'ಕೆಲವು ದೇಶನಾಮಗಳು' (೧೯೭೫) ಎಂಬ ಕೃತಿಯಲ್ಲಿ ಶಬ್ದಾರ್ಥ ವಿಶ್ಲೇಷಣೆಗೆ ಸಂಬಂಧಿಸಿದೆ. ನೇರವಾಗಿ ಸ್ಥಳನಾಮಾಧ್ಯಯನ ಹೇಳುವುದಿಲ್ಲವಾದರೂ ತುಳು ಶಬ್ದಾರ್ಥ ಮತ್ತು ಚೇರ, ಕೊಂಕಣ ಹಾಗೂ 'ಪಾಡಿ ಮತ್ತು ಪಾಂಡ್ಯ' ಎಂಬ ಲೇಖನಗಳಲ್ಲಿ ಐದು ಶಬ್ದಗಳ ವ್ಯುತ್ಪತ್ತಿಯನ್ನು, ವ್ಯಾಕರಣ, ಭಾಷಾಶಾಸ್ತ್ರ, ಉಪಭಾಷಾ ವಿವೇಚನೆ, ಸ್ಥಳನಾಮಗಳನ್ನು

ಈ ಪುಸ್ತಕದಲ್ಲಿ ಹೇಳಲಾಗಿದೆ. ಅಳುಪ, ಕೊಂಕ, ಕೊಡಿಯಾಲ, ಪಾಂಡಿಚೆರಿ, ಭೂತಾಳ, ಪಾಂಡ್ಯ ಮೊದಲಾದ ಶಬ್ದಗಳನ್ನು ವಿವರಿಸುವಾಗ ತಮ್ಮ ವಾದಕ್ಕೆ ಸ್ಥಳನಾಮಗಳನ್ನು ಪೂರಕವಾಗಿ ಬಳಸಿಕೊಂಡಿದ್ದಾರೆ. ನಾಮಾಧ್ಯಯನಕ್ಕೆ ಸೇಡಿಯಾಪು ಅವರ ಕೊಡುಗೆ ಮಹತ್ತರವಾದುದು. ಶಂಬಾ ಅವರಂತೆ ಇವರು ಕೂಡಾ ಸಂಸ್ಕೃತಿಯನ್ನು ಕಟ್ಟುವಿಕೆಯಲ್ಲಿ ಕೆಲಸ ಮಾಡಿದ್ದಾರೆ.

ಶಿರೂರು ಬಿ.ವಿ. ಅವರ 'ಶ್ರವಣಬೆಳ್ಗೊಳ' (೧೯೭೬) ಕೃತಿಯಲ್ಲಿ 'ಶ್ರವಣಬೆಳ್ಗೊಳ ನಾಮವಿವೇಚನೆ' ಎಂಬ ಉಪ ಅಧ್ಯಾಯದಲ್ಲಿ ಶ್ರವಣಬೆಳ್ಗೊಳವನ್ನು ಕಟವಪುಗಿರಿ, ಕಳ್ವಪ್ಪಿನದುರ್ಗ, ಕಲ್ವಪ್ಪು, ರಿಷಿಗಿರಿ, ತೀರ್ಥಗಿರಿ, ಚಂದ್ರಗಿರಿ, ದವಳ ಸರೋವರ, ಸಿತತಟಾಕ, ಜಿನಗಿರಿ, ಅಭಿನವ ಪೌದನಪುರ ಎಂಬ ಮುಂತಾದ ಹೆಸರುಗಳಿದ್ದವೆಂಬುದನ್ನು ಶಾಸನ, ಐತಿಹ್ಯ, ಸಂಸ್ಕೃತೀಕರಣ ಮುಂತಾದ ಆಧಾರಗಳಿಂದ ಸಾಬೀತುಪಡಿಸಿದ್ದಾರೆ.

ಲಕ್ಷ್ಮಣ ತೆಲಗಾವಿ ಅವರು ಸಂಪಾದಿಸಿರುವ, 'ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು' ಎಂಬ ಕೃತಿಯಲ್ಲಿ ನಲವತ್ತೇಳು ಲೇಖನಗಳಿವೆ. ಐತಿಹಾಸಿಕ ಮಹತ್ವದ ಘಟನೆಗಳಿಗೆ ಕಾರಣವಾದ ಅನೇಕ ಸಂಗತಿಗಳನ್ನು ಬರೆಯುವಾಗ ಅಷ್ಟೇ ಮೌಲ್ಯ ಪಡೆದ ಸ್ಥಳನಾಮಗಳನ್ನು ಪ್ರಸ್ತಾಪಿಸಿದ್ದಾರೆ. ಉದಾಹರಣೆಗೆ. ಉಚ್ಚಂಗಿ, ಮಧುರಾಪುರಿ, ರಾಮಗಿರಿ ಆಶ್ರಮ, ಬಳ್ಳಾರಿ, ಮಂತ್ರಾಲಯ, ಆದವಾನಿ, ಆಲೂರು, ಉಜ್ಜಯಿನಿ, ಇಂಗಳದಾಳು ಮುಂತಾದ ಊರುಗಳ ಚರಿತ್ರೆಯನ್ನು ಹೇಳುವುದರೊಂದಿಗೆ, ಆ ಸ್ಥಳಗಳಿಗಿರುವ ಐತಿಹ್ಯ, ಕಥೆ ಭೌಗೋಳಿಕ ವಿವರಗಳನ್ನು ಕೊಡುತ್ತಾರೆ. 'ಕನ್ನಡ ನಾಡಿನ ಊರುಗಳು' ಎಂಬ ಲೇಖನದಲ್ಲಿ ಕುಂತಲನಾಡಿನ ವಿಸ್ತಾರ, ಶೆಟ್ಟಿಯಕೆರೆ, ಹುಳಿಯೂರು, ಅನಂತಪುರ, ನಗರ, ಸಂತೇಬೆನ್ನೂರು, ಬೆಲಗೂರು, ಹಂಪೆ ಮುಂತಾದ ಸ್ಥಳಗಳ ಚಾರಿತ್ರಿಕ ಮಹತ್ವ, ನಿಷ್ಪತ್ತಿ ಹೀಗೆ ಆಧಾರಗಳನ್ನು ಕೊಡುತ್ತಾ ಹೋಗಿದ್ದಾರೆ. ಜೋಯಿಸರು ಕೆಲವು ಕಡೆ ಭಾವುಕರಾಗಿ ಬರೆದಿರುವುದರಿಂದ ನಿಷ್ಪತ್ತಿಯು ಖಚಿತತೆಯನ್ನು ಪಡೆಯುವುದಿಲ್ಲ. ಆದರೂ ಈ ಕೃತಿ ಪ್ರಮುಖವಾದುದಾಗಿದೆ.

ಜಿ.ವಿ.ಡಿ. ಅವರ 'ಕನ್ನಡ ಐತಿಹ್ಯಗಳು' (೧೯೭೮) ಕೃತಿಯಲ್ಲಿ ದೇವರು, ಬೆಟ್ಟ, ಕಲ್ಲುಗಳು, ಪ್ರಮುಖ ಸ್ಥಳ, ವ್ಯಕ್ತಿ, ಕೆರೆ, ಹೊಳೆಗಳ ಬಗೆಗೆ ಇರುವ ಐತಿಹ್ಯಗಳನ್ನು, ಗುತ್ತಲು, ಮೊಳೂರು, ದಶವಾರು, ಕೆರೆಗೋಡು, ಗೆಜ್ಜಲಗೆರೆ, ಹನಕೆರೆ, ಕಚ್ಚಿಗೆರೆ, ತುಂಕೆರೆ, ಕುರಿಕೆಂಪನದೊಡ್ಡಿ, ಮಳವಳ್ಳಿ ಮುಂತಾದ ಊರುಗಳಿಗೆ ಇವರು ಐತಿಹ್ಯಗಳನ್ನು ಸಂಗ್ರಹಿಸಿ, ಸ್ಥಳೀಯ ಐತಿಹ್ಯಗಳು ಎಂಬ ಶೀರ್ಷಿಕೆಯಲ್ಲಿ ಪ್ರಸ್ತಾಪಿಸಿದ್ದಾರೆ.

ಕೆಮ್ತೂರು ರಘುಪತಿ ಭಟ್ಟ ಅವರ 'ತುಳುನಾಡಿನ ಸ್ಥಳನಾಮಗಳು' (೧೯೭೯) ಎಂಬ ಕೃತಿಯು ಎಪ್ಪತ್ತರ ದಶಕದಲ್ಲಿ ಬಂದ, ಕನ್ನಡದ ಮೊದಲ ಮತ್ತು ಮಹತ್ವದ ಸಂಶೋಧನಾ ಕೃತಿಯಾಗಿದೆ. ಭಟ್ಟರು ತುಳುನಾಡಿಗೆ ಸೀಮಿತಪಡಿಸಿ, ಜೊತೆಗೆ ಸಾರ್ವತ್ರಿಕ ಎನ್ನಬಹುದಾದ ಅನೇಕ ನಿಯಮಗಳನ್ನು ವಿಶ್ಲೇಷಿಸುತ್ತಾ ಹೋಗುತ್ತಾರೆ. ಒಂಭತ್ತು ವಿಭಾಗ ಮಾಡಿಕೊಂಡು ಸ್ಥಳನಾಮದ

ಇತಿಹಾಸವನ್ನೂ ಸಂಕ್ಷಿಪ್ತವಾಗಿ ಹೇಳಿದ್ದಾರೆ. ಸ್ಥಳನಾಮ ಸ್ವರೂಪದಲ್ಲಿ ವಾರ್ಗಿಕ, ನಿರ್ದಿಷ್ಟಗಳ ಸ್ಥಾನ ಮತ್ತು ಸ್ಥಳನಾಮಗಳ ವರ್ಗೀಕರಣವನ್ನು ಹೇಳುತ್ತಾ ಸ್ವಾಭಾವಿಕ ಸ್ಥಳನಾಮಗಳು ಮತ್ತು ಸಂಸ್ಕೃತಿಯನ್ನು ಬಿಂಬಿಸುವ ಸ್ಥಳನಾಮಗಳೆಂದು ವರ್ಗೀಕರಿಸುತ್ತಾರೆ. ಜೊತೆಗೆ ಸಂಸ್ಕೃತೀಕರಣ, ಹೆಸರಿನ ಬದಲಾವಣೆ ಮುಂತಾದ ವಿಷಯಗಳನ್ನು ಚರ್ಚಿಸುತ್ತಾರೆ. ತುಳುನಾಡಿನ ಒಟ್ಟು ಸ್ಥಳನಾಮ ಘಟಕಗಳನ್ನು ಮೂರನೇ ವಿಭಾಗದಲ್ಲಿ ಪಟ್ಟಿ ಮಾಡಿದ್ದಾರೆ. ಜಲವಾಚಕ ಸ್ಥಳನಾಮಗಳು ಎಂಬಲ್ಲಿ ಭಟ್ಟರು ತುಳುನಾಡಿನ ನಿರ್ದಿಷ್ಟ, ವಾರ್ಗಿಕ ಭಾಗಗಳಿಂದ ಹೇಗೆ ಜಲವಾಚಿ ಮತ್ತು ಸಂಬಂಧವಾಚಿಗಳಾಗುತ್ತವೆಂದು ಹೇಳಿದ್ದಾರೆ. ಭೂ ಸ್ಥಿತಿವಾಚಕ ಸ್ಥಳನಾಮಗಳೊಂದಿಗೆ ತುಳುನಾಡಿನ ಭೌಗೋಳಿಕ ವೈಶಿಷ್ಟ್ಯತೆಯನ್ನು ಹೇಳಿದ್ದಾರೆ. ಇತರ ಸ್ಥಳವಾಚಕಗಳಲ್ಲಿ ಶಿಲಾವಾಚಿ–ಸಸ್ಯವಾಚಿ–ಕ್ಷೇತ್ರವಾಚಕ–ದಿಗ್ವಾಚಕ–ಸಾಂಸ್ಕೃತಿಕ ಎಂದು ಪರಿಚಯಿಸಿದ್ದಾರೆ. ವ್ಯಂಜನಾಂತ–ಸ್ವರಾಂತ–ಸೌಲಭ್ಯಕಾಂಕ್ಷೆ–ಧ್ವನಿವ್ಯತ್ಯಾಸ ಮುಂತಾದವನ್ನು ನಾಮಗಳ ಭಾಷಾ ವೈಜ್ಞಾನಿಕ ಅಧ್ಯಯನದಲ್ಲಿ ಹೇಳಿದ್ದಾರೆ. ತರುವಾಯ ಸ್ಥಳನಾಮಗಳ ಪ್ರಯೋಜನ ವಿವರಿಸಿದ್ದಾರೆ. ಕೊನೆಯಲ್ಲಿ ತುಳು ಶಬ್ದ ಕುರಿತಾದ ದೀರ್ಘಚರ್ಚೆ, ಪ್ರತಿನಾಮಕರಣ ಈವರೆಗೆ ನಡೆದ ತುಳುನಾಡಿನ ನಾಮಾಧ್ಯಯನದ ಪ್ರಯತ್ನ ಹೇಳಿದ್ದಾರೆ. ಇದು ನಾಮಾಧ್ಯಯನಕಾರರಿಗೆ ಉಪಯುಕ್ತ ಗ್ರಂಥವಾಗಿದೆ ಎನ್ನಬಹುದು.

ಚಿದಾನಂದಮೂರ್ತಿ ಎಂ. ಅವರ 'ವಾಗರ್ಥ' (೧೯೮೧) ಕೃತಿಯು ನಾಮಾಧ್ಯಯನಕ್ಕೆ ಪ್ರಮುಖವಾದ ಆಕರಗ್ರಂಥ. ಕರ್ನಾಟಕ ಸ್ಥಳನಾಮಗಳು ಎಂಬ ಲೇಖನದಲ್ಲಿ ಲೇಖಕರು ಯಾವುದೇ ಸ್ಥಳನಾಮದ ನಿಷ್ಪತ್ತಿಗೆ ಬೆಟ್ಟ, ಗುಡ್ಡ, ನದಿ, ಮರಗಳು, ಕೆರೆ, ಕೋಟೆ ಇತ್ಯಾದಿ ಪ್ರಾದೇಶಿಕ ವೈಲಕ್ಷಣಗಳನ್ನು ಗಮನಿಸುವುದು ಅತ್ಯಂತ ಅಗತ್ಯವಾಗುತ್ತದೆ ಎಂದು ಹೇಳಿ, ಸ್ಥಳನಾಮಗಳ ಸಾಮಾಜಿಕ, ಸಾಂಸ್ಕೃತಿಕ, ಭಾಷಿಕ ಮಹತ್ವ ಮುಂತಾದವುಗಳ ಬಗ್ಗೆ ವಿವರಿಸಿದ್ದಾರೆ. ವರ, ವಾರ ಎಂದು ಕೊನೆಯಾಗುವ ಊರ ಹೆಸರುಗಳು ಎಂಬಲ್ಲಿ ಶಾಸನಾಧಾರಗಳಿಂದ ಉದಾಹರಿಸಿದ್ದಾರೆ. ಊರುಗಳಿಗೆ ಎರೆಡರಡು ಹೆಸರುಗಳು ಎಂಬ ಲೇಖನದಲ್ಲಿ ಲಂಬಾಣಿಗರ ವಾಸದ ನೆಲೆಗಳಿಗೆ ಎರಡು ಹೆಸರು ಇರುವುದನ್ನು ಸವಿವರವಾಗಿ ಹೇಳುತ್ತಾರೆ. 'ಬ್ರಾಹ್ಮಣರಿಗೆ ದಾನವಾಗಿ ಕೊಟ್ಟ ಊರ ಹೆಸರುಗಳ ಸೂಚಕಾಂಶಗಳು' ಎಂಬಲ್ಲಿ ಬ್ರಾಹ್ಮಣ, ಅಗ್ರಹಾರ, ಮಂಗಲ, ಆಲ, ಬೊಮ್ಮ, ಶ್ರೋತ್ರೀಯ, ಮಹಾಜನ, ಹಾರೋ ಮುಂತಾದ ಪದಗಳು ಪದಾದಿ ಅಥವಾ ಪದಾಂತ್ಯದಲ್ಲಿದ್ದರೆ, ಅವು ಬ್ರಾಹ್ಮಣರಿಗೆ ದಾನವಾಗಿ ನೀಡಿದ ಊರುಗಳು ಎಂದಿದ್ದಾರೆ. ದೇಕಬ್ಬೆ ಶಾಸನದ ಸ್ಥಳನಾಮಗಳನ್ನು ಕುರಿತು ಎಂಬ ಲೇಖನದಲ್ಲಿ ಕೆಲವು ಶಾಸನೋಕ್ತ ಐತಿಹಾಸಿಕ ಪ್ರಸಿದ್ಧ ನಾಡುಗಳ ಉಲ್ಲೇಖವಿದೆ.

ರಾಮನಾಥಪುರದಂತಹ ಹೆಸರುಗಳು ಸ್ಪಷ್ಟವಾಗಿ ಆ ಊರಿನ ದೇವಾಲಯ ಮತ್ತು ದೈವಗಳಿಂದ ಬಂದ ಹೆಸರುಗಳು ಆದರೆ ಕೆಲವೆಡೆ ನಾವು ಎಚ್ಚರವಾಗಿರದಿದ್ದರೆ ತಪ್ಪು ಮಾಡುವ ಸಾಧ್ಯತೆಗಳೂ ಉಂಟು. ಉದಾ. ನಂಜುಂಡೇಶ್ವರ ದೇವಾಲಯದಿಂದ ನಂಜನಗೂಡಿಗೆ ಹೆಸರು ಬಂದಿಲ್ಲ. ನಂಜ ಎನ್ನುವವನು ಇದ್ದ ಊರು ನಂಜನಗೂಡು. ಮುಂದೆ ಅಲ್ಲಿ ಕಟ್ಟಿಸಿದ ಈಶ್ವರ ದೇವಾಲಯವನ್ನು ನಂಜುಂಡೇಶ್ವರ ಎಂದು ಕರೆಯಲಾಯ್ತು. ಅರಕಲುಗೂಡು ಈ ತರಹದ ಸ್ಥಳನಾಮವು ದೇವಾಲಯದಿಂದ

ಹೆಸರು ಬಂದಿಲ್ಲ ಆ ಊರಿನಿಂದ ದೇವಾಲಯಕ್ಕೆ ಹೆಸರು ಬಂದಿದೆ. ಹಾಗೆಯೇ ಕೊನೆಗೆ ಈ ಕೃತಿಯ ಐದು ಲೇಖನಗಳು ಸ್ಥಳನಾಮ ವಿಜ್ಞಾನದ ಪ್ರತಿಯೊಂದು ಅಂಶವನ್ನು ಸಂಕ್ಷಿಪ್ತದಲ್ಲಿ ವಿವರಿಸಲು ಸಹಾಯಕವಾಗುತ್ತವೆ. ಆದ್ದರಿಂದ ಇದೊಂದು ಉತ್ತಮ ಆಕರಗ್ರಂಥವೆನ್ನುವುದರಲ್ಲಿ ಅನುಮಾನವಿಲ್ಲ.

ಸೀತಾರಾಮಯ್ಯ ಎಂ.ವಿ. ಅವರ ಅಭಿನಂದನ ಗ್ರಂಥ 'ಆಸ್ವಾದ' (೧೯೮೩) ಕೃತಿಯಲ್ಲಿ 'ಕೋಲಾರ ಜಿಲ್ಲೆಯ ಸ್ಥಳನಾಮಗಳಲ್ಲಿ ಜಲಸೂಚಕ ಅಂಶಗಳು' ಎಂಬಲ್ಲಿ ಕೋಲಾರದಲ್ಲಿರುವ ೪೦೦ ಜಲಸೂಚಿ ನಾಮಗಳನ್ನು ಪತ್ತೆ ಹಚ್ಚಿದ್ದಾರೆ. ಕನ್ನಡದ ಜೊತೆಯಲ್ಲಿ ಚೆರುವು, ಚೆಲ್ಲ ಮುಂತಾದ ಚೆಲುಗಿನ ಜಲಸೂಚಿ ಅಂಶಗಳನ್ನು ಪಟ್ಟಿ ಮಾಡುವ ಮೂಲಕ ದ್ವಿಭಾಷಿಕ ಪರಿಸರದ ಪ್ರಭಾವವನ್ನು ತಿಳಿಯಬಹುದು.

ಲಕ್ಕಪ್ಪಗೌಡ ಎಚ್.ಜೆ. ಅವರು ಸಂಪಾದಿಸಿರುವ 'ಮಲೆನಾಡು ಜಾನಪದ' (೧೯೮೩) ಕೃತಿಯಲ್ಲಿ ಕುಮಾರಸ್ವಾಮಿ ಎಸ್. ಅವರ 'ಸ್ಥಳನಾಮಗಳು' ಎನ್ನುವ ಲೇಖನವು, ೨೦ನೇ ಶತಮಾನದಲ್ಲಿಯ ನಾಮಾಧ್ಯಯನದ ಪ್ರಸ್ತುತತೆಯನ್ನು ಹೇಳುತ್ತಾ, ಸಂಸ್ಕೃತಿಯನ್ನು ನಿರ್ವಚಿಸಲು ನಾಮಗಳ ಮಹತ್ವ ಏನೆಂಬುದನ್ನು ಅವುಗಳ ಪ್ರಾಚೀನತೆಯ ಮೂಲಕ ವಿವರಿಸಿದ್ದಾರೆ. ಹೆಸರಿನ ಬದಲಾವಣೆ, ದೇಸೀಯತೆಯನ್ನು ಹೇಳುತ್ತಲೇ, ಜಾನಪದರು ಒಂದು ಗ್ರಾಮದ ಹೆಸರನ್ನು ತಮ್ಮ ಹಾಡು, ಗಾದೆ, ಒಗಟುಗಳ ಮೂಲಕ ಯಾವ ರೀತಿಯಾಗಿ ಬಳಸಿಕೊಂಡು ಪರಂಪರೆಯನ್ನು ಮುಂದುವರಿಸಿಕೊಂಡು ಹೋಗುತ್ತಾರೆಂಬುದನ್ನು ವಿವರಿಸಿದ್ದಾರೆ.

ಕರ್ನಾಟಕ ಗ್ರಾಮಸೂಚಿಯಲ್ಲಿ ಇಡೀ ರಾಜ್ಯದ ಗ್ರಾಮಗಳು, ಜಿಲ್ಲಾ ಮತ್ತು ತಾಲೂಕುವಾರು ವರ್ಣಾನುಕ್ರಮ ಪಟ್ಟಿಯು ಈ ಕೃತಿಯಲ್ಲಿ ಸಿಗುತ್ತವೆ. ಗ್ರಾಮಗಳ ಪ್ರಾಚೀನ ಹೆಸರು ಮತ್ತು ಅವುಗಳ ಬಗೆಗೆ ಮಾಹಿತಿ ಇಲ್ಲದೇ ಹೋದರೂ, ಕರ್ನಾಟಕದ ಗ್ರಾಮಗಳು ಒಂದೆಡೆ ಸಿಗುವವಂತಹ ಕೃತಿಯಾಗಿದೆ. ಬೇಚಾರಕ್ ಗ್ರಾಮಗಳನ್ನು ಈ ಕೃತಿಯಲ್ಲಿ ಸೇರ್ಪಡೆಗೊಳಿಸಿಲ್ಲ. ೧೯೮೫ರ ಈಚೆಗೆ ಅನೇಕ ಹೊಸ ಗ್ರಾಮಗಳು ಉದಯಿಸಿವೆ. ಜೊತೆಗೆ ಹಿಂದಿನ ಗ್ರಾಮನಾಮಗಳು, ಆಧುನಿಕ ಮನಸ್ಸುಗಳ ಮನೋಭಾವಕ್ಕೆ ಸಿಲುಕಿ ಬದಲಾವಣೆಗೊಂಡಿವೆ. ಈ ಎಲ್ಲವುಗಳನ್ನು ಕ್ರೋಢೀಕರಿಸಿ, ಈ ಕೃತಿಯು ಮತ್ತೊಂದು ಮುದ್ರಣಕಂಡರೆ, ಗ್ರಾಮ ನಾಮಾಧ್ಯಯನಕಾರರಿಗೆ ಇದೊಂದು ಉಪಯುಕ್ತ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ.

ಸುಂದರಾವ್ ಬ.ನ. ಅವರ 'ಬೆಂಗಳೂರಿನ ಇತಿಹಾಸ' (೧೯೮೫) ಕೃತಿಯಲ್ಲಿ ಬೆಂಗಳೂರಿನ ಇತಿಹಾಸವನ್ನು ಹೇಳುತ್ತಾ, ಹೆಸರಿನ ಬಗ್ಗೆ ಬೆಂದಕಾಳಿನ ಐತಿಹ್ಯ ಬೆಣಚುಕಲ್ಲಿನ ಭೌಗೋಳಿಕ ಆಧಾರ, ಶಾಸನ ಮುಂತಾದ ಉಲ್ಲೇಖಗಳನ್ನು ನೀಡುತ್ತಾ ಬೆಂಗಳೂರಿನ ಬಗೆಗೆ ಚರ್ಚೆ ಮಾಡಿದ್ದಾರೆ.

ಶ್ರೀಕಂಠಯ್ಯ ಕೆ. ಅವರ 'ಶರಣ ಸಾಹಿತ್ಯ'(೧೯೮೬)ದಲ್ಲಿ ಪಂಪಾಕ್ಷೇತ್ರದ ವರ್ಣನೆ, ಪಂಪಾಕ್ಷೇತ್ರಕ್ಕೆ ಇರುವ ಬೇರೆ ಬೇರೆ ಹೆಸರುಗಳು, ಅಲ್ಲಿರುವ ಅನೇಕ ನಿರ್ವಚಿತ ಸ್ಥಳನಾಮಗಳನ್ನು ಕಾವ್ಯ, ಶಾಸನ

ಮುಂತಾದ ಆಧಾರಗಳಿಂದ ಕೃತಿಯಲ್ಲಿ ಪ್ರಸ್ತಾಪಿಸಲಾಗಿದೆ. ಆನೆಗೊಂದಿ, ಪಂಪಾಪುರಿ, ಪಂಪಾಕ್ಷೇತ್ರ, ವಿದ್ಯಾನಗರಿ, ವಿಜಯನಗರ, ಭಾಸ್ಕರ ಕ್ಷೇತ್ರ ಎಂಬ ಹೆಸರುಗಳಿದ್ದ ಬಗೆಗೆ ಲೇಖಕರು ತಿಳಿಸಿದ್ದಾರೆ. ಜೊತೆಗೆ ಪಂಪಾಕ್ಷೇತ್ರದ ಸುತ್ತಮುತ್ತಲಿರುವ ಅನೇಕ ತೀರ್ಥಗಳ ಹೆಸರನ್ನು ಉಲ್ಲೇಖಿಸಿದ್ದಾರೆ.

ಗೋಪಾಲಕೃಷ್ಣ ವಿ. ಅವರ 'ಸ್ಥಳನಾಮ ಅಧ್ಯಯನಗಳು' (೧೯೮೭) ಎಂಬ ಕೃತಿಯಲ್ಲಿ ಸ್ಥಳನಾಮದ ಕುರಿತಾಗಿಯೇ ಇರುವ ಈ ಪುಸ್ತಕದಲ್ಲಿ ಒಟ್ಟು ಎಂಟು ಅಧ್ಯಾಯಗಳಿವೆ. ಕೋಲಾರದ ಸ್ಥಳನಾಮಗಳ ಸಮೀಕ್ಷೆಯನ್ನು ಮಾಡಿ ಅವುಗಳ ವರ್ಗೀಕರಣವನ್ನು ಮಾಡಿದ್ದಾರೆ. ಸ್ಥಳನಾಮ ಅಧ್ಯಯನದ ಸಮಸ್ಯೆಗಳು ಹಾಗೂ ನಿವಾರಣೆ ಎಂಬುದರಲ್ಲಿ ಅಧ್ಯಯನ ಮಾಡುವಾಗ ಎದುರಾಗುವಂತಹ ಸಮಸ್ಯೆಗಳ ಕುರಿತಾಗಿ ಚರ್ಚಿಸಿದ್ದಾರೆ. ಅಧ್ಯಯನ ರೀತಿ, ಸ್ಥಳನಾಮ ಆಕರಗಳ ಸಂಗ್ರಹ ಮುಂತಾದವುಗಳ ಬಗೆಗೆ ಪ್ರಸ್ತಾಪಿಸಿದ್ದಾರೆ. ಊರಿನ ಹೆಸರುಗಳ ಬದಲಾವಣೆಯಲ್ಲಿ ಸಂಸ್ಕೃತದ ಪ್ರಭಾವವನ್ನು ಕುರಿತು ಉಲ್ಲೇಖಿಸಿದ್ದಾರೆ. ಈ ಕೃತಿಯಲ್ಲಿ ಕೋಲಾರ ಜಿಲ್ಲೆಯ ಸ್ಥಳನಾಮಗಳಲ್ಲಿ ಜಲಸೂಚಿ ಅಂಶಗಳೆಂಬುದು ಉತ್ತಮ ಲೇಖನ ಇದರಲ್ಲಿ ಜಲವಾಚಿ ಸ್ಥಳನಾಮಗಳನ್ನು ಹೆಸರಿಸಿದ್ದಾರೆ. ಕೋಲಾರದ ಸ್ಥಳನಾಮಗಳಲ್ಲಿ ಜನಾಂಗಿಕ ಅಂಶಗಳನ್ನು ಸವಿವರವಾಗಿ, ತೆಲುಗು ಕನ್ನಡದ ಸಮುದಾಯದಿಂದ ಗುರುತಿಸಿದ್ದಾರೆ. ಸ್ಥಳನಾಮಗಳ ಬಗೆಗೆ ಇನ್ನೂ ಅನೇಕ ವಿಚಾರಗಳು ಈ ಕೃತಿಯಲ್ಲಿವೆಯಾದ್ದರಿಂದ ಇದೊಂದು ಉತ್ತಮ ಆಕರಗ್ರಂಥ.

ಲಕ್ಷ್ಮಣ ತೆಲಗಾವಿ ಅವರು ಸಂಪಾದಿಸಿರುವ 'ಹರತಿಸಿರಿ' (೧೯೮೭) ಎಂಬ ಕೃತಿಯಲ್ಲಿ ಕೆಮ್ಮೂತ್ತೂರು ರಘುಪತಿ ಅವರ 'ಸ್ಥಳನಾಮಾಧ್ಯಯನದ ಇತ್ತೀಚಿನ ಒಲವುಗಳು: ಒಂದು ಸ್ಥೂಲಚಿತ್ರ' ಎಂಬ ಲೇಖನದಲ್ಲಿ ಸ್ಥಳನಾಮಗಳ ಇತಿಹಾಸ, ಮಹತ್ವ, ಸಾಧನೆ, ಭವಿಷ್ಯದಲ್ಲಿ ಅವುಗಳು ಹೇಗಿರಬಹುದು ಮುಂತಾದವುಗಳ ಬಗೆಗೆ ಚರ್ಚಿಸಿದ್ದಾರೆ. ಗೋಪಾಲಕೃಷ್ಣ ಅವರ 'ಚಿತ್ರದುರ್ಗ ಜಿಲ್ಲೆಯ ಸ್ಥಳನಾಮಗಳು ಒಂದು ಅವಲೋಕನ' ಎಂಬಲ್ಲಿ ಪಾಳೆಯಗಾರರ ಪ್ರಭಾವದಿಂದಾಗಿ ಈ ಪ್ರದೇಶದಲ್ಲಿ ನಾಗತಿಯರ ಹೆಸರಿನ ಮೇಲೆ ಗ್ರಾಮನಾಮಗಳು ಸೃಷ್ಟಿಯಾದವು. ಜೊತೆಗೆ ಐತಿಹಾಸಿಕ ಹೆಸರುಗಳೇ ಇಲ್ಲಿ ಹೆಚ್ಚಾಗಿವೆ ಎಂದು ತಿಳಿಸಿದ್ದಾರೆ. ಅನುಮಂತರಾಯ ಟಿ. ಅವರ 'ಯಳನಾಡು ಗ್ರಾಮನಾಮ ವಿವೇಚನೆ' ಎಂಬಲ್ಲಿ ಆ ಗ್ರಾಮದ ಪ್ರಾಚೀನತೆ ಮತ್ತು ಅದಕ್ಕಿರುವ ನಿಷ್ಪತ್ತಿ ಬಗೆಗೆ ತಿಳಿಸಿದ್ದಾರೆ.

ಗೋಪಾಲಕೃಷ್ಣ ವಿ. ಅವರ 'ಕೋಲಾರ ಜಿಲ್ಲೆಯ ಸ್ಥಳನಾಮಗಳು ಸಾಮಾಜಿಕ ಭಾಷಾಶಾಸ್ತ್ರ ಅಧ್ಯಯನ' (೧೯೮೮) ಎಂಬ ಪ್ರಬಂಧದಲ್ಲಿ ಕೋಲಾರ ಜಿಲ್ಲೆಯ ಸ್ಥಳನಾಮಗಳ ವರ್ಣನಾತ್ಮಕ ವ್ಯಾಕರಣ. ಪಾಶ್ಚಾತ್ಯರಲ್ಲಿ ನಡೆದ ಅಧ್ಯಯನದ ಪರಿವೀಕ್ಷಣೆ ಮತ್ತು ಕೋಲಾರ ಜಿಲ್ಲೆಯ ಸ್ಥಳನಾಮಗಳ ಸಂಗ್ರಹಣೆ, ಸ್ಥಳನಾಮಗಳ ವರ್ಣಸಮನ್ವಯ, ಆಕೃತಿಮಾ ಪರಿಶೀಲನೆ, ಸಂಧಿಪರಿಶೀಲನೆ, ಅರ್ಥಪರಿಶೀಲನೆ ಹಾಗೂ ನೈಸರ್ಗಿಕ ಸಾಂಸ್ಕೃತಿಕ ಹಾಗೂ ಚಾರಿತ್ರಿಕ ವಿಶೇಷಗಳೊಂದಿಗೆ ಸ್ಥಳನಾಮಗಳನ್ನು ಗಮನಿಸಿ ನೋಡಲಾಗಿದೆ. ಮತ್ತು ಕೃತಿಯಲ್ಲಿ ಕೋಲಾರ ಜಿಲ್ಲೆಯ ಸ್ಥಳನಾಮಗಳ

ನಿಘಂಟು ಹಾಗೂ ಸ್ಥಳನಾಮಗಳ ಬೆಗೆಗೆ ತರ್ಕಬದ್ಧವಾದ ನಿಷ್ಪತ್ತಿಯನ್ನು ನೀಡಿರುವುದು ಮುಖ್ಯವಾಗಿ ಸಾಮಾಜಿಕ ಭಾಷಾಶಾಸ್ತ್ರದ ಮೂಲಕ ವರ್ಣನಾತ್ಮಕ ವಿಶ್ಲೇಷಣೆಯನ್ನು ಒಳಗೊಂಡಿದೆ.

**Raghupahti Kemtoor, A Glossary of place name elements in Tulu and Kannada** (೧೯೮೯) ಕೃತಿಯಲ್ಲಿ ತುಳುನಾಡಿನ ಸುಮಾರು ಒಂದು ಸಾವಿರ ಗ್ರಾಮನಾಮಗಳನ್ನಾಧರಿಸಿ ಅವುಗಳ ವಾರ್ಗಿಕಗಳನ್ನು ನಿಷ್ಪತ್ತಿಯ ಮೂಲಕ ವಿವಿಧ ಅರ್ಥ, ಪ್ರಾದೇಶಿಕ ವೈಶಿಷ್ಟ್ಯ, ಬಳಕೆಯ ವಿಧಾನ, ಕನ್ನಡ ಪರಿಸರದ ಸ್ಥಳನಾಮಗಳಿಗೆ ಅಂತಹ ವಾರ್ಗಿಕ ಮತ್ತು ನಿರ್ದಿಷ್ಟ ಅಳವಡಿಕೆ, ಪ್ರಯೋಜನ ಹೀಗೆ ಹಲವಾರು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. ಜೊತೆಗೆ ಕೃತಿಯ ಆರಂಭದಲ್ಲಿ ಉಪಯುಕ್ತವಾದ ಗ್ರಂಥಸೂಚಿಯನ್ನು ನೀಡಿದ್ದಾರೆ. ಭಾಷಾವಿಜ್ಞಾನ, ನಾಮವಿಜ್ಞಾನ ಇತರ ಭಾಷೆಯ ಗ್ರಂಥಗಳನ್ನು ಪಟ್ಟಿಮಾಡಿದ್ದಾರೆ. ಈ ಬಗೆಯ ನಿಷ್ಪತ್ತಿ ಕುರಿತಾದ ಕೃತಿಗಳು ಆಯಾ ಪ್ರಾದೇಶಿಕವಾರು ರಚನೆಯಾಗುವ ಅಗತ್ಯವಿದೆ. ಈ ತೆರನಾದ ಕೃತಿಗಳು ಕನ್ನಡ ನಾಮಾಧ್ಯಯನ ಕ್ಷೇತ್ರಕ್ಕೆ ಅತ್ಯಗತ್ಯವಾಗಿದೆ.

ಕಲಬುರ್ಗಿ ಎಂ.ಎಂ. ಅವರ 'ಕನ್ನಡ ನಾಮವಿಜ್ಞಾನ' (೧೯೮೯) ಕೃತಿಯು ನಾಮಾಧ್ಯಯನ ಮತ್ತು ನಾಮಾಧ್ಯಯನದ ಬಗೆಗೆ ಅಭಿರುಚಿ ಇರುವವರೆಗೆ ಇದೊಂದು ಉತ್ತಮ ಆಕರ ಗ್ರಂಥ. ಅಧ್ಯಯನದ ಇತಿಹಾಸದಲ್ಲಿ ಹೇಳುತ್ತಾ, ಅಧ್ಯಯನಕಾರರಿಗೆ ಶಾಸನ, ಕೈಫಿಯತ್ತು, ಸ್ಥಳಪುರಾಣ, ಭೌಗೋಳಿಕ ಪರಿಸರ, ಜಾನಪದ ಪರಂಪರೆಯ ಜ್ಞಾನ ಬಹುಮುಖ್ಯವೆಂದು ಹೇಳಿದ್ದಾರೆ. ಸ್ಥಳನಾಮಗಳ ನಿಷ್ಪತ್ತಿಯನ್ನು ಪಾಮರ ನಿಷ್ಪತ್ತಿ, ಪಂಡಿತ ನಿಷ್ಪತ್ತಿ, ನಿಜನಿಷ್ಪತ್ತಿ ಎಂದು ಮೂರು ಬಗೆಯಲ್ಲಿ ವಿವರಿಸಿಕೊಂಡಲ್ಲಿ ಪ್ರಾಮಾಣಿಕ ಅಧ್ಯಯನ ಸಾಧ್ಯವೆಂದು ಕಲ್ಬುರ್ಗಿಯವರು ಅಭಿಪ್ರಾಯ ಪಡುತ್ತಾರೆ. ಗ್ರಾಮದ ಸೃಷ್ಟಿ ರಚನೆಯು ಅಲೆಮಾರಿ ಮಾನವನಿಂದ ಇಂದಿನ ನಾಗರಿಕನವರೆಗೆ ಬೆಳೆದ ಬಗೆಯನ್ನು ಗುರುತಿಸಿ ಸೃಷ್ಟಿಘಟ್ಟದ ಮೊದಲ ಹಂತ. ಇದನ್ನು ದಾಟಿದ ರಚನೆಯ ಘಟ್ಟಕ್ಕೆ ಗ್ರಾಮದ ರೂಪು ಚಲಿಸಿತು. ಈ ರಚನೆಯ ಕಾಲಾವಧಿಯಲ್ಲಿ ನಾಮಕರಣ ಪದ್ಧತಿಯು ಆರಂಭವಾಯಿತು. ತನ್ನೊಂದಿಗೆ ಇರುವ ಭೌಗೋಳಿಕ ವಾತಾವರಣದಿಂದ ಮೊದಮೊದಲು ಸ್ಥಳನಾಮಗಳು ನಿರ್ದೇಶಿಸಲ್ಪಟ್ಟವು. ಮುಂದೆ ನಿಸರ್ಗವಾಚಿಗೆ ಬದಲಾಗಿ ಜನಾಂಗವಾಚಿ, ವ್ಯಕ್ತಿವಾಚಿ ಇತ್ಯಾದಿಯಾಗಿ ಹೆಸರು ನೀಡುವ ಪದ್ಧತಿ ಆರಂಭವಾಯಿತು ಎಂದು ತಿಳಿಸಿದ್ದಾರೆ. ನಾಮದ ರಾಚನಿಕ ಸ್ವರೂಪದಲ್ಲಿ, ನಾಮದ ಅರ್ಥಸ್ವರೂಪ, ವಾರ್ಗಿಕಗಳ ಅರ್ಥ ಸ್ವರೂಪ ಅವುಗಳ ವೈಜ್ಞಾನಿಕ ವರ್ಗೀಕರಣ, ನಾಮವ್ಯತ್ಯಾಸ, ರೂಪಾಂತರ, ಭಾಷಾಂತರ, ನಾಮಾಂತರ, ಸಂಸ್ಕೃತೀಕರಣ ಮುಂತಾದ ವಿಷಯಗಳನ್ನು ಬಹು ಖಚಿತವಾಗಿ ನಿರೂಪಿಸಿದ್ದಾರೆ. ಈ ಕೃತಿಯು ಅನೇಕ ಹೊಸ ಹೊಳಹುಗಳ ಕಡೆಗೆ ಕರೆದೊಯ್ಯುತ್ತದೆ ನಾಮಾಧ್ಯಯನಕಾರರಿಗೆ ಬಹುಪಯುಕ್ತ ಗ್ರಂಥ.

ಆರ್ಕೆ ಮಣಿಪಾಲ ಅವರ 'ಹೆಸರಿನಲ್ಲೇನಿದೆ?' (೧೯೮೯) ಎಂಬ ಕೃತಿಯಲ್ಲಿ ಸ್ಥಳನಾಮ ವ್ಯಕ್ತಿನಾಮಗಳಿಗೆ ಸಂಬಂಧಿಸಿದ ಒಂಭತ್ತು ಸಂಪ್ರಬಂಧಗಳಿವೆ. ಈ ಕ್ಷೇತ್ರಕ್ಕೆ ಅಪಾರ ಕೊಡುಗೆಯನ್ನು ಲೇಖಕರು ನೀಡಿದ್ದಾರೆ. ಈ ಹಿಂದೆ ಇವರು ತುಳುನಾಡಿನ ಸ್ಥಳನಾಮಗಳು ಎಂಬ ವಿಷಯದ

ಮೇಲೆ ಪಿಎಚ್.ಡಿ. ಮಾಡಿದ್ದಾರೆ. ಇದು ಅದರ ಮುಂದುವರೆದ ಅಧ್ಯಯನವಾಗಿದೆ. ಸಂಸ್ಕೃತಿ–ಚರಿತ್ರೆಯ ಆಕರಗಳಾಗಿ ನಿಲ್ಲುವ ನಾಮಗಳ ಸಾಧ್ಯತೆ ಮತ್ತು ಸಾಧನೆಯ ಕುರಿತು ಚರ್ಚಿಸಿ, ರೂಪವನ್ನು ನಿರ್ಧರಿಸುವಾಗ ವಹಿಸಬೇಕಾದ ಜಾಗರೂಕತೆ, ಸಂಸ್ಕೃತೀಕರಣ ಮಾಡವಾಗ ರಾಜಕೀಯದಂತಹ ಕೈವಾಡ ತಪ್ಪಿಸಿ ಮೂಲ ನಿಷ್ಪತ್ತಿಯನ್ನು ಕಾಪಾಡುವುದು ಸ್ಥಳನಾಮಗಳ ಮಹತ್ವ ಮುಂತಾದವುಗಳನ್ನು ಚರ್ಚಿಸಿದ್ದಾರೆ. ಉಡುಪಿ ತಾಲೂಕಿಗೆ ಸೀಮಿತಗೊಳಿಸಿ ಅಲ್ಲಿನ ಸ್ಥಳನಾಮಗಳ ಸ್ವರೂಪ, ಸಮಸ್ಯೆ ಹಾಗೂ ಸಾಂಸ್ಕೃತಿಕ ಅಂಶಗಳನ್ನು ಎತ್ತಿ ತೋರುತ್ತಾರೆ. ಭೌಗೋಳಿಕವಾಗಿ ಕರ್ನಾಟಕದ ಇತರೆ ಪ್ರದೇಶಗಳಿಂದ ಈ ತಾಲೂಕು ಹೇಗೆ ವಿಶಿಷ್ಟತೆ ಹೊಂದಿದೆ ಎಂಬುದರ ಬಗೆಗೆ ಬರೆಯುತ್ತಾರೆ. ಹಾಗೆಯೇ ಈ ಪ್ರದೇಶದ ಸ್ಥಳನಾಮಗಳ ಭಾಷಾವೈಜ್ಞಾನಿಕ ಪರಿಶೀಲನೆಯನ್ನು ಮಾಡಿಕೊಟ್ಟಿದ್ದಾರೆ. ಇಲ್ಲಿನ ಸ್ಥಳನಾಮಗಳು ಮೂಲ ದ್ರಾವಿಡ ತುಳು ಅನ್ಯದೇಶೀಯ ಭಾಷಿಕ ನಿಯಮಕ್ಕೆ ಒಳಗಾಗುತ್ತಿವೆ ಎನ್ನುತ್ತಾರೆ. ಇದರಲ್ಲಿ ಸ್ಥಳನಾಮಗಳ ದೇಶ್ಯೀಕರಣ ಪ್ರಕ್ರಿಯೆ ಎಂಬುದು ಉತ್ತಮವಾದ ಲೇಖನ. ಸಂಸ್ಕೃತೀಕರಣದಿಂದ ಜಾನಪದರು ಹೇಗೆ ಭಿನ್ನವೆಂಬುದನ್ನು ಇಲ್ಲಿ ಅಭಿವ್ಯಕ್ತಿಸಿದ್ದಾರೆ. ತುಳುನಾಡಿನ ಸ್ಥಳನಾಮಗಳ ಘಟಕಗಳಲ್ಲಿ ವೈಜ್ಞಾನಿಕವಾಗಿ ವಿಭಾಗ ಮಾಡಿದ್ದಾರೆ. ಕೊನೆಗೆ ಈ ನಾಡಿನ ಕ್ಷೇತ್ರಕ್ಕೆ ಗುರುರಾಜಭಟ್ಟರ ಕೊಡುಗೆ ಹಾಗೂ ದಕ್ಷಿಣ ಭಾರತದ ಸ್ಥಳನಾಮಗಳ ಸಮೀಕ್ಷೆಯನ್ನು ಮಾಡಿದ್ದಾರೆ. ಆ ಹೊತ್ತಿನಲ್ಲಿ ಇದೂ ಕೂಡ ಉಪಯುಕ್ತ ಗ್ರಂಥ ಎಂದೆನ್ನಬಹುದು.

ಬಸವರಾಜ ಪೊಲೀಸ ಪಾಟೀಲ ಅವರ 'ಜಾನಪದ ಸಿರಿ' (೧೯೯೦) ಕೃತಿಯಲ್ಲಿ 'ಸ್ಥಳೀಯ ಐತಿಹ್ಯಗಳು' ಎಂಬಲ್ಲಿ ಐತಿಹ್ಯಗಳು ಹೆಚ್ಚಾಗಿ ಗುಪ್ತನಿಧಿ, ಬಲಿ, ದೆವ್ವ, ದೈವ ಮುಂತಾದ ಬಗೆಗೆ ಪ್ರಸ್ತಾಪಿಸಿರುತ್ತದೆ. ಹಾಗೆಯೇ ಕೆಲವು ಸ್ಥಳನಾಮಗಳ ಕುರಿತು ಹೇಳುತ್ತವೆ ಎಂದು ಲೇಖಕರು ಚರ್ಚಿಸಿದ್ದಾರೆ.

ಭಂಡೆ ವೈಜನಾಥ ಅವರ 'ಬೀದರ್ ಜಿಲ್ಲೆಯ ಸ್ಥಳನಾಮಗಳು' (೧೯೯೦) (ಅ.ಪ್ರ) ಸಂಶೋಧನಾ ನಿಬಂಧದಲ್ಲಿ ಹದಿನಾರು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡ ಈ ನಿಬಂಧದಲ್ಲಿ ಮೂರು ಭಾಗಗಳನ್ನು ಮಾಡಿಕೊಂಡು ಸ್ಥಳನಾಮವಿಜ್ಞಾನದ ಇತಿಹಾಸ, ಸ್ವರೂಪ, ವಿವೇಚನೆ, ಬೀದರ ಜಿಲ್ಲೆಯ ಪರಿಚಯ, ಸ್ಥಳನಾಮ ದಾಖಲಾತಿ ಮತ್ತು ನೋಂದಾವಣಿ, ಸ್ಥಳನಾಮಗಳ ಭಾಷಿಕ ಹಿನ್ನೆಲೆ, ಸಂಧಿ ಮತ್ತು ಆಕೃತಿ ಧ್ವನಿಮಾ ವ್ಯವಸ್ಥೆ, ಧ್ವನಿ ವ್ಯತ್ಯಯಗಳು, ಆಕೃತಿಮಾ ವ್ಯವಸ್ಥೆ ಹಾಗೂ ಆವರ್ತನೆ, ಸ್ಥಳನಾಮ ಪ್ರಕ್ರಿಯೆಗಳಿಗೆ ಸಂಬಂಧಿಸಿದಂತಹ ಅಂಶಗಳಿವೆ. ಭಾಗ ಎರಡರಲ್ಲಿ ಸ್ಥಳನಾಮಗಳ ಸಾಂಸ್ಕೃತಿಕ ಅಧ್ಯಯನವಿದೆ. ಒಟ್ಟಾರೆ ಈ ಕೃತಿಯು ಯಾವುದೋ ಭಾಷಿಕ ಸಿದ್ಧಾಂತದ ಅಧ್ಯಯನದಂತಿದ್ದು, ಸಂಪೂರ್ಣ ವರ್ಣನಾತ್ಮಕ ಮಾದರಿಯನ್ನು ಅನುಸರಿಸಿದೆ ಆದರೂ ಇದು ಉಪಯುಕ್ತವಾಗುತ್ತದೆ.

ಸುಬ್ಬಯ್ಯ ಎಸ್.ಎಮ್. ಅವರ 'ಮೋರಿಗೆರೆ' (೨೦೧೦) ಎಂಬ ಎಂ.ಫಿಲ್ ನಿಬಂಧದಲ್ಲಿ ಸ್ಥಳವನ್ನು ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಲೇಖಕರು ನೋಡಿದ್ದಾರೆ. ಪ್ರಾಚೀನ

ಕಾಲದಲ್ಲಿ ದೇವಾಲಯಗಳು ಹಾಗೂ ಅವುಗಳಿಗೆ ಹೊಂದಿಕೊಂಡಿದ್ದು ಮಠಗಳು, ಜೈನಬಸದಿಗಳು, ವಿದ್ಯಾಸಂಸ್ಥೆಗಳಾಗಿದ್ದವು. ಅವುಗಳಲ್ಲಿ 'ಮೋರಿಗೆರೆ' ಒಂದು ಘಟಿಕಾ ಸ್ಥಾನವಾಗಿತ್ತು. ಅಲ್ಲಿಯ ಮಠಕ್ಕೆ ದಾನ ಬಿಡುವಾಗ 'ಮಠದ ವಿದ್ಯಾದಾನಕ್ಕೆ' ಘಳಿಗೆ ಮಾಣಿಗಳ್ವರ್ಗ ದಾನ ಬಿಟ್ಟಿದುದನ್ನು ಶಾಸನದ ಆಧಾರದಿಂದ ಲೇಖಕರು ವಿವರಿಸುತ್ತಾ, ಜೊತೆಗೆ ಮೋರಿಗೆರೆಯ ಸುತ್ತಮುತ್ತಲಿರುವ ಇಟ್ಟಿಗಿ, ಗದ್ದಿಕೇರಿ, ಹೊಳಗುಂದಿ, ಕೋಗಳಿ, ಸೊನ್ನ ಇನ್ನಿತರ ಗ್ರಾಮಗಳ ಬಗೆಗೆ ಲೇಖಕರು ಪ್ರಸ್ತಾಪಿಸಿದ್ದಾರೆ.

ಶಿವಾನಂದ ಕೆಳಗಿನಮನೆ ಅವರ 'ಸುಣಕಲ್ಲು ಬಿದರಿ' (೨೦೦೫) ಕೃತಿಯಲ್ಲಿ ಸುಣಕಲ್ಲು ಬಿದರಿ ಗ್ರಾಮದ ಐತಿಹಾಸಿಕ ಹಿನ್ನೆಲೆಯನ್ನು ಶಾಸನಗಳ ಆಧಾರದಿಂದ ನಿರೂಪಿಸಿದ್ದಾರೆ. 'ಸುಣಕಲ್ಲು ಬಿದರಿ ಎಂಬ ಹೆಸರಿನ ಹಿಂದೆ ಒಂದು ಜಿಜ್ಞಾಸೆ' ಎಂಬ ಅಧ್ಯಾಯದಲ್ಲಿ ಮೇಲೆ ತಿಳಿಸಿದ ಊರಿಗೆ ಯಾವಾಗ ಹೆಸರು ಬಂತು, ಯಾರು ಆ ಹೆಸರನ್ನು ಕರೆದರು ಎಂದು ಗ್ರಾಮದಲ್ಲಿರುವ ಶಾಸನಗಳಿಂದ ತಿಳಿಯುವುದಿಲ್ಲ ಎಂದು ಹೇಳಿ, ತಮ್ಮ ವಿಚಾರವನ್ನು ಲೇಖಕರು ತಿಳಿಸುತ್ತಾರೆ. ಈ ಗ್ರಾಮದ ಸುತ್ತಲೂ ಬಯಲು ಪ್ರದೇಶದಲ್ಲಿ ಸುಣ್ಣದಕಲ್ಲುಗಳು ಹೇರಳವಾಗಿ ಹರಡಿವೆ. ಒಂದು ಅಡಿ ಆಳಕ್ಕೆ ನೆಲವನ್ನು ಅಗೆದರೆ ಸುಣ್ಣದ ಹರಳುಗಳು ಸಿಗುತ್ತವೆ ಬಹುಶಃ ಆದ್ದರಿಂದ ಈ ಗ್ರಾಮಕ್ಕೆ ಸುಣಕಲ್ಲು ಬಿದರಿ ಎಂಬ ಹೆಸರು ಬಂದಿರಬಹುದೆಂದು ಊಹಿಸುತ್ತಾರೆ.

ಜೈರಾಬಿ ಎನ್.ಎಸ್. ಅವರ 'ಬಲ್ಲಕುಂದೆ ನಾಡಿನ ಸಾಂಸ್ಕೃತಿಕ ಅಧ್ಯಯನ' (೨೦೦೯) ಎಂಬ (ಪಿಎಚ್.ಡಿ. ಅ.ಪ್ರ) ನಿಬಂಧದಲ್ಲಿ ಬಲ್ಲಕುಂದೆ ನಾಡಿನ ಪ್ರಪ್ರಥಮ ಉಲ್ಲೇಖವು ರಾಷ್ಟ್ರಕೂಟರ ಕಾಲದ ಶಾಸನದಲ್ಲಿ ಕಂಡುಬರುತ್ತದೆ ಎಂದು ಹೇಳಿ ಸಾಂಸ್ಕೃತಿಕವಾಗಿ ಆ ನಾಡು ಎಷ್ಟು ಶ್ರೀಮಂತಿಕೆಯಿಂದ ಕೂಡಿತ್ತು ಎಂಬುದನ್ನು ವಿವರಿಸುತ್ತಾರೆ. ಓರವಾಯಿ, ಬಳ್ಳಾರಿ, ಕಲ್ಲುಕಂಬ, ಕೊಳಗಲ್ಲು, ಕುಡುತಿನಿ, ನೆಲ್ಲುಡಿ, ಬಲ್ಲಕುಂದೆ, ಮಲ್ಲಯ್ಯನಗುಡ್ಡ, ಸಿರುಗುಪ್ಪ, ತೆಕ್ಕಲುಕೋಟೆ, ಕಂಪ್ಲಿ, ಕುರುಗೋಡು, ದರೋಜಿ, ಹಂಪಿ, ಕುಮ್ಮಟದುರ್ಗ, ಆನೆಗೊಂದಿ, ರಾರಾವಿ ಮೊದಲಾದ ಪ್ರದೇಶಗಳು ಬಲ್ಲಕುಂದೆ ನಾಡಿನ ಪ್ರಮುಖ ಕೇಂದ್ರಗಳಾಗಿದ್ದು, ಈ ಪ್ರದೇಶಗಳಲ್ಲಿ ಮತ್ತು ಸುತ್ತಮುತ್ತ ದೊರೆತಿರುವ ಶಾಸನಗಳ ಮೂಲಕ ಸಂಶೋಧಕರು ವಿವರಗಳನ್ನು ದಾಖಲಿಸಿದ್ದಾರೆ. ಸಾಂಸ್ಕೃತಿಕ ಅಧ್ಯಯನಕ್ಕೆ ಇದೊಂದು ಉತ್ತಮ ಆಕರವೆನ್ನಬಹುದು.

ಅಶ್ವಥ್ ಡಿ.ಎಸ್. ಅವರ ಕೊಪ್ಪಳ: ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ಪಿಎಚ್.ಡಿ. ಅಪ್ರಕಟಿತ ನಿಬಂಧದಲ್ಲಿ ಕೊಪ್ಪಳ ಉಲ್ಲೇಖಗಳ ಚಾರಿತ್ರಿಕ ಅವಲೋಕನ ಎಂಬುದರಲ್ಲಿ ಕೊಪ್ಪಳ ಎಂಬ ಸ್ಥಳನಾಮದ ಬಗೆಗಿರುವ ವಿವಿಧ ಹೆಸರುಗಳನ್ನು ಶಾಸನಗಳಲ್ಲಿ ಪ್ರಸ್ತಾಪಿಸಲಾದ ಕುಪಣಿ–ಕೊಪಣಪುರಂ, ತೀರ್ಥ–ಮುಜಾಫರ್‌ನಗರ, ಕೋಪಣನಗರ–ಸುಲ್ತಾನಗಡ, ಕೋಪಣಾದ್ರಿ–ನಿಜಾಮಗಡ, ಕೊಪ್ಪಂ–ಕೊಪ್‌ಬಾಲ್, ಕುಪ್ಪಲ್–ಕೊಪ್ಪಳ್ ಎಂದು ಮೈಸೂರು ಸರ್ಕಾರದ ಕಾಲದಲ್ಲಿ ಹೆಸರಿಸಲಾಗಿದೆ.

ದೇಜಗೌ ಅವರ 'ಸ್ಥಳನಾಮ ವ್ಯಾಸಂಗ' (೧೯೯೦) ಕೃತಿಯಲ್ಲಿ ಸ್ಥಳನಾಮಗಳಿಗೆ ಸಂಬಂಧಿಸಿದಂತೆ, ಹತ್ತು ಲೇಖನಗಳು ಈ ಕೃತಿಯಲ್ಲಿವೆ. ಸ್ಥಳನಾಮಗಳ ಉಗಮ, ಸ್ಥಳನಾಮ ವಿಜ್ಞಾನದ ವ್ಯಾಪ್ತಿ, ಪ್ರಭಾವ, ಇತಿಹಾಸ, ಸಂಶೋಧನಾ ವಿಧಾನ, ವರ್ಗೀಕರಣ ಸ್ಥಳನಾಮಗಳ ಜಾಯಮಾನ ಹಾಗೂ ಬದಲಾವಣೆ, ಕ್ಷೇತ್ರಕಾರ್ಯ, ಗ್ರಾಮನಾಮ ಜಾನಪದ ಹಾಗೂ ಮೈಸೂರು ನಗರದ ಬೀದಿಯ ಹೆಸರುಗಳು ಮುಂತಾದುವನ್ನು ವೈಜ್ಞಾನಿಕವಾಗಿ ವಿವರಿಸಿದ್ದಾರೆ. ಸ್ಥಳನಾಮ ಸಂಶೋಧಕರಿಗೆ ಕೃತಿಯು ಸಂಶೋಧನೆಯ ವಿದಿ ವಿಧಾನಗಳನ್ನು ತಿಳಿಸಿಕೊಡುತ್ತದೆ. ಪುಸ್ತಕದಲ್ಲಿ ಪ್ರಶ್ನಾವಳಿಯಿರುವುದು ವಿಶೇಷ. ಹಾಗೂ ಅನುಬಂಧಗಳಲ್ಲಿ ಕೊಡವರ ಕುಟುಂಬ ನಾಮಗಳು, ರಾಷ್ಟ್ರೀಯ ಸ್ಥಳನಾಮ ನಿಘಂಟಿನ ಅಗತ್ಯತೆ, ಹೆಸರು ಬದಲಾವಣೆಗಳ ಕುರಿತು ಟಿಪ್ಪಣಿಗಳು ಮತ್ತು ನಾಮಾಧ್ಯನಗಳ ತಾತ್ವಿಕ ಅಂಶಗಳ ಕುರಿತು ಚರ್ಚಿಸಲಾಗಿದೆ. ಹೀಗಾಗಿ ಸಂಶೋಧನೆಯಲ್ಲಿ ಅತ್ಯಂತ ಮಹತ್ವದ ಮಾರ್ಗದರ್ಶಿ ಕೃತಿಯಾಗಿದೆ.

ಲಕ್ಷ್ಮಣ ತೆಲಗಾವಿ ಅವರು ಸಂಪಾದಿಸಿದ 'ಸಂಶೋಧನಾ' (೧೯೯೧) ಕೃತಿಯಲ್ಲಿ ಸ್ಥಳನಾಮಗಳಿಗೆ ಸಂಬಂಧಿಸಿದ ಎರಡು ಲೇಖನಗಳಿವೆ. ಸ್ಥಳನಾಮಶಾಸ್ತ್ರ ಎಂಬಲ್ಲಿ ರಮೇಶ ಕೆ.ವಿ. ಅವರು ಸ್ಥಳನಾಮಶಾಸ್ತ್ರದ ಮೂಲ ಆಕರ, ಮಹತ್ವ, ವರ್ಗೀಕರಣದ ವಿಧಾನ ಹಾಗೂ ನಿಘಂಟುಗಳ ಅಗತ್ಯತೆಯ ಕುರಿತು ಹೇಳಿದ್ದಾರೆ. ಹಾಗೂ ಸ್ಥಳನಾಮ ಅಧ್ಯಯನದಲ್ಲಿ ಶಾಸನಗಳ ಉಪಯೋಗ ಎಂಬ ಲೇಖನದಲ್ಲಿ ಶಾಸನೋಕ್ತ ನಾಮಗಳನ್ನು ಪ್ರಸ್ತಾಪಿಸಿ ಅವುಗಳ ಉಪಯೋಗಗಳನ್ನು ಕುರಿತು ಚರ್ಚಿಸಿದ್ದಾರೆ.

ಬೈರೇಗೌಡ ಎಂ. ಮತ್ತು ದೊಡ್ಡಿ ಕೆ.ಸಿ. ಅವರ 'ಸ್ಥಳನಾಮ ಐತಿಹ್ಯಗಳು' (೧೯೯೧) ಎಂಬ ಲೇಖನದಲ್ಲಿ ಆನೇಕಲ್ಲು, ಕನಕಪುರ, ರಾಮನಗರ ತಾಲೂಕುಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅಲ್ಲಿನ ಸ್ಥಳನಾಮಗಳ ಕುರಿತಾಗಿ ವಿಶ್ಲೇಷಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಬೂದೊಟ್ಟಿ ಮೌನೇಶ್ವರ, ತಣಿಗೆಸೂಣೆ, ಬಟ್ಟಲುಗುಂಡೇಶ್ವರ, ಕೊಂಬಿನಕಲ್ಲು ಮುಂತಾದ ನಿರ್ವಸಿತ ಸ್ಥಳನಾಮಗಳನ್ನು ಆಯ್ದು ಈ ಹೆಸರುಗಳ ಐತಿಹಸ್ಯ, ಪುರಾಣ, ನಂಬಿಕೆ, ನಿಷ್ಪತ್ತಿಗಳ ಕುರಿತಾಗಿ ಕ್ಷೇತ್ರ ಮಾಹಿತಿಯ ಮುಖಾಂತರ ಚರ್ಚಿಸಲಾಗಿದೆ.

ನಾವಲಿಗಿ ಸಿ.ಕೆ. ಅವರ 'ಜಾನಪದ ಸ್ಪಂದನ' (೧೯೯೨) ಕೃತಿಯಲ್ಲಿ ಕೊಣ್ಣೂರು ಒಂದು ಜೈನ ಐತಿಹ್ಯ ಎಂಬ ಲೇಖನದಲ್ಲಿ ಕೊಣ್ಣೂರು ಸ್ಥಳನಾಮದ ಜನಪದ ನಿರುಕ್ತಿಯ ಬಗೆಗೆ ಪ್ರಸ್ತಾಪಿಸುತ್ತ, ಐತಿಹ್ಯ, ಶಾಸನಾತ್ಮಕ ಹೆಸರು, ಆಡುನುಡಿಯಲ್ಲಿ ಅದರ ರೂಪ ಮತ್ತು ಅದರ ಸಾಂಸ್ಕೃತಿಕ ಪರಿಸರ ಕುರಿತು ಹಾಗೂ ಜೈನ ಕಥೆಗಳಲ್ಲಿ ಉಲ್ಲೇಖವಾದ ಸ್ಥಳನಾಮಗಳ ಬಗೆಗೆ ವಿವರಿಸಿದ್ದಾರೆ.

ಮಾರಿಹಾಳ ವಿ.ಜಿ. ಅವರು ಶಿಕ್ಷಣ ಸಂಪದ (೧೯೯೨) ಎಂಬ ಅಭಿನಂದನ ಗ್ರಂಥದಲ್ಲಿ ಕೆಂಪಣ್ಣ ಪಿ.ಜಿ. ಅವರು 'ಬೆಳಗಾವಿ ಜಿಲ್ಲೆಯ ಸ್ಥಳನಾಮಗಳು' ಲೇಖನದಲ್ಲಿ ಸಂಕ್ಷಿಪ್ತವಾಗಿ

ಸ್ಥಳನಾಮ ಚರಿತ್ರೆಯನ್ನು ತಿಳಿಸಿ, ಬೆಳಗಾವಿಯ ಗ್ರಾಮನಾಗಳನ್ನು ವ್ಯಕ್ತಿ, ವೃತ್ತಿ, ಜಲ, ಶಿಲೆ, ದೈವ, ಮೃಗ, ಸಸ್ಯ ಮುಂತಾದ ಹಿನ್ನೆಲೆಯಲ್ಲಿ ವರ್ಗೀಕರಿಸುವುದರ ಜೊತೆಗೆ ಮರಾಠಿಯ ಪ್ರಭಾವವನ್ನು ಗುರುತಿಸಿದ್ದಾರೆ. ಹೀಗಾಗಿ ಅನ್ಯ ಭಾಷೆಯ ಪ್ರಭಾವದಿಂದಾಗಿ ಸ್ಥಳನಾಮಗಳಿಗೆ ಆಗುವ ಆತಂಕವನ್ನು ವ್ಯಕ್ತಪಡಿಸಿರುವುದು ಗಮನಾರ್ಹವಾಗಿದೆ.

ಭಟ್ಟ ಜಿ.ಎಸ್. ಸಂಪಾದಿಸಿದ 'ಜಾನಪದ' (೧೯೯೧-೯೩) ಕೃತಿಯಲ್ಲಿ ನಮ್ಮ ಸುತ್ತಿನ ಕೆಲವು ಸ್ಥಳನಾಮಗಳು ಎಂಬ ಲೇಖನದಲ್ಲಿ ಶ್ರೀ ಕುರುವ ಬಸವರಾಜ ಅವರು ಸ್ಥಳನಾಮಗಳ ನಿರ್ದೇಶನದ ಹಿಂದಿನ ಕಾರಣಗಳನ್ನು ಪ್ರಾಕೃತಿಕ, ಚಾರಿತ್ರಿಕ, ವ್ಯಕ್ತಿಗತ, ಜನಾಂಗಿಕ, ಕಸುಬಿನ ಹಿನ್ನೆಲೆಯಿಂದ ಸ್ಥಳನಾಮಗಳನ್ನು ಗುರುತಿಸಿರುದು ಈ ಲೇಖನದ ಪ್ರಯತ್ನವಾಗಿದೆ.

ರಮೇಶ ಬೇ.ಗೋ. ಅವರ 'ಜನಪ್ರಿಯ ೩೦೦ ಸ್ಥಳನಾಮಗಳು' (೧೯೯೪) ಕೃತಿಯಲ್ಲಿ ಕರ್ನಾಟಕದ ಜಿಲ್ಲಾ ಕೇಂದ್ರಗಳು ಹಾಗೂ ಐತಿಹಾಸಿಕ ಪ್ರಮುಖ ಪುಣ್ಯ ಕ್ಷೇತ್ರಗಳ ಸ್ಥಳನಾಮಗಳನ್ನು ವಿವರಿಸಿ, ಆ ಸ್ಥಳನಾಮಗಳ ಐತಿಹಾಸಿಕ ಮಹತ್ವ, ನಿಷ್ಪತ್ತಿ, ಪುರಾಣಗಳ ವ್ಯಾಖ್ಯಾನ, ಜಾನಪದ ಐತಿಹ್ಯ, ಮೌಖಿಕ ಪರಂಪರೆಯ ನಿರುಕ್ತಿ ಹೀಗೆ ಹಲವಾರು ವೈವಿಧ್ಯದ ವಿಷಯಗಳನ್ನು ಸಂಗ್ರಹಿಸಿ ಹೇಳಿದ್ದಾರೆ. ಕ್ಷೇತ್ರಕಾರ್ಯದಿಂದ ದೊರೆಯುವ ಈ ಅಧ್ಯಯನದಲ್ಲಿ ಕೆಲವು ಊಹಾತ್ಮಕ ವಿವರಣೆಗಳಿದ್ದರು ಕೃತಿ ಸಂಗ್ರಹ ಯೋಗ್ಯ ಸ್ಥಳನಾಮ ತಿಳಿವಳಿಕೆಗೆ ಒಂದು ರೂಪಿಕೆಯನ್ನು ನೀಡುತ್ತದೆ.

ರಾಜೇಗೌಡ ಎಚ್.ಕೆ. ಮತ್ತು ರಾಜೇಂದ್ರ ಡಿ.ಕೆ. ಅವರು ಸಂಪಾದಿಸಿದ 'ಅಮೃತ ವರ್ಷ' (೧೯೯೫) ಕೃತಿಯಲ್ಲಿ 'ಸ್ಥಳನಾಮ ಅಧ್ಯಯನಕ್ಕೆ ದೇಜಗೌ ಅವರ ಕೊಡುಗೆ (ಮುತ್ತುರಾಜ) ಹಾಗೂ ಸ್ಥಳನಾಮ ವ್ಯಾಸಂಗ (ಬಿ.ಜಿ. ಕನಕೇಶಮೂರ್ತಿ) ಎಂಬೆರಡು ಲೇಖನಗಳನ್ನು ಒಳಗೊಂಡಿದೆ. ಈ ಎರಡೂ ಲೇಖನಗಳು ದೇಜಗೌ ಅವರು ಸ್ಥಳನಾಮ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಯನ್ನು ನಿರೂಪಿಸುತ್ತದೆ.

ಕಲ್ಬುರ್ಗಿ ಎಂ.ಎಂ. ಅವರ 'ಬನವಾಸಿ ಸ್ಥಳನಾಮ ವಿವೇಚನೆ' (೧೯೯೫) ಎಂಬ ಲೇಖನದಲ್ಲಿ ಬನವಾಸಿಯ ಉತ್ತರಪದ ಅಸಿ, ಆಸೆಯ ಬಗ್ಗೆ ಸರಿಯಾದ ಮಾಹಿತಿಗಳಿಲ್ಲ. ಬಹುಶಃ ಇದು ಇತ್ತೀಚಿನ ಪದ ಇದರ ಪ್ರಾಚೀನ ರೂಪ ಕೆಯ್=(ಸ್ಥಳ ಎಂದರ್ಥ) ಎಂದಾಗಿರಬೇಕೆಂದು ವಿವರಿಸಿದ್ದಾರೆ.

ಪೂಜಾರ ವಿ.ಜಿ. ಅವರ 'ಕನ್ನಡ ಸಾಹಿತ್ಯ ಸಂಬಂಧ' (೧೯೯೫) ಕೃತಿಯಲ್ಲಿ ಗುಲ್ಬರ್ಗಾ ತಾಲೂಕಿನ ಸ್ಥಳನಾಮಗಳು: ಭಾಷಿಕ ಸಾಂಸ್ಕೃತಿಕ ಅಧ್ಯಯನ' ಎಂಬ ಒಂದು ಲೇಖನದಲ್ಲಿ, ಭೌಗೋಳಿಕ-ಭಾಷಿಕ-ಸಾಂಸ್ಕೃತಿಕ ಮಹತ್ವವನ್ನು ಸ್ಥಳನಾಮಗಳ ಮೂಲಕ ಗುರುತಿಸುತ್ತಾ, ಮುಸ್ಲಿಂ ಆಡಳಿತದ ಪ್ರಭಾವದಿಂದ ಗುಲಬರ್ಗಾ ತಾಲೂಕಿನ ಸ್ಥಳನಾಮಗಳ ಮೇಲಾದ ಉರ್ದುವಿನ ಪ್ರಭಾವವನ್ನು ಅಬಾದ್-ಗಾಂವ್-ಖೇಡ ಎಂಬ ವಾರ್ಗಿಕಗಳು, ಫಿರೋಜ್, ಸುಲ್ತಾನ್, ಅಹ್ಮದ್ ಮುಂತಾದ ವ್ಯಕ್ತ್ಯಂಶದ ನಿರ್ದಿಷ್ಟಗಳಿಂದ ಗುರುತಿಸುತ್ತಾ ತಾಲೂಕಿನ ಬಯಲು ಭೂ ಪರಿಸರ, ಸಂಸ್ಕೃತಿ, ಸ್ಥಳನಾಮಗಳ ಮೇಲೆ ಉಂಟು ಮಾಡಿದ ಪ್ರಭಾವವನ್ನು ಗುರುತಿಸಲಾಗಿದೆ.

ಜಗದೀಶ ಮಠದ ಅವರ 'ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳ ಅಧ್ಯಯನ' (೧೯೯೫) ಎಂ.ಫಿಲ್ (ಅಪ್ರಕಟಿತ) ಸಂಪ್ರಬಂಧದಲ್ಲಿ ಐತಿಹ್ಯ ವಿವರಣೆ, ವ್ಯಕ್ತಿ, ಸ್ಥಳ, ಘಟನಾ ಪ್ರಧಾನ ಸ್ಥಳನಾಮಗಳು ಅವುಗಳ ವರ್ಗೀಕರಣ, ಪ್ರತಿನಾಮ, ಸಾಮಾಜಿಕ ಹಾಗೂ ಸ್ಥಳನಾಮ ಕುರಿತಾಗಿ ಕೈಫಿಯತ್ತಿನ ಪಠ್ಯಗಳನ್ನು ನಿರೂಪಿಸಲಾಗಿದೆ. ಈ ಕುರಿತಾಗಿ ಕೈಫಿಯತ್ತುಗಳ ಮೂಲಕ ಸ್ಥಳನಾಮಗಳ ಅಧ್ಯಯನ ಮಾಡಿದ ಮೊದಲ ನಿಬಂಧವಿದು. ಸಾಧ್ಯವಾದಷ್ಟು ಅಧ್ಯಯನವನ್ನು ತಾತ್ವಿಕತೆಯ ಆಧಾರದ ಮೇಲೆ ಮಂಡಿಸಲಾಗಿದೆ.

ಕಲ್ಬುರ್ಗಿ ಎಂ.ಎಂ ಅವರ 'ಮಾರ್ಗ-೨'(೧೯೯೫)ನೇ ಸಂಪುಟದಲ್ಲಿ ಚಿತ್ರದುರ್ಗದ ಪ್ರಾಚೀನ ಹೆಸರು; ಬನವಾಸಿ ಸ್ಥಳನಾಮ ವಿವೇಚನೆ; ಊರ ಹೆಸರುಗಳ ಕೊನೆಯ ವರ-ವಾರ-ಧಾರವಾಡ ಗ್ರಾಮನಾಮ ವಿವೇಚನೆ ಎಂಬ ವಿಷಯಗಳನ್ನು ಕಲ್ಬುರ್ಗಿಯವರು ಚರ್ಚಿಸಿದ್ದಾರೆ. ಈ ಲೇಖನಗಳು ಬಿಡಿಯಾಗಿ ಕೆಲವು ಪತ್ರಿಕೆಗಳಲ್ಲಿ ಪ್ರಾಚೀನ ನಿಷ್ಪತ್ತಿಯ ನಿರ್ಧಾರ ಮತ್ತು ಸಂಪ್ರಬಂಧಗಳಲ್ಲಿ ವಿಶ್ಲೇಷಿಸಲಾಗಿದೆ.

ಲಿಂಗಯ್ಯ ಡಿ. ಚಕ್ಕೆರೆ ಶಿವಶಂಕರ ಅವರ 'ಜಾನಪದ ಸಂಪತ್ತು' (೧೯೯೬) ಕೃತಿಯಲ್ಲಿ ಒಟ್ಟು ಹದಿನಾರು ಲೇಖನಗಳಿದ್ದು, ವಿವಿಧ ಲೇಖಕರಿಂದ ಬರೆಯಲ್ಪಟ್ಟು ಸ್ಥಳನಾಮಕ್ಕೆ ಸಂಬಂಧಿಸಿದ ಈ ಪ್ರಬಂಧಗಳು ಹೆಚ್ಚಾಗಿ ಜಾನಪದ ನೆಲೆಯಲ್ಲಿ ಗೋಚರಿಸುತ್ತವೆ. ಕರ್ನಾಟಕದ ವಿವಿಧ ಪ್ರದೇಶಕ್ಕೆ ವ್ಯಾಪಿಸಿಕೊಂಡ ಇಲ್ಲಿನ ಲೇಖನಗಳು ಸ್ಥಳನಾಮಗಳ ಮಾಧ್ಯಮ, ನಡೆದು ಬಂದ ದಾರಿ, ಕನ್ನಡ ನಾಡಿನಲ್ಲಿ ಅದರ ಬೆಳವಣಿಗೆ, ಅಧ್ಯಯನದ ರೂಪರೇಷಗಳು, ಸಮಸ್ಯೆ ನಿವಾರಣೆಗಳು, ಪ್ರಯೋಜನ-ಮಹತ್ವ, ಕನ್ನಡ ಗ್ರಾಮನಾಮಗಳ ಮೇಲೆ ತೆಲುಗು-ಮರಾಠಿ ಮುಂತಾದ ಅನ್ಯ ಭಾಷೆಯ ಪ್ರಭಾವ, ಭಾಷಾ ವೈಜ್ಞಾನಿಕ ಚರ್ಚೆ ಕುರಿತಾಗಿ ಐತಿಹ್ಯ, ಕಾವ್ಯ, ಲಾವಣಿಗಳಿವೆ.

ವೀರಭದ್ರಶರ್ಮ ಕೆ.ಎಂ. ಅವರ 'ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು' (೧೯೯೬) ಎಂಬ ಅಪ್ರಕಟಿತ ನಿಬಂಧದಲ್ಲಿ ಹತ್ತು ಅಧ್ಯಾಯಗಳಿದ್ದು, ಬಳ್ಳಾರಿಯ ಭೌಗೋಳಿಕ ಪರಿಸರದ ಸ್ವರೂಪವನ್ನು ಮತ್ತು ಆ ಜಿಲ್ಲೆಯನ್ನಾಳಿದ ವಿವಿಧ ರಾಜವಂಶಗಳನ್ನು ಹೇಳುತ್ತಾ ಗ್ರಾಮನಾಮಗಳ ಬಗೆಗೆ ಭೌಗೋಳಿಕ, ಸಾಂಸ್ಕೃತಿಕ, ಜನಾಂಗಿಕ ಎಂದು ವರ್ಗೀಕರಿಸಿ ಸ್ಥಳನಾಮಗಳ ಹಿನ್ನೆಲೆಯಲ್ಲಿ ಬೌದ್ಧ, ಜೈನ, ವೈಷ್ಣವ, ಶೈವ ಮುಂತಾಗಿ ತರ್ಕಬದ್ಧವಾದ ವಿಚಾರಗಳನ್ನು ಮಂಡಿಸುವ ಮೂಲಕ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಹೇಳಿದ್ದಾರೆ. ಕೃತಿಯು ಸ್ಥಳನಾಮಗಳ ಶಬ್ದಕೋಶವನ್ನು ಒಳಗೊಂಡಿದೆ. ಸ್ಥಳನಾಮಗಳ ದಾಖಲಾತಿಗಾಗಿ ಶಾಸನ ಮತ್ತಿತರ ಹಳೆಯ ದಾಖಲೆಗಳನ್ನು ನೀಡಲಾಗಿದೆ. ಭಾಷಿಕ ಹಿನ್ನೆಲೆಯಲ್ಲಿ ಸ್ಥಳನಾಮಗಳನ್ನು ಕುರಿತು ವಿವರಿಸಲಾಗಿದೆ. ಹಾಗೂ ಧ್ವನಿಮಾ, ಆಕೃತಿಮಾ ವಿಚಾರದಲ್ಲಿ ನಾಮದ ಮಹತ್ವ ಮತ್ತು ಸ್ಥಳನಾಮಗಳಿಂದ ಸಂಧಿ ಪರಿಶೀಲನೆ ಮಾಡಿ ಕೊನೆಯಲ್ಲಿ ಬಳ್ಳಾರಿ ಜಿಲ್ಲೆಯ ಕೆಲವು ವಿಶಿಷ್ಟ ಸ್ಥಳನಾಮ ಅವುಗಳ ಕೊಡುಗೆ ಹಾಗೂ ಮಹತ್ವ ಹೇಳಿದ್ದಾರೆ. ಈ ನಿಬಂಧದಲ್ಲಿ ವಾರ್ಗಿಕಗಳನ್ನು ಹೆಚ್ಚಾಗಿ ಗಮನಿಸದೇ ಭಾಷಿಕವಾಗಿ ಬಳ್ಳಾರಿಯ ಉಪಭಾಷೆಯ ಬಗೆಗೆ ವಿವರಿಸುವ ಸಂಶೋಧಕರು ಗ್ರಾಮನಾಮಗಳಿಗೆ ನೇರವಾಗಿ ತಳಕು ಹಾಕುವುದಿಲ್ಲ.

ವಿಶ್ವನಾಥ ಅವರ 'ಸಕಲೇಶಪುರ ಪರಿಸರದ ಸ್ಥಳನಾಮಗಳು' (೧೯೯೬) ಕೃತಿಯು ಮುಖ್ಯವಾಗಿ ಎಂಟು ಅಧ್ಯಾಯಗಳನ್ನು ಒಳಗೊಂಡ ಅಪ್ರಕಟಿತ ಸಂಶೋಧನಾ ಮಹಾ ಪ್ರಬಂಧವಾಗಿದೆ. ಅಧ್ಯಯನದಲ್ಲಿ ಉದ್ದೇಶ ವ್ಯಾಪ್ತಿಯನ್ನು ಹೇಳುತ್ತಾ ಸ್ಥಳನಾಮಗಳ ಸ್ವರೂಪ, ಉಗಮ, ಅಧ್ಯಯನದ ಇತಿಹಾಸ ಮತ್ತು ವರ್ಗೀಕರಣ ಕುರಿತು ಹೇಳಿದ್ದಾರೆ. ಮೂರನೇ ಅಧ್ಯಾಯದಲ್ಲಿ ಸ್ಥಳನಾಮಾಧ್ಯಯನದ ಪ್ರಯೋಜನ, ಐತಿಹಾಸಿಕ, ಸಾಂಸ್ಕೃತಿಕ, ಸಾಮಾಜಿಕ, ಜಾನಪದ ಅಂಶಗಳನ್ನು ಹೇಳಲಾಗಿದ್ದು, ಸಾಮಾಜಿಕ ಅಂಶವನ್ನು ಹೇಳುವಲ್ಲಿ ಬೌದ್ಧರಿಗೆ ಸಂಬಂಧಿಸಿ ಬೂದಿಹಾಳು, ಬೂದಿಪಡಗ ಎಂಬ ಉದಾಹರಣೆ ನೀಡಲಾಗಿದೆ. ಸಕಲೇಶಪುರವನ್ನು ಕೇಂದ್ರವಾಗಿಟ್ಟುಕೊಂಡು ಸಂಶೋಧಕರು ತಾಲೂಕಿನ ಸ್ವರೂಪ, ವರ್ಗೀಕರಣ ಮತ್ತು ಭಾಷಿಕ ವಿಶ್ಲೇಷಣೆ ವರ್ಣನಾತ್ಮಕ ಮಾದರಿಯನ್ನು ಅನುಸರಿಸಿದ್ದಾರೆ.

ವಿಶ್ವನಾಥ ಅವರ 'ಸ್ಥಳನಾಮಗಳು' (೧೯೯೬) ಎಂಬ ಕೃತಿಯಲ್ಲಿ ಏಳು ಸಂಪ್ರಬಂಧಗಳಿವೆ. ಸ್ಥಳನಾಮಗಳ ಸ್ವರೂಪ, ವರ್ಗೀಕರಣ, ಅಧ್ಯಯನದ ಇತಿಹಾಸ, ಪ್ರಯೋಜನ, ನಾಮಗಳ ಐತಿಹಾಸಿಕತೆ, ಸಾಮಾಜಿಕತೆ, ಸಾಂಸ್ಕೃತಿಕತೆ ಮತ್ತು ಜಾನಪದಿಯ ಅಂಶಗಳನ್ನು ವಿವರಿಸುತ್ತ, ಹಿಂದೂ ಧರ್ಮದಲ್ಲಿ ಬರುವ ಸ್ಥಳನಾಮ ಎಂದು ವಿವರಿಸುತ್ತ ಶೈವರಿಗೆ ಉಡುತಡಿ, ಸೊನ್ನಲಿಗೆ, ಬೌದ್ಧರಿಗೆ ಸಂಬಂಧಿಸಿ ಬೂದಿಹಾಳು, ಬೂದಿಪಡಗ, ಸಿಖ್ಖರಿಗೆ ಸಿಕಂದರಾಬಾದ್‌ಗಳಾಗಿ ಉದಾಹರಿಸಿರುವುದು ಅಷ್ಟಾಗಿ ಸಮಂಜಸವಲ್ಲ. ಅಧ್ಯಾಯಗಳ ಕೊನೆಯಲ್ಲಿ ಸ್ಥಳನಾಮದ ನಿಷ್ಪತ್ತಿಯನ್ನು ಕೊಟ್ಟಿರುವುದು ನೋಡಬಹುದು.

ರಾಜಣ್ಣ ಜಿ.ವಿ. ಅವರ 'ಕನ್ನಡ ಸಂಸ್ಕೃತಿ, ಶಂಬಾಜೋಷಿಯವರ ಆಲೋಚನೆಗಳು' (೧೯೯೭) ಎಂಬ ನಿಬಂಧದಲ್ಲಿ ಭಾಷಿಕ ಪ್ರಮಾಣ ಮತ್ತು ಸ್ಥಳನಾಮಗಳ ಮೂಲಕ ಕಂನಾಡಿನ ವ್ಯಾಪ್ತಿ ಎಂಬ ಉಪ ಅಧ್ಯಾಯದಲ್ಲಿ ಭಾಷಿಕ ಪ್ರಮಾಣಗಳನ್ನು ಸ್ಥಳನಾಮಗಳ ಮೂಲಕ ಸಂಸ್ಕೃತಿಯನ್ನು ಅರಿತು, ಕಂನಾಡಿನ ಮೇರೆಯನ್ನು ಗುರುತಿಸುವುದರಲ್ಲಿ ಶಂಬಾ ಜೋಶಿಯವರು ಮಾಡಿರುವ ಪ್ರಯತ್ನಗಳ ಕುರಿತು ಹೇಳಲಾಗಿದೆ.

ನಾಗರಾಜಯ್ಯ ಹಂ.ಪ. ಅವರ 'ಚಂದ್ರಕೊಡೆ' (೧೯೯೭) ಕೃತಿಯಲ್ಲಿ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಮೂರು ಲೇಖನಗಳು ಇವೆ. 'ಶಾಸನಗಳಲ್ಲಿ ಊರ ಹೆಸರುಗಳು ಜೈನ ಪಳಯುಳಿಕೆ' ಎಂಬ ಲೇಖನದಲ್ಲಿ ಕರ್ನಾಟಕದ ಜೈನರಿಗೆ ಸಂಬಂಧಿಸಿದ ಶಾಸನೋಕ್ತ ಸ್ಥಳನಾಮಗಳನ್ನು ಹೇಳಿದ್ದಾರೆ. ಶ್ರವಣನಹಳ್ಳಿ, ಮುಕ್ಕೊಡೆಹಳ್ಳಿ, ಬಸ್ತಿಹಳ್ಳಿ, ಜಿನಹಳ್ಳಿ, ಸವಣದತ್ತಿ (ಸವದತ್ತಿ) ಮುಂತಾದ ಉದಾಹರಣೆ ನೀಡಿದ್ದಾರೆ. ಇಂದು ಬದಲಾಗಿರುವ ಸ್ಥಳನಾಮಗಳ ಮೂಲ ನಿಷ್ಪತ್ತಿಯನ್ನು ಹಂಪನಾ ಹೇಳಿದ್ದಾರೆ. ಶಾಸನಗಳಲ್ಲಿ ಜೈನ ತೀರ್ಥಗಳು ಎಂಬ ಲೇಖನದಲ್ಲಿ ತೀರ್ಥ ಎಂಬ ವಾರ್ಗಿಕವನ್ನು ಪುಣ್ಯಕ್ಷೇತ್ರಗಳಿಗೆ ಸೇರಿಸುವ ಪ್ರವೃತ್ತಿ ಹಾಗೂ ಜೈನರಲ್ಲಿ ತೀರ್ಥದ ಮಹತ್ವ, ಶಾಸನೋಕ್ತ ಮೂವತ್ತು ಮೂರು ತೀರ್ಥಗಳು ಮತ್ತು ಅವುಗಳ ವಿವರಣೆ ತುಂಬಾ ಸೊಗಸಾಗಿ ಬರೆದಿದ್ದಾರೆ. 'ಶಾಸನಗಳಲ್ಲಿ ಬಸದಿಗಳು' ಎಂಬ ಲೇಖನದಲ್ಲಿ ಜೈನರ ಬಸದಿಗಳು, ಆಚಾರ್ಯರ ಕುಲಗುರುಗಳ ತೀರ್ಥಂಕರ ವ್ಯಕ್ತಿಗಳ ಸ್ತ್ರೀಯರ ಮುಂತಾದವರಿಂದ ನಾಮ ನಿರ್ದೇಶನಗೊಂಡಿರುವುದನ್ನು ಸವಿವರವಾಗಿ ಶಾಸನಗಳ ಮೂಲಕ ವಿವರಿಸಿದ್ದಾರೆ.

ಸದಾನಂದ ಕನವಳ್ಳಿ, ವೀರಣ್ಣ ರಾಜೂರು ಅವರು ಸಂಪಾದಿಸಿದ 'ಮಹಾಮಾರ್ಗ ಕನ್ನಡನಾಮ ವಿಜ್ಞಾನ' (೧೯೯೮) ಎಂಬ ಲೇಖನದಲ್ಲಿ ಆರ್ಕೆ ಮಣಿಪಾಲ ಅವರು ಒಟ್ಟು ಸ್ಥಳನಾಮ, ವ್ಯಕ್ತಿನಾಮ ಕುರಿತು ಸಮಗ್ರ ವಿಷಯವನ್ನು ಮಂಡಿಸಿ, ನಾಮಾಧ್ಯಯನದ ಇತಿಹಾಸ, ಪ್ರಸ್ತುತತೆ, ಮಹತ್ವ, ಪ್ರಯೋಜನ, ಭಾಷಿಕ, ಸಾಂಸ್ಕೃತಿಕ ಅಂಶಗಳು, ಸಂಸ್ಕೃತೀಕರಣದ ಪ್ರಭಾವ, ಜನಪದ, ಶಿಷ್ಟರಲ್ಲಿ ಸ್ಥಳನಾಮ ನಿಷ್ಪತ್ತಿ ಮುಂತಾದ ವಿಷಯಗಳನ್ನು ತಾತ್ವಿಕವಾಗಿ ವಿವೇಚಿಸಿರುವುದು ಮತ್ತು ಸ್ಥಳನಾಮಗಳಲ್ಲಿ ಗ್ರಾಮನಾಮಗಳಿಗಿಂತ ಕ್ಷೇತ್ರನಾಮಗಳು (ಹೊಲ, ಗದ್ದೆ, ಮನೆ, ಬೀದಿ ಇತ್ಯಾದಿ) ಸೂಕ್ಷ್ಮ ವಿಚಾರಗಳನ್ನು ಕುರಿತಾಗಿ ವಿವರಿಸಿದ್ದಾರೆ.

ವಸಂತಕುಮಾರ ಪೆರ್ಲ ಅವರ 'ಸ್ಥಳನಾಮಗಳ ಮೂಲಕ ಜಾತಿ ನಿರ್ದೇಶನ' (೧೯೯೧) ಎಂಬ ಲೇಖನದಲ್ಲಿ ಸ್ಥಳ ಸಂಬಂಧವಾಗಿ ಬಳಕೆಯಾಗುವ ಉಪನಾಮಗಳು ಆಧುನಿಕ ಕಾಲದಲ್ಲಿ ಜಾತಿ ನಿರ್ದೇಶಕವಾಗಿರುವುದಿಲ್ಲ. ಹಾಗೂ ತುಳುನಾಡಿನ ಬ್ರಾಹ್ಮಣರ ಕೆಲವು ಉಪನಾಮಗಳಿಂದ ಸ್ಥಳಗಳನ್ನು ಪರಿಶೀಲಿಸಿದ್ದಾರೆ. ತುಳುನಾಡಿನ ಸ್ಥಳಗಳ ವಾರ್ಗಿಕ ಮತ್ತು ನಿರ್ದಿಷ್ಟಗಳಲ್ಲಿನ ವಿಶೇಷತೆಯನ್ನು ಗುರುತಿಸಿದ್ದಾರೆ.

ನಾಗಭೂಷಣ ಸಿ. ಅವರ 'ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ' (೧೯೯೯) ಕೃತಿಯಲ್ಲಿ ದೇವಾಲಯಗಳ ಹೆಸರುಗಳು ಎಂಬ ಲೇಖನದಲ್ಲಿ ಶಾಸನ ಮತ್ತು ಸಾಹಿತ್ಯ ಉಲ್ಲೇಖದಿಂದ ಪ್ರಸಿದ್ಧಿ ದೇವರ ಹೆಸರಿನಲ್ಲಿ ದೇವಾಲಯಗಳ ನಿರ್ಮಾಣ ಮತ್ತು ನಾಮನಿರ್ದೇಶನ ಪುಣ್ಯಕ್ಷೇತ್ರಗಳ ಹೆಸರಿನಲ್ಲಿ; ಗುರುಗಳ ಹೆಸರಿನಲ್ಲಿ; ವ್ಯಕ್ತಿಗಳ ಹೆಸರಿನಲ್ಲಿ; ತಂದೆ-ತಾಯಿಯರ ಹೆಸರಿನಲ್ಲಿ; ರಾಜಮನೆತನದವರ ಹೆಸರಿನಲ್ಲಿ; ಗಾವುಂಡರ, ದಂಡನಾಯಕರ; ವಣಿಕರ ಸಾಮಾನ್ಯ ಜನರು; ಗ್ರಾಮದೇವತೆಗಳ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸಿ, ಅವರವರಿಗೆ ಸಂಬಂಧಿಸಿದ ನಾಮಗಳನ್ನು ನಿರ್ದೇಶನ ಮಾಡಿದ ಬಗೆಯನ್ನು ಇಲ್ಲಿ ವಿವರಿಸಲಾಗಿದೆ.

ನೇಗಿನಹಾಳು ಎಂ.ಬಿ. ಅವರು ನೇಗಿನಹಾಳ ಪ್ರಬಂಧಗಳು ಎಂಬ ಸಂಶೋಧನಾ ಕೃತಿಯಲ್ಲಿ ೬೦ ಸಂಶೋಧನಾ ಲೇಖನಗಳಲ್ಲಿ ನಾಮಗಳಿಗೆ ಸಂಬಂಧಿಸಿದಂತೆ ಸ್ಥಳವಾಚಕಗಳ ವರ ಮತ್ತು ವಾರಗಳು, ಕರ್ನಾಟಕ ಸ್ಥಳನಾಮ ವ್ಯಕ್ತಿನಾಮಗಳ ಅಧ್ಯಯನ ಮತ್ತು ಕರ್ನಾಟಕದ ಪ್ರಾಕೃತ ಶಾಸನಗಳಲ್ಲಿನ ವ್ಯಕ್ತಿ ನಾಮಗಳು ಎನ್ನುವ ಮೂರು ಪ್ರಬಂಧಗಳು ನನ್ನ ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ. ಇದರಲ್ಲಿ ಕರ್ನಾಟಕ ಸ್ಥಳನಾಮ ವ್ಯಕ್ತಿನಾಮಗಳ ಅಧ್ಯಯನವನ್ನು ಈ ಕೆಳಕಂಡಂತೆ ಸಮೀಕ್ಷಿಸಲಾಗಿದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ನಾಮಗಳ ಅಧ್ಯಯನ ಕ್ಷೇತ್ರಗಳಲ್ಲಿ ಶಂಬಾ ಅವರೇ ಮೊದಲು ಕಾರ್ಯಪ್ರವೃತ್ತರಾದರು. ಸ್ಥಳವಾಚಕದ ಜೊತೆಗೆ ಮೈಲಾರ, ಖಂಡೋಬ ಹೆಗ್ಗಡೆ ಮುಂತಾದ ಕೆಲವು ದೇವತಾವಾಚಕಗಳ ವಿಷಯದಲ್ಲಿಯೂ ಡಾ. ಶಂಬಾ ತಮ್ಮ ಅಭಿಪ್ರಾಯ ಮಂಡಿಸಿದ್ದರು ಎಂದು ನೇಗಿನಹಾಳ ಹೇಳುತ್ತಾ ಜೆ.ಎಫ್. ಫ್ಲೀಟ್, ಬಿ.ಎಲ್. ರೈಸ್ ಮುಂತಾದ ವಿದೇಶಿಯರ ಜೊತೆಗೆ ಆರ್. ನರಸಿಂಹಾಚಾರ್, ನೆಲಮಂಗಲ ಲಕ್ಷ್ಮಿನಾರಾಯಣರು,

ಪಂಚಮುಖಿಯವರು, ಪಿ.ಬಿ. ದೇಸಾಯಿ ಮೊದಲಾದವರು ಗ್ರಾಮನಾಮ, ವ್ಯಕ್ತಿನಾಮಗಳ ಬಗ್ಗೆ ಪ್ರಾಸಂಗಿಕವಾಗಿ ಚರ್ಚಿಸಿದ್ದಾರೆ. ಕದಂಬ, ಪುಲಕೇಶಿ, ಪಂಪ, ಹಂಪಪೂರ, ಹಂಪಾಸಾಗರ, ಇತಿಲ ಇನ್ನು ಅನೇಕ ಪದಗಳ ಬಗೆಗೆ ವಿವೇಚನೆಯನ್ನು ಮಾಡಿದ್ದಾರೆ. ಪಂಪ, ಪುಲಕೇಶಿ ಎಂಬಂಥ ಪುರುಷರ ಹೆಸರುಗಳ ಜೊತೆಗೆ ಕಪ್ಪೆ ಅರಭಟ್ಟ, ಅಲ್ಲಮ, ಅಬ್ಬಣಬ್ಬೆ, ಮಧ್ವಾಚಾರ್ಯ ಎಂಬ ಹೆಸರುಗಳಲ್ಲದೆ ಮೈಲಾರ, ಖಂಡೋಬಾ, ಎಲ್ಲಮ್ಮ, ಗೋಕರ್ಣ, ಬಾದುಬ್ಬೆ, ಭಳಾರಿ, ಬನದುಬ್ಬೆ, ಚುಂಚ, ಜುಂಜಪ್ಪ, ಮಲ್ಲಿಕಾರ್ಜುನ ಇತ್ಯಾದಿ ದೇವರುಗಳ ಹೆಸರಿನ ಚರ್ಚೆಯೂ ಆಗಿ ನಡೆಯುತ್ತಾ ಬಂದಿದೆ. ಈ 'ದೇವತಾ ವಾಚಕಗಳನ್ನು ಸರಿಯಾಗಿ ವಿಶ್ಲೇಷಿಸುವುದು ಸಾಧ್ಯವಾದರೆ ನಮ್ಮ ಸಂಸ್ಕೃತಿಯ ಚಿತ್ರಣ ಹೆಚ್ಚು ಸ್ಪಷ್ಟವಾಗಲೂ ಸಾಧ್ಯ' ಈ ದಿಶೆಯಲ್ಲಿ ನಾಮವಾಚಕಗಳ ಅಧ್ಯಯನ ತುಂಬಾ ಗಂಭೀರವಾಗಿ ನಡೆಯಬೇಕಾದುದು ಅವಶ್ಯಕವೆನಿಸುತ್ತದೆ ಎಂದಿದ್ದಾರೆ.

ಸಂಗಮೇಶ ಸವದತ್ತಿಮಠ ಅವರ 'ಭಾಷಾಲೇಖ' (೧೯೯೯) ಎಂಬ ಸಂಶೋಧನಾ ಲೇಖನಗಳನ್ನು ಒಳಗೊಂಡ ಕೃತಿಯಲ್ಲಿ ಅಂಕಿತನಾಮಗಳು, ಭಾಷಾ ವೈಜ್ಞಾನಿಕ ಚಿಂತನೆಗಳು ಎಂಬ ಶೀರ್ಷಿಕೆಯಡಿಯಲ್ಲಿ ಸ್ಥಳನಾಮ ಕುರಿತು ಎರಡು ಲೇಖನಗಳಿವೆ. ಊರ ಹೆಸರುಗಳು ಒಂದು ವಿವೇಚನೆ ಎಂಬ ಮೊದಲ ಲೇಖನದಲ್ಲಿ ಆದಿಮಾನವನಿಂದ ಆರಂಭವಾದ ವಾಸ ಹಾಗೂ ಅವರ ನೆಲೆ ಅವುಗಳ ಹೆಸರಿನ ಆರಂಭ ಹಾಗೂ ವಾರ್ಗಿಕಗಳಿಂದ ತಿಳಿಯಬಹುದಾದ ಐತಿಹಾಸಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ಹೇಳಿದ್ದಾರೆ. ಈ ಲೇಖನದಲ್ಲಿ ಕನ್ನಡದಲ್ಲಿ ಬಂದ ಹಳೆಯ ವಿಷಯ ಹೊಂದಿದ್ದು ಹೊಸತನ್ನೇನು ಹೇಳುವುದಿಲ್ಲ. ಹೈದ್ರಾಬಾದ್ ಕರ್ನಾಟಕದ ಸ್ಥಳನಾಮಗಳು ಒಂದು ನೋಟ ಎಂಬ ಇನ್ನೊಂದು ಲೇಖನದಲ್ಲಿ ಸ್ಥಳನಾಮದ ಸಂಕ್ಷಿಪ್ತ ಇತಿಹಾಸವಿದೆ. ಕವಿರಾಜ ಮಾರ್ಗದಲ್ಲಿ ಉಲ್ಲೇಖವಾದ ವಸುಧಾವಲಯ ವಿಷಯ ಎಂಬ ಪದ ಗ್ರಾಮಸಮೂಹವನ್ನು ಸೂಚಿಸುತ್ತದೆ ಎನ್ನುತ್ತಾರೆ. ಗುಲಬರ್ಗಾ ಜಿಲ್ಲೆಗೆ ಸೀಮಿತವಾದ ಈ ಸಂಪ್ರಬಂಧದಲ್ಲಿ ಉರ್ದು ಪ್ರಭಾವದ ಸ್ಥಳನಾಮಗಳೇ ಹೆಚ್ಚು. ನಂತರ ತೆಲುಗಿನ ಪ್ರಭಾವವಿರುವ ಸ್ಥಳನಾಮಗಳನ್ನು ಬಳ್ಳಾರಿ–ರಾಯಚೂರು ಗಡಿಭಾಗದಲ್ಲಿ ಗುರುತಿಸಿದ್ದಾರೆ. ಕಲ್ಯಾಣ ಕರ್ನಾಟಕದ ಮೇಲೆ ಬೆಳಕು ಚೆಲ್ಲುವ ಪ್ರಯತ್ನವಿದೆ.

ಅಂಗಡಿ ಎಸ್.ಎಸ್. ಅವರ 'ಮಿಶನರಿಗಳ ದ್ವಿಭಾಷಿಕ ನಿಘಂಟುಗಳು ತೌಲನಿಕ ಅಧ್ಯಯನ' (೧೯೯೯) ಎಂಬ ಸಂಶೋಧನಾ ಮಹಾಪ್ರಬಂಧದಲ್ಲಿ ಮಿಶನರಿಗಳು ಕೋಶಸಿದ್ಧತೆಗಾಗಿ ನಾಡಿನಾದ್ಯಂತ ಸುತ್ತಾಡಿದವರು. ಆ ಸಂದರ್ಭದಲ್ಲಿ ಅವರಿಗೆ ಅನೇಕ ಸ್ಥಳದ, ವ್ಯಕ್ತಿಗಳ ಹಾಗೂ ವೃತ್ತಿಗಳ ಹೆಸರುಗಳು ದೊರೆತಿವೆ. ಅವುಗಳನ್ನು ತಮ್ಮ ಕೋಶದಲ್ಲಿ ದಾಖಲಿಸಿದ್ದಾರೆ. ಕನ್ನಡಿಗರ ಜನಜೀವನವನ್ನು ತಿಳಿದುಕೊಳ್ಳುವುದು ಮಿಶನರಿಗಳ ಉದ್ದೇಶವಾದ್ದರಿಂದ ನಾಮಗಳನ್ನು ಸೇರ್ಪಡಿಸುವುದು ಅವರಿಗೆ ಅನಿವಾರ್ಯ ಆಗಿತ್ತು. ಅಂತಹ ಅನೇಕ ಸ್ಥಳನಾಮಗಳ ವಿವರವನ್ನು ಅಂಗಡಿಯವರು ಒಂದು ಉಪ ಅಧ್ಯಾಯದ ಮೂಲಕ ವಿವರಿಸಿದ್ದಾರೆ. ಸ್ಥಳನಾಮಗಳ ಮೂಲ ಹೆಸರು ಬದಲಾದ ಹೆಸರು ಹಾಗೂ ಅನೇಕ ವಾರ್ಗಿಕಗಳಿಗೆ ಅರ್ಥವನ್ನು ನೀಡಿದ ಕಿಟ್ಟೆಲ್ ವಾದವನ್ನು ದಾಖಲಿಸಿದ್ದಾರೆ.

ಜೊತೆಗೆ ಕೋಶಗಳಲ್ಲಿ ಉಲ್ಲೇಖವಾದ ವ್ಯಕ್ತಿನಾಮಗಳನ್ನು ಪ್ರಸ್ತಾಪಿಸಿದ್ದಾರೆ. ಮಿಶನರಿಗಳು ತಮ್ಮ ಕೋಶಗಳಲ್ಲಿ ಸ್ಥಳನಾಮ, ವ್ಯಕ್ತಿನಾಮ, ಕುಲನಾಮ, ಘಟಕಗಳನ್ನು ಸಂಗ್ರಹಿಸಿದ್ದಾರೆ.

ನಾರಾಯಣ ಕೆ.ವಿ. ಅವರು ಸಂಪಾದಿಸಿದ 'ಸ್ಥಳನಾಮಗಳ ಪರಿವರ್ತನೆ ಮತ್ತು ಪ್ರಭಾವ' (೧೯೯೯) ಎಂಬ ಕೃತಿಯಲ್ಲಿ ಆರು ಲೇಖನಗಳಿವೆ. ಊರ ಹೆಸರುಗಳು ಬದಲಾಗುವ ಪ್ರಕ್ರಿಯೆಯನ್ನು ಮುಖ್ಯವಾಗಿ ಅನ್ಯಭಾಷಿಕ ಸಮುದಾಯಗಳ ಸಂಪರ್ಕದಿಂದ ಗಮನಿಸಿದೆ. ಕರ್ನಾಟಕದ ಕನ್ನಡ ಭಾಷಾ ಸಮುದಾಯದೊಡನೆ ಆರ್ಯ-ಸಂಸ್ಕೃತ ಪ್ರಭಾವಗಳನ್ನು ವಿ. ಗೋಪಾಲಕೃಷ್ಣ ಅವರು ನಿರ್ದಿಷ್ಟ ಮತ್ತು ವಾರ್ಗಿಕ ಮಟ್ಟದಲ್ಲಿ ಹೇಗೆ ಸ್ಥಳನಾಮಗಳು ಬದಲಾಗುತ್ತವೆಯ ಆ ಮೂಲಕ ಸಂಸ್ಕೃತೀಕರಣ ತಪ್ಪು ಭಾಷಾಂತರ ಸ್ಥಿತಿಯನ್ನು ಹೇಳಿದ್ದಾರೆ. ಮರಾಠಿ ಪ್ರಭಾವವನ್ನು ಎಂ.ಬಿ. ನೇಗಿನಹಾಳ್ ಅವರು ಧ್ವನಿ-ಧ್ವನಿಮಾ-ಆಕೃತಿಮಾ ಮಟ್ಟದಲ್ಲಿ ಆಗುವ ಬದಲಾವಣೆಗಳನ್ನು ಗುರುತಿಸಿದ್ದಾರೆ. ಇಸ್ಲಾಂ ಉರ್ದು ಪ್ರಭಾವಗಳನ್ನು ಕೆ.ಎಂ. ವೀರಭದ್ರಶರ್ಮ ಅವರು ಸಂಕ್ಷಿಪ್ತವಾಗಿ ಹೇಳಿದ್ದಾರೆ. ಕನ್ನಡೇತರ ದ್ರಾವಿಡ ಭಾಷಾ ಪ್ರಭಾವ ಎಂಬಲ್ಲಿ ತೆಲುಗಿನ ಪ್ರಭಾವವನ್ನು ಎಸ್.ಎಸ್. ಅಂಗಡಿ ಅವರು ಹೇಳುತ್ತಾರೆ. ಆಂಗ್ಲ ಆಡಳಿತ ಇಂಗ್ಲಿಶ್ ಪ್ರಭಾವಗಳನ್ನು ಡಿ. ಪಾಂಡುರಂಗಬಾಬು ಅವರು ವಿವರಿಸಿದ್ದಾರೆ. ಈ ಎಲ್ಲಾ ಲೇಖನಗಳು ಉಪಯುಕ್ತವಾಗಿದ್ದು ಹೆಚ್ಚಾಗಿ ಈ ಹಿಂದೆ ಚರ್ಚಿಸಿದ ಮಾದರಿಯನ್ನೇ ಅನುಸರಿಸಿದಂತಿದೆ. ಗೋಪಾಲಕೃಷ್ಣ ಅವರ ಆರ್ಯ ಸಂಸ್ಕೃತ ಪ್ರಭಾವಗಳು ಅವರ ಪ್ರಬಂಧದ ಒಂದು ಭಾಗ. ಅಂಗಡಿಯವರ ಲೇಖನ ಗೋಪಾಲಕೃಷ್ಣ ಅವರ ಸ್ಥಳನಾಮಗಳು ಕೃತಿಯನ್ನು ಅವಲಂಬಿಸಿದೆ. ಇಂಗ್ಲಿಶ್ ಪ್ರಭಾವವನ್ನು ಗುರುತಿಸಿದ ಪಾಂಡುರಂಗಬಾಬು ಅವರ ಲೇಖನ ಅನೇಕ ಹೊಸ ಹೊಳಹು ನೀಡುವ ಲೇಖನವಾಗಿದೆ. ಕೊನೆಗೆ ಅಂಗಡಿಯವರ ಸ್ಥಳನಾಮಾಧ್ಯಯನ ಸಮೀಕ್ಷೆ ಉಪಯುಕ್ತವಾಗಿದ್ದು, ಒಟ್ಟಾರೆ ಕೃತಿಯು ಸ್ಥಳನಾಮ ಶೋಧಕರಿಗೆ ಬದಲಾಗುವ ಭಾಷಿಕ ಪರಿಸರದ ಹಾದಿಯನ್ನು ಹೇಳುವಲ್ಲಿ ಉತ್ತಮ ಆಕರ ಗ್ರಂಥವಾಗಿದೆ.

ಬಾಲಗಂಗಾಧರರಾವ್ ವೈ. ಅವರ 'ಒಕ ಊರಿ ಕಥ' (೨೦೦೦) ಎಂಬ ವಿಷಯ ಕುರಿತಾಗಿ ಪಿಎಚ್.ಡಿ. ಅಧ್ಯಯನವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದ್ದಾರೆ. ಪ್ರಸ್ತುತ ಒಕ ಊರಿ ಕಥ ಎಂಬ ಕೃತಿಯಲ್ಲಿ ಆಂಧ್ರದ ಅನೇಕ ಪ್ರಮುಖ ಗ್ರಾಮನಾಮಗಳು ಹಾಗೂ ಕನ್ನಡದ ಕೆಲವು ಗ್ರಾಮನಾಮಗಳು, ದ್ವಿಭಾಷಿಕ ವಲಯದಲ್ಲಿನ ಹಲವಾರು ಸ್ಥಳನಾಮಗಳ ನಿಷ್ಪತ್ತಿ, ಚಾರಿತ್ರಿಕ, ಜಾನಪದೀಯ ಮಹತ್ವ, ಶಾಸನೋಕ್ತ ಹೆಸರುಗಳು ಮುಂತಾದ ವಿವರಗಳನ್ನು ಪ್ರತಿ ಸ್ಥಳನಾಮಕ್ಕೂ ಕೊಡುತ್ತಾ ಹೋಗುತ್ತಾರೆ. ಇದೊಂದು ಸಂಗ್ರಹ ಯೋಗ್ಯ ಕೃತಿಯಾಗಿದ್ದು, ಇಲ್ಲಿ ಕ್ಷೇತ್ರಕಾರ್ಯದ ಕೊರತೆ ಕಾಣುತ್ತಿದ್ದು, ಇಂತಹ ಕೆಲಸ ಅಪಾರ ಕ್ಷೇತ್ರಕಾರ್ಯವನ್ನು ಬಯಸುತ್ತಿದೆ. ಆದರೂ ಅನೇಕ ಸತ್ಯ ಸಂಗತಿಗಳನ್ನು ಪ್ರಮಾಣಿಕವಾಗಿ ಬರೆದಿದ್ದಾರೆ. ರಾವ್ ಅವರು ಭಾಷಿಕ ನೆಲೆಯಲ್ಲಿ ಹೆಚ್ಚಾಗಿ ನೋಡಿಲ್ಲ. ಒಟ್ಟಾರೆ ೪೩೦ ಗ್ರಾಮನಾಮಗಳ ಸಂಕ್ಷಿಪ್ತ ವಿವರಣೆಯಲ್ಲಿದೆ.

ನಂಜಯ್ಯ ಎಂ. ಅವರ 'ಚಾಮರಾಜನಗರ ತಾಲೂಕಿನ ಸ್ಥಳನಾಮಗಳು' (೨೦೦೦) ಎಂಬ ಅಪ್ರಕಟಿತ ಸಂಶೋಧನಾ ನಿಬಂಧವು ಮುಖ್ಯವಾಗಿ ಐದು ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ.

ಎಲ್ಲ ಅಧ್ಯಾಯಗಳು ವರ್ಣನಾತ್ಮಕ ಮಾದರಿಯಲ್ಲಿದೆ. ಸ್ಥಳನಾಮಗಳ ಉಗಮ, ವಿಕಾಸ, ಪ್ರಯೋಜನವನ್ನು ಖಚಿತವಾಗಿ ಹೇಳಿದ್ದಾರೆ. ಚಾಮರಾಜನಗರ ತಾಲೂಕಿನ ಗ್ರಾಮನಾಮಗಳ ಭೌಗೋಳಿಕ, ಐತಿಹಾಸಿಕ, ಜನಪದೀಯ ಶಾಸನ ಹಾಗೂ ಸಾಹಿತ್ಯ ಕೃತಿಗಳಲ್ಲಿನ ಉಲ್ಲೇಖಗಳನ್ನು ಹೇಳಿದ್ದಾರೆ. ಸ್ಥಳನಾಮಗಳು ಭೌತಿಕ ವಿಶ್ಲೇಷಣೆಯನ್ನು ಮಾಡುತ್ತಾ ಸಂಧಿ, ಸಮಾಸ, ಸಮಸಂಸ್ಕೃತ, ಭಾಷಿಕ ವ್ಯತ್ಯಾಸ ಮುಂತಾಗಿ ತಿಳಿಸಿದ್ದಾರೆ. ಹಾಗೇ ನಿಬಂಧದ ಕೊನೆಯಲ್ಲಿ ಸ್ಥಳನಾಮ ಸೂಚಿ ಮತ್ತು ನಿಷ್ಪತ್ತಿಯನ್ನು ಕೊಡಲಾಗಿದೆ. ಕನ್ನಡದಲ್ಲಿ ಬಂದ ಈವರೆಗಿನ ಅಧ್ಯಯನಗಳಂತೆಯೇ ಇದು ಮುಂದುವರೆದರೂ ಚಾಮರಾಜನಗರ ತಾಲೂಕಿನ ಮಟ್ಟಿಗೆ ಹೊಸತರ ಅಧ್ಯಯನವಾಗಿದೆ.

ವಿಶ್ವನಾಥ ಅವರ 'ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ' (೨೦೦೦) ಕೃತಿಯಲ್ಲಿ ಎಂಟು ಅಧ್ಯಾಯಗಳಿದ್ದು, ಗ್ರಾಮನಾಮಗಳ ಚರಿತ್ರೆಯನ್ನು ಆರಂಭದ ಆದಿಮಾನವನ ಕಾಲದಿಂದ ಹಳ್ಳಿಗಳ ನಿರ್ಮಾಣದವರೆಗೆ ಹೇಗಾಯಿತ್ತೆಂಬುದನ್ನು ಹೇಳುತ್ತಾರೆ. ಗ್ರಾಮನಾಮ ಕುರುಹು ಎಂಬಲ್ಲಿ ವಾರ್ಗಿಕಗಳ ಪಟ್ಟಿ ವರ್ಗೀಕರಣವಿದೆ. ಗ್ರಾಮನಾಮ ಸಂಸ್ಕೃತಿಯಲ್ಲಿ ಸಾಂಸ್ಕೃತಿಕ ಅಂಶಗಳನ್ನು ವಿವರಿಸಲಾಗಿದೆ. ಇಲ್ಲಿ 'ಇಂಗಳದಾಳು' ಎಂಬಂತಹ ಸ್ಥಳನಾಮವನ್ನು ಚರ್ಚಿಸುವಾಗ, ಸಂಸ್ಕೃತದ ಇಂಗುಲ>ಬೇವು ಎಂಬುದನ್ನು ಪ್ರಸ್ತಾಪಿಸಿ ಬೇವಿನ ಮರಕ್ಕೆ ಸಂಬಂಧಿಸಿದ ಊರುಗಳೆನ್ನುತ್ತಾರೆ. ಆದರೆ ಇಂಗಳ ಪದಾರಂಭದಿಂದ ಯಾವುದೇ ಸ್ಥಳನಾಮ ಬಹುತೇಕ ಕೈಗಾರಿಕೆಯ ನೆಲೆಯೆಂಬುದಾಗಿ ಅನೇಕ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಭಾಷಿಕ ನೆಲೆಯಲ್ಲಿ ಗ್ರಾಮನಾಮಗಳನ್ನು ಚರ್ಚಿಸಲಾಗಿದೆ. ಕೊನೆಗೆ ಗ್ರಾಮನಾಮಗಳ ನಿಷ್ಪತ್ತಿಯನ್ನು ಹೇಳಲಾಗಿದೆ. ಕೃತಿಯಲ್ಲಿ ಪದೇ ಪದೇ ಗ್ರಾಮನಾಮ ಊರುಗಳು ಎಂಬ ಅನರ್ಥಕಾರಿ ವಾಕ್ಯ ಮರುಕಳಿಸುತ್ತಾರೆ. ಈ ಹಿಂದೆ ಇವರ ಸಂಶೋಧನ ನಿಬಂಧದ (ಸಕಲೇಶಪುರ ಪರಿಸರದ ಸ್ಥಳನಾಮಗಳು) ಅನೇಕ ವಿಷಯಗಳನ್ನು ಇಲ್ಲಿ ಮರು ಪ್ರಸ್ತಾಪಿಸಲಾಗಿದೆ. ಆದರೂ ಅನೇಕ ಹೊಸ ಸಂಗತಿಗಳ ಕಡೆ ಅಧ್ಯಯನ ಗಮನ ಹರಿಸಿದೆ.

ಉಪಾಧ್ಯ ಜಿ.ಎಸ್. ಅವರ 'ಗೋದಾವರಿವರಂ ಇರ್ದ ಕನ್ನಡನಾಡು' (೨೦೦೦) ಕೃತಿಯು ಮುಂಬೈ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಅಧ್ಯಯನ. ಇದರಲ್ಲಿ ಒಂದು ಅಧ್ಯಾಯವನ್ನು ವ್ಯಕ್ತಿನಾಮಗಳು ಮತ್ತು ಸ್ಥಳನಾಮಗಳು ಎಂದು ಸೀಮಿತಮಾಡಿಕೊಂಡು ಚರ್ಚಿಸಿದ್ದಾರೆ. ಶಾಸನಗಳ ಮೂಲಕ ಮಹಾರಾಷ್ಟ್ರದಲ್ಲಿನ ಕನ್ನಡ ಗ್ರಾಮನಾಮಗಳನ್ನು ನಿಸರ್ಗವಾಚಿ–ಜನಾಂಗವಾಚಿ–ವ್ಯಕ್ತಿವಾಚಿ–ನಿರ್ಮಾಣವಾಚಿ–ಆದರ್ಶವಾಚಿ ಎಂದು ಕಲ್ಬುರ್ಗಿಯವರ ನಾಮವಿಜ್ಞಾನ ಕೃತಿಯಲ್ಲಿರುವ ವಿಷಯಗಳನ್ನು ಅವಲಂಬಿಸಿ ವಿಭಾಗಿಸಿದ್ದಾರೆ. ಕೆಲವಾರು ವಾರ್ಗಿಕಗಳನ್ನು ವಿವರಿಸಿ ಉದಾಹರಣೆ ನೀಡಿದ್ದಾರೆ. ಮಹಾರಾಷ್ಟ್ರ ಮತ್ತು ಕರ್ನಾಟಕದ ಸ್ಥಳನಾಮಗಳನ್ನು ತೌಲನಿಕವಾಗಿ ನೋಡಿ ಭಾಷೆ, ಭೂಗೋಳ ಮುಂತಾದ ಮೂಲಕ ಸಾಂಸ್ಕೃತಿಕ ಪರಿಸರದ ವ್ಯಾಪ್ತಿಯನ್ನು ತಿಳಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಭಾಷಾಭಿವೃದ್ಧಿ ವಿಭಾಗ, ವತಿಯಿಂದ ಕರ್ನಾಟಕದ ಶಾಸನೋಕ್ತ ಸ್ಥಳನಾಮಗಳು ಎಂದು ಕರ್ನಾಟಕದ ಎಲ್ಲ ಜಿಲ್ಲೆಗಳ ಶಾಸನಗಳನ್ನು ಪರಿಶೀಲಿಸಿ ಅದರಲ್ಲಿ ಉಕ್ತವಾದ ಸ್ಥಳನಾಮಗಳನ್ನು ಅಕಾರಾದಿಯಾಗಿ ನೀಡುವ ಮಹತ್ತರವಾದ ಯೋಜನೆಯಿದು. ಈವರೆಗೆ ಕನ್ನಡದಲ್ಲಿ ಇಂಥದೊಂದು ಕೃತಿಯಿರಲಿಲ್ಲ.

ಅಂತಹ ಕೊರತೆಯನ್ನು ನೀಗಿಸಿ ಗ್ರಾಮ ನಾಮಾಧ್ಯಯನಕಾರರಿಗೆ, ಇತಿಹಾಸ ಪುರಾತತ್ವಜ್ಞರಿಗೆ ಅತ್ಯುಪಯುಕ್ತ ಗ್ರಂಥವಾಗುವಲ್ಲಿ ಅನುಮಾನವಿಲ್ಲ.

ಕಲಬುರ್ಗಿ ಎಂ.ಎಂ. ಅವರು ಮಾರ್ಗ-೦೩ರಲ್ಲಿ ಕೆ,ಗೆ,ಕಿ,ಗಿ ಎಂಬ ಒಂದು ಲೇಖನದಲ್ಲಿ ಊರ ಹೆಸರಿನ ಕೊನೆಯ ಗ್ರಾಮ ಎಂಬುದು ಗಾ,ಗೆ,ಗಿ ಆಗಿದೆ. ಕೆಯ್ ಮತ್ತು ಇಕ್ಕೆ ಎಂಬಿವೂ ಕೆ,ಕಿ,ಗೆ,ಗಿ ಆಗಿವೆಯೆಂದು ಹೇಳಬಹುದು. ಗ್ರಾಮ ಎಂಬುದು ಸಂಸ್ಕೃತದ ಕೆಯ್, ಇಕ್ಕೆ ಎಂಬವು ದ್ರಾವಿಡ ಪದಗಳು ಸಂಸ್ಕೃತ ಮೂಲದ ಊರುಗಳು ಇತ್ತೀಚಿನವು. ದ್ರಾವಿಡ ಮೂಲದ ಊರುಗಳು ಹಳೆಯವು ಎಂಬ ಅಭಿಪ್ರಾಯವನ್ನು ಈ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ. ಇಲ್ಲಿ ಈವರೆಗೆ ಪತ್ರಿಕೆಗಳಲ್ಲಿ ಬಂದಂತಹ ಬಿಡಿಬಿಡಿಯಾದ ಲೇಖನಗಳನ್ನು ನೀಡಲಾಗಿದೆ. ಈ ಲೇಖನಗಳೆನ್ನೆಲ್ಲಾ ಅವಲೋಕನ ಮಾಡಲಾಗಿಲ್ಲ. ಮುಖ್ಯವಾಗಿ ಇಲ್ಲಿರುವ ಲೇಖನಗಳು ೭೦ರ ದಶಕದಲ್ಲಿ ಬರೆಯಲ್ಪಟ್ಟವುಗಳಾಗಿವೆ. ಸ್ಥಳನಾಮಶಾಸ್ತ್ರ ಕನ್ನಡನಾಡಿನಲ್ಲಿ ಆರಂಭವಾದ ಸಮಯದಲ್ಲಿ ಬಹುತೇಕ ಲೇಖನಗಳು ಆ ಶಾಸ್ತ್ರವು ಪರಿಚಯವಾಗುವ ನಿಟ್ಟಿನಲ್ಲಿ ಅವರ ಸಿದ್ಧಾಂತದ ರೂಪು-ರೇಶೆಗಳನ್ನು ಅಧ್ಯಯನದ ವಿಧಿ-ವಿಧಾನಗಳ ರೀತಿಯಲ್ಲಿ ಬರೆಯಲಾಯಿತು. ಹಾಗೆ ೮೦ರ ದಶಕದಲ್ಲಿ ಸ್ಥಳನಾಮಾಧ್ಯಯನದ ಸಾಧ್ಯತೆ ಸಾಧನೆಗಳ ವಿಶ್ಲೇಷಣೆ ಜೊತೆಗೆ ಆಯಾ ಪ್ರಾದೇಶಿಕ ಗ್ರಾಮನಾಮಗಳ ಅಧ್ಯಯನ ಆರಂಭವಾಯಿತು. ಈ ಹಿನ್ನೆಲೆಯಲ್ಲಿ ಜಾನಪದ, ಭಾಷಾಶಾಸ್ತ್ರ, ಚರಿತ್ರೆ ಮುಂತಾದ ಅಂಶಗಳಿಂದ ಸ್ಥಳನಾಮಗಳನ್ನು ನೋಡಲಾಯಿತು. ಅಂತಹ ಅನೇಕ ಲೇಖನಗಳು ಬರೆಯಲ್ಪಟ್ಟವು. ಹೆಚ್ಚಾಗಿ ಭಾಷಾಶಾಸ್ತ್ರದ ನೆಲೆಯಲ್ಲಿ ಅಧ್ಯಯನ ಮಾಡಿದ ಲೇಖನಗಳು ಆರಂಭದಲ್ಲಿ ಕಾಣಿಸಿಕೊಂಡವು. ನಂತರ ಐತಿಹ್ಯಗಳ, ಪುರಾಣಗಳ ಮೂಲಕ, ಸ್ಥಳಕ್ಕಿರುವ ನಿಷ್ಪತ್ತಿಯನ್ನು ಹೇಳುವ ಪರಂಪರೆಯು ಜಾನಪದ ಅಧ್ಯಯನಕಾರರು ಮಾಡಿದರು. ಅಲ್ಲಲ್ಲಿ ಚರಿತ್ರೆಯ ಮಾತೃಕೆಗಳಂತೆ ಗ್ರಾಮನಾಮಗಳ ಉಲ್ಲೇಖವೂ ಇತಿಹಾಸಕಾರರಿಂದ ದಾಖಲೆಗೊಂಡಿತು. ಮೈಸೂರಿನಲ್ಲಿ ಆರಂಭವಾದ ಸ್ಥಳನಾಮ ಅಧ್ಯಯನ ಸಂಸ್ಥೆಯಿಂದ ಅಧಿಕೃತವಾಗಿ ನಾಮಾಧ್ಯಯನ ಕ್ಷೇತ್ರ ಅನೇಕ ಕಮ್ಮಟಗಳ ಮೂಲಕ ಹಾಗೂ ಕ್ರಿಯಾಶೀಲ ಅಧ್ಯಯನದ ಮೂಲಕ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಮಾತ್ರವಲ್ಲದೇ ಭಾರತದಾದ್ಯಂತ ಅನೇಕ ಲೇಖನಗಳನ್ನು ಬರೆಯಿಸಿ ಪ್ರಕಟಿಸಿತು. ಈ ಎಲ್ಲ ಲೇಖನಗಳು ಆಯಾ ಭೌಗೋಳಿಕ, ಸಾಂಸ್ಕೃತಿಕ, ಜಾನಪದೀಯ ಹಾಗೂ ಭಾಷಾಶಾಸ್ತ್ರದ ನೆಲೆಯಲ್ಲಿ ವಿವಿಧ ದೃಷ್ಟಿಕೋನಗಳಿಂದ ಬರೆಯಲ್ಪಟ್ಟಿವೆ. ಅಂತಹ ಉಪಲಬ್ಧ ಲೇಖನಗಳ ಪಟ್ಟಿಯೊಂದನ್ನು ಇಲ್ಲಿ ನೀಡಲಾಗಿದೆ.

ಸುರೇಶ ಕೆ.ಸಿ. ಅವರ 'ರಾಮನಗರ ಜಿಲ್ಲೆಯ ಸ್ಥಳನಾಮಗಳ ಅಧ್ಯಯನ' (೨೦೧೧) ಎಂಬ (ಪಿಎಚ್.ಡಿ. ಅ.ಪ್ರ.) ಮಹಾಪ್ರಬಂಧವು ಉದ್ದೇಶ, ವ್ಯಾಪ್ತಿ ಮತ್ತು ವಿಧಾನ ಒಳಗೊಂಡು ಸ್ಥಳನಾಮ ವಿಜ್ಞಾನದ ಚರಿತ್ರೆಯನ್ನು ಕಟ್ಟಿಕೊಡುತ್ತಾ ರಾಮನಗರ ಜಿಲ್ಲೆಯ ಸ್ಥಳನಾಮಗಳ ರಾಚನಿಕ ಸ್ವರೂಪವನ್ನು ಚರ್ಚಿಸುತ್ತ ಆ ಜಿಲ್ಲೆಯ ಸ್ಥಳನಾಮಗಳನ್ನು ನಿರ್ದಿಷ್ಟಕ್ಕನುಗುಣವಾಗಿ, ವಾರ್ಗಿಕಕ್ಕನು ಗುಣವಾಗಿ, ಸಂಕೀರ್ಣ ಸ್ಥಳನಾಮಗಳೆಂದು ವರ್ಗೀಕರಿಸಿಕೊಂಡು ಅಧ್ಯಯನ ಕೈಗೊಂಡಿದ್ದಾರೆ.

ಮುಖ್ಯವಾಗಿ ನಿರ್ದಿಷ್ಟಕ್ಕನುಗುಣವಾದ ಸ್ಥಳನಾಮಗಳಲ್ಲಿ ಸಾಂಸ್ಕೃತಿಕ ಸ್ಥಳನಾಮಗಳು ಎಂದು ವಿಭಾಗಿಸಿಕೊಂಡು ಅಧ್ಯಯನ ಮಾಡಿ, ಇದರಲ್ಲಿ ದೈವವಾಚಿ ಸ್ಥಳನಾಮಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಇದರಲ್ಲಿ ಸಂಶೋಧಕ ದೈವವಾಚಿ ಸ್ಥಳನಾಮಗಳ ಬಗೆಗೆ ಚರ್ಚಿಸುತ್ತಾ, ಭಾರತದಲ್ಲಿ ಹಲವು ಧರ್ಮಗಳು ಹುಟ್ಟಿ ಬೆಳೆದಿವೆ. ಅದರಂತೆಯೇ ಅನ್ಯದೇಶದ ಧರ್ಮಗಳು ಹರಡಲು ಮತ್ತು ಬೆಳೆಯಲು ಅವಕಾಶವಾಗಿದೆ. ಶೈವ, ವೈಷ್ಣವ, ಬೌದ್ಧ, ಜೈನ, ಇಸ್ಲಾಂ, ಕ್ರೈಸ್ತ ಮೊದಲಾದ ಧರ್ಮೀಯರು ಹಾಗೂ ಪಂಥದವರು ಅವರವರ ನಂಬಿಕೆಗಳಿಗೆ ತಕ್ಕಂತೆ ದೇವತೆಗಳನ್ನು ಆರಾಧಿಸುತ್ತಾ ಬಂದಿರುವುದನ್ನು ಕಾಣಬಹುದು. ದೈವ, ಧರ್ಮಗಳು, ಭಾರತೀಯ ಸಂಸ್ಕೃತಿಯ ನಿಯಂತ್ರಕಗಳಾಗಿ ಮಹತ್ವದ ಪಾತ್ರ ವಹಿಸಿರುವುದರಿಂದ ವ್ಯಕ್ತಿಗಳಿಗೆ ಮತ್ತು ಸ್ಥಳಗಳಿಗೆ ಹೆಸರು ನೀಡುವ ಸಂದರ್ಭದಲ್ಲಿ ದೈವವಾಚಿ ಸ್ಥಳನಾಮಗಳನ್ನು ನಿರ್ದಿಷ್ಟ ಸ್ಥಾನದಲ್ಲಿ ಬಳಸಿಕೊಂಡರು. ದೈವಗಳ ಸ್ಮರಣೆಯಾಗಲಿ ಎಂಬ ಪ್ರಬಲವಾದ ನಂಬಿಕೆ ಜನರಲ್ಲಿ ಬೇರೂರಿದೆ. ಇದರಿಂದ ಕುಲದೈವ, ಇಷ್ಟದೈವ, ಋಷಿಮುನಿಗಳ, ಸಿದ್ಧಪುರುಷರ ಹಾಗೂ ಊರಿನ ಅಧಿದೇವತೆಗಳ ಹೆಸರುಗಳನ್ನು ಸ್ಥಳನಾಮಗಳಲ್ಲಿ ಗುರುತಿಸಬಹುದು.

ಸ್ಥಳನಾಮಗಳಲ್ಲಿ ಬಳಕೆಯಾಗಿರುವ ದೈವವಾಚಿಗಳ ಅಧ್ಯಯನದಿಂದ ಒಂದು ಭೌಗೋಳಿಕ ಪರಿಸರದಲ್ಲಿ ಪ್ರಚಲಿತವಿರುವ ದೇವ-ದೇವತೆ, ಸಿದ್ಧಪುರುಷರ ಪ್ರಭಾವವನ್ನು ಗುರುತಿಸಲು ಸಹಕಾರಿಯಾಗುತ್ತದೆ. ಇದರಿಂದ ವಿಶಿಷ್ಟವಾರು ವ್ಯಾಪ್ತಿಯಲ್ಲಿ ಬರುವ ಆಯಾಯ ದೈವಗಳ ವಿಶಿಷ್ಟವಾದ ಸಾಂಸ್ಕೃತಿಕ ವಿವರಗಳು, ಆಚರಣೆಗಳು, ನಂಬಿಕೆಗಳನ್ನು ಅಧ್ಯಯನ ಮಾಡಲು ಸಹಕಾರಿಯಾಗುತ್ತವೆ ಎಂದು ಹೇಳಿ ಹಲವು ದೈವವಾಚಿ ಸ್ಥಳನಾಮಗಳನ್ನು ಸೂಚಿಸಿ ದೈವವಾಚಿ ಸ್ಥಳನಾಮಗಳ ಮೂಲಕ ಪ್ರಾದೇಶಿಕವಾಗಿರುವ ದೈವಗಳನ್ನು ವಿಶೇಷವಾಗಿ ಅಧ್ಯಯನ ಮಾಡಲು ಸಹಕಾರಿಯಾಗಿರುವುದರಿಂದ, ಅಲ್ಲದೇ ಜಿಲ್ಲೆಯ ದೈವವಾಚಿ ಸ್ಥಳನಾಮಗಳನ್ನು ಗಮನಿಸಿದಾಗ, ಶಿಷ್ಟದೇವತೆಗಳೇ ಬಹುಪಾಲು ಸ್ಥಳನಾಮಗಳಲ್ಲಿ ಕಾಣಿಸಿಕೊಂಡಿವೆ. ಜನಪದ ದೈವಗಳಾದ ಮಾರಮ್ಮ, ದುರುಗಮ್ಮ, ಸುಂಕಲಮ್ಮ ಮೊದಲಾದ ಸ್ತ್ರೀ ಪ್ರಧಾನ ದೈವಗಳು ಕಡಿಮೆ ಕಾಣಿಸಿಕೊಂಡಿವೆ ಎಂದು ಹೇಳಿ, ಹೀಗಾಗುವುದಕ್ಕೆ ಸಾಮಾಜಿಕ ವ್ಯವಸ್ಥೆಯಲ್ಲಿನ ಪಿತೃಪ್ರಧಾನ ವ್ಯವಸ್ಥೆಯೇ ಮೂಲಕಾರಣವೆಂದು ತಿಳಿಸಿದ್ದಾರೆ. ಅಧ್ಯಾಯ ಐದರಲ್ಲಿ ಐತಿಹಾಸಿಕ ಮಹತ್ವದ ಸ್ಥಳನಾಮಗಳನ್ನು ಅಧ್ಯಯನ ಮಾಡಿದ್ದಾರೆ. ಅಧ್ಯಾಯ ಆರರಲ್ಲಿ ಜಿಲ್ಲೆಯ ಸ್ಥಳನಾಮಗಳ ಸಾಮಾಜಿಕ ಅಧ್ಯಯನವನ್ನು, ಧರ್ಮಾಧಾರಿತ, ಸಮುದಾಯಾಧಾರಿತ, ವೃತ್ತಿಯಾಧಾರಿತ, ವ್ಯಕ್ತಿನಾಮಾಧಾರಿತ ಹಿನ್ನೆಲೆಯಲ್ಲಿ ಸ್ಥಳನಾಮಗಳನ್ನು ಅಧ್ಯಯನ ಮಾಡಿದ್ದಾರೆ. ಒಟ್ಟಾರೆ ಈ ಕೃತಿ ನನ್ನ ಅಧ್ಯಯನಕ್ಕೆ ಮಾರ್ಗದರ್ಶಿಯಾಗಿದೆ.

ನಟರಾಜ ಡಿ.ಕೆ. ಅವರು 'ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು ಒಂದು ಅಧ್ಯಯನ' (೨೦೦೮, ಪಿಎಚ್.ಡಿ. ಅ.ಪ್ರ) ಎಂಬ ಮಹಾಪ್ರಬಂಧದಲ್ಲಿ ಉದ್ದೇಶ, ವ್ಯಾಪ್ತಿ, ವಿಧಾನದ ಮುಖಾಂತರ ಕನ್ನಡ ಸ್ಥಳನಾಮಾಧ್ಯಯನಕಾರರು ಮಾಡಿದಂತಹ ವರ್ಗೀಕರಣ ತಿಳಿಸುತ್ತಾ ಸಂಶೋಧಕರು ಐದು ರೀತಿಯ ವರ್ಗೀಕರಣವನ್ನು ಮಾಡಿಕೊಂಡು ಚರ್ಚಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಎರಡು ರೀತಿಯ ಆಕೃತಿಮಾಗಳಿರುವ ಸ್ಥಳನಾಮಗಳು, ವಾರ್ಗಿಕವೇ ನಿರ್ದಿಷ್ಟವಾಗಿರುವ ಸ್ಥಳನಾಮಗಳು.

ಪುನರ್ನಾಮಕರಣ ಹೊಂದಿರುವ ಸ್ಥಳನಾಮಗಳು, ಹ್ರಸ್ವೀಕರಣ ಸ್ಥಳನಾಮಗಳು ಪ>ಹ ಬದಲಾವಣೆ ತೆಲುಗು ಭಾಷೆಯನ್ನೊಳಗೊಂಡಿರುವ ಸ್ಥಳನಾಮಗಳ ಕುರಿತು ಭಾಷಿಕ ಹಿನ್ನೆಲೆಯಲ್ಲಿ ನೋಡಿದ್ದಾರೆ. ಹಾಗೂ ಸ್ಥಳನಾಮಗಳ ಸಾಮಾಜಿಕವಾಗಿ ಜಾತಿವಾಚಿ, ವೃತ್ತಿವಾಚಿ, ವ್ಯಕ್ತಿವಾಚಿ, ದೈವವಾಚಿ, ಸ್ಥಳನಾಮಗಳ ಪಟ್ಟಿಯನ್ನು ಕೊಡುತ್ತಾ ದೈವವಾಚಿ ಸ್ಥಳನಾಮಗಳ ಅಧ್ಯಯನದಲ್ಲಿ ೬೬ ದೈವ ಮೂಲ ಸ್ಥಳನಾಮಗಳನ್ನು ಹೆಸರಿಸಿ ೧೩ ದೈವವಾಚಿ ಸ್ಥಳನಾಮಗಳನ್ನು ವಿಶ್ಲೇಷಣೆಗೊಳಪಡಿಸಿದ್ದಾರೆ.

ವಿಶ್ವನಾಥಯ್ಯ ಸಿ.ಎಂ. ಅವರು 'ಕಡೂರು ತಾಲೂಕಿನ ಸ್ಥಳನಾಮಗಳು' (೨೦೦೪, ಪಿಎಚ್.ಡಿ. ಅ.ಪ್ರ) ಎಂಬ ಮಹಾಪ್ರಬಂಧದಲ್ಲಿ ಉದ್ದೇಶ, ವ್ಯಾಪ್ತಿ, ವಿಧಾನ ಸ್ಪಷ್ಟಪಡಿಸುತ್ತ, ಸ್ಥಳನಾಮಗಳ ಉಗಮದ ಬಗೆಗೆ ತಿಳಿಸುತ್ತಾ ಮನುಷ್ಯ ಮತ್ತು ಪ್ರಾಣಿ–ವಸ್ತುಗಳಿಗೆ ಹೆಸರಿಡುವ ಪ್ರಕ್ರಿಯೆಯನ್ನು ಹೇಳಿದ್ದಾರೆ. ಹಾಗೂ ಶಾಸನೋಕ್ತ ಸ್ಥಳನಾಮಗಳನ್ನು ಅಧ್ಯಯನಕ್ಕೊಳಪಡಿಸಿ, ದೈವಮೂಲದ ಸ್ಥಳನಾಮಗಳನ್ನು ಗುರುತಿಸಿದ್ದಾರೆ. ಇದರಲ್ಲಿ ಸುಮಾರು ೨೫೩ ಸ್ಥಳನಾಮಗಳ ನಿಷ್ಪತ್ತಿಯನ್ನು ನಿರೂಪಿಸಿದ್ದಾರೆ. ಕಡೂರು ತಾಲೂಕಿನ ಸ್ಥಳನಾಮಗಳನ್ನು ವಾರ್ಗಿಕಗಳೊಂದಿಗೆ ಪರಿಶೀಲನೆಗೊಳ ಪಡಿಸಿದ್ದಾರೆ. ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಎಂದು ಎರಡು ರೀತಿಯಲ್ಲಿ ವರ್ಗೀಕರಿಸಿಕೊಂಡು ಚರ್ಚಿಸಿದ್ದಾರೆ. ಹಾಗೂ ಸ್ಥಳನಾಮಗಳಲ್ಲಿರುವ ಸಾಂಸ್ಕೃತಿಕ ಸಂಗತಿಗಳನ್ನು ಚರ್ಚಿಸಿದ್ದಾರೆ. ಮತ್ತು ಐತಿಹ್ಯ, ವ್ಯಕ್ತಿ, ಸ್ಥಳ, ಬೆಟ್ಟ, ಗುಡ್ಡ, ಹಳ್ಳ, ಕೊಳ್ಳ, ಊರು, ಕೇರಿ, ಮುಂತಾದವನ್ನು ಕುರಿತು ಸಾಂಪ್ರದಾಯಿಕವಾಗಿ ವಿವರಣೆಯನ್ನು ನೀಡಿದ್ದಾರೆ. ಮತ್ತು ಆಯಾ ಭಾಗದ ಐತಿಹ್ಯಗಳಿಂದ ಚಾರಿತ್ರಿಕ ಮತ್ತು ಪೌರಾಣಿಕ ಅಂಶಗಳಿಂದ ಸ್ಥಳನಾಮಗಳ ಬೆಳವಣಿಗೆ ಸಹಾಯಕವಾಗುತ್ತದೆ ಎಂಬುದನ್ನು ಹೇಳಿದ್ದಾರೆ.

ಮೈಲಾರಪ್ಪ ಬಿ. ಅವರ 'ಮೊಳಕಾಲ್ಮೂರು ತಾಲೂಕಿನ ಸ್ಥಳನಾಮಗಳು' (೨೦೦೮) ಎಂಬ ಎಂ.ಫಿಲ್. ನಿಬಂಧದಲ್ಲಿ ಸ್ಥಳನಾಮಗಳ ಭಾಷಿಕ ವಿವೇಚನೆ ಎಂಬ ಅಧ್ಯಾಯದಲ್ಲಿ ಮೂರು ರೀತಿಯಲ್ಲಿ ವರ್ಗೀಕರಣ ಮಾಡಿಕೊಂಡು ಸ್ಥಳನಾಮಗಳನ್ನು ಚರ್ಚಿಸಿದ್ದಾರೆ. ಒಂದು ಪ್ರಾಕೃತಿಕ ಸ್ಥಳನಾಮಗಳು, ಎರಡು ಸಾಂಸ್ಕೃತಿಕ ಸ್ಥಳನಾಮಗಳೆಂದು ಮೂರನೆಯದಾಗಿ ಸಂಕೀರ್ಣ ಸ್ಥಳನಾಮಗಳೆಂದು ಇಲ್ಲಿ ಸಾಂಸ್ಕೃತಿಕ ಸ್ಥಳನಾಮಗಳಲ್ಲಿ ೯ ದೈವವಾಚಿ ಸ್ಥಳನಾಮಗಳನ್ನು ಹೆಸರಿಸಿ, ಸಂಸ್ಕೃತಿಯ ನಿರ್ವಚನದಲ್ಲಿ ದೈವವಾಚಿ ಊರುಗಳನ್ನು ಅಧ್ಯಯನ ಮಾಡಿದರೆ ಅನೇಕ ಮೂಲಾಧಾರಗಳು ದೊರೆಯುತ್ತದೆ. ಈ ನೆಲೆಯಲ್ಲಿ ದೈವವಾಚಿ ಸ್ಥಳನಾಮಗಳನ್ನು ಚರ್ಚಿಸಿರುವುದು ಉಪಯುಕ್ತವಾಗಿದೆ.

ಸದಾಶಿವಪ್ಪ ಕುಂ.ಬಾ. ಅವರ 'ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ' (೧೯೯೦) ಎಂಬ ಪ್ರಬಂಧದಲ್ಲಿ ಲೇಖಕರು ಎರಡು ವಿಭಾಗಗಳನ್ನು ಮಾಡಿಕೊಂಡು ಕೃತಿಯಲ್ಲಿ ಅಧ್ಯಯನ ಕೈಗೊಂಡಿದ್ದಾರೆ. ಮೊದಲ ಭಾಗದಲ್ಲಿ ಬಳ್ಳಾರಿ ಜಿಲ್ಲೆಯ ಇತಿಹಾಸ, ಭೌಗೋಳಿಕ ಸನ್ನಿವೇಶ, ಧರ್ಮ, ಸಾಹಿತ್ಯ, ಗುಡಿಗಳು ವಾಸ್ತುಶಿಲ್ಪದ ಬಗೆಗೆ ತಿಳಿಸಿದ್ದಾರೆ. ಎರಡನೇ ವಿಭಾಗದಲ್ಲಿ ಬಳ್ಳಾರಿ ಜಿಲ್ಲೆಯ ೯೦ ಸಾಂಸ್ಕೃತಿಕ ನೆಲೆಗಳನ್ನು ಅಧ್ಯಯನಕ್ಕೊಳಪಡಿಸಿದ್ದಾರೆ. ಗ್ರಾಮದ ಮೂಲ ಹೆಸರು, ಬದಲಾವಣೆಯಾದ

ಹೆಸರು, ಅದರ ಮಹತ್ವ, ಜನರ ಆಡುನುಡಿಯಲ್ಲಿ ಅದು ಹೇಗೆ ಬಳಕೆಗೊಂಡಿದೆ ಎಂಬುದನ್ನು ವಿವರಿಸಿದ್ದಾರೆ.

ಗುರುಮೂರ್ತಿ ಕೆ.ಜಿ. ಅವರು ಸ್ಥಳನಾಮಗಳ ಅಧ್ಯಯನ ಮತ್ತಿತರ ಪ್ರಬಂಧಗಳು ಎಂಬ ಕೃತಿಯಲ್ಲಿ ಒಂಬತ್ತು ಲೇಖನಗಳಿವೆ. ಮೊದಲ ಲೇಖನವೇ ಸ್ಥಳನಾಮಗಳ ಅಧ್ಯಯನವಾಗಿದ್ದು, ಧಾರವಾಡ, ದಾವಣಗೆರೆ ಮತ್ತು ಶಿವಮೊಗ್ಗ. ಈ ಮೂರು ಜಿಲ್ಲೆಯ ಗ್ರಾಮಗಳನ್ನಿಟ್ಟುಕೊಂಡು ಅಭ್ಯಾಸ ಮಾಡಿದ್ದಾರೆ. ಈ ಜಿಲ್ಲೆಗಳಲ್ಲಿ ಬಹುತೇಕವಾಗಿ ಹಟ್ಟಿ, ಕೇರಿ, ಊರು, ಹಾಳು, ಗೊಳ, ಮಡ, ಗೋಡು, ವಾಡ, ಗಾಂ, ಗಿರಿ, ಪುರ, ಕೊಂಕ, ಕಟ್ಟೆ, ಕೋಟೆ, ದುರ್ಗ ಮುಂತಾದವುಗಳಿಂದ ಕೊನೆಗೊಳ್ಳುತ್ತವೆಂದು ಹೇಳಿದ್ದಾರೆ. ಕೊನೆಗೆ ತಮ್ಮ ಲೇಖನದಲ್ಲಿ ಕೆಲವು ಗ್ರಾಮಗಳಿಗೆ ಅಲ್ಲಿಯ ದೇವತೆಗಳಿಂದ ಹೆಸರು ಬಂದಿದೆ. ಉದಾ. ಗೌರಮ್ಮನಹಳ್ಳಿ, ಕಲ್ಲಮ್ಮನಹಳ್ಳಿ, ಹುಚ್ಚಂಗಿದುರ್ಗ, ಹರಿಹರ, ಬಸವಾಪುರ, ಹನುಮಂತಾಪುರ ಮುಂತಾದವುಗಳನ್ನು ಹೆಸರಿಸಿದ್ದಾರೆ.

ಗುರುಮೂರ್ತಿ ಪೆಂಡಕೂರು ಅವರ 'ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು' (೨೦೦೬) ಎಂಬ ಕೃತಿಯಲ್ಲಿ ಲೇಖಕರು ಐದು ಭಾಗಗಳನ್ನು ಮಾಡಿಕೊಂಡು ಅಧ್ಯಯನ ಮಾಡಿದ್ದಾರೆ. ಪ್ರಸ್ತಾವನೆಯಲ್ಲಿ ಸ್ಥಳನಾಮಗಳ ಬಗ್ಗೆ ಚರ್ಚೆ ಮಾಡುತ್ತಾ ಪ್ರಪಂಚದ ಯಾವ ಯಾವ ದೇಶಗಳು ಮತ್ತು ಸಂಸ್ಥೆಗಳು ನಾಮಾಧ್ಯಯನದ ಬಗೆಗೆ ಕೆಲಸ ಮಾಡಿವೆ ಎಂಬುದನ್ನು ಹೇಳುತ್ತಾ ಕನ್ನಡದ ಸ್ಥಳನಾಮಾ ಧ್ಯಯನಕಾರರನ್ನು ಅವರ ಕೃತಿಗಳನ್ನು ನೆನಪಿಸಿದ್ದಾರೆ. ಕರ್ನಾಟಕ ಸರಕಾರದವರು ಪ್ರಕಟಿಸಿರುವ ಕರ್ನಾಟಕ ಗ್ರಾಮಸೂಚಿಯ ಪ್ರಕಾರ ಬಳ್ಳಾರಿ ಜಿಲ್ಲೆಯಲ್ಲಿ ಅಂದರೆ ಎಂಟು ತಾಲೂಕಿನಲ್ಲಿ ಒಟ್ಟು ೬೩೩ ಗ್ರಾಮಗಳಿವೆ ಎಂದು ತಿಳಿಸಿ ಪ್ರತಿಯೊಂದು ತಾಲೂಕಿನಲ್ಲಿ ಹಳ್ಳಿ, ಗುಡ್ಡ, ಕೇರಿ, ಪುರ, ಹಾಳ, ಕುಂಟೆ, ಕುಪ್ಪ, ಕಟ್ಟೆ, ಊರು, ಕೊಳ, ಕಲ್ಲು, ಹಟ್ಟಿಗಳಿಂದ ಬರುವ ಊರುಗಳು ಇಷ್ಟಿವೆ ಎಂದು ಸಂಖ್ಯೆಯಲ್ಲಿ ಪಟ್ಟಿ ಕೊಟ್ಟಿದ್ದಾರೆ. ಹಾಗೂ ಊರುಗಳಿಗೆ ಈಗಿನ ಹೆಸರು ಮೊದಲಿದ್ದು ಹೆಸರನ್ನು ನಮೂದಿಸಿದ್ದಾರೆ. ಮುಂದುವರೆದು ವ್ಯಕ್ತಿವಾಚಿ, ಕ್ಯಾಂಪ್‌ಗಳು ಊರಿನ ಹೆಸರು ಪಡೆದ ಕ್ಯಾಂಪ್ ಶಿಲಾವಾಚಿ, ಜಲವಾಚಿ, ದೈವವಾಚಿ, ಸ್ಥಳನಾಮಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಮುಂದೆ ೧೦೦ ಕ್ಕೂ ಹೆಚ್ಚು ಸ್ಥಳನಾಮಗಳ ಅಧ್ಯಯನ ಮಾಡಿ ಅವುಗಳ ಮಹತ್ವವನ್ನು ತಿಳಿಸಿದ್ದಾರೆ. ಕೊನೆಗೆ ಭಾರತದ ಜಿಲ್ಲೆಗಳ ಹೆಸರುಗಳನ್ನು ಗಮನಿಸಿ ಅಧ್ಯಯನಕ್ಕೊಳಪಡಿಸಿರುವುದು ಮಹತ್ವವೆನಿಸುತ್ತದೆ.

ಮೂರ್ತಿರಾವ್ ಎ.ಎನ್. ಅವರ 'ದೇವರು' ಕೃತಿಯಲ್ಲಿ ದೇವರ ಬಗೆಗಿನ ಚರ್ಚೆಯಿದೆ. ದೇವರನ್ನು ಕುರಿತ ಕಥೆಗಳನ್ನು ಹೇಳುತ್ತಾ ದಶಾವತಾರದ ಬಗೆಗೆ ಹೀಗೆ ಹೇಳುತ್ತಾರೆ. "ಮೊದಲು ನೀರಿನಲ್ಲಿ ಮಾತ್ರ ಬದುಕುವ ಮೀನಿನ ಅವತಾರ ನಂತರ ನೆಲಜಲಗಳೆರಡಲ್ಲೂ ಬದುಕಬಲ್ಲ ಆಮೆ ಆನಂತರ ಸಂಪೂರ್ಣವಾಗಿ ನೆಲವನ್ನೇ ಆಶ್ರಯಿಸಿದ ಹಂದಿ ನಂತರ ಅರ್ದಮೃಗ, ಆನಂತರ ಅರ್ಧಮಾನವ ನರಸಿಂಹ ಇದಾದ ಮೇಲೆ ಮಾನವನ ಸೃಷ್ಟಿಯಾಗುತ್ತದೆ, ಎಂದು ಹೇಳುತ್ತಾರೆ". ಗಣಪತಿ, ಕುಮಾರಸ್ವಾಮಿ, ಕೃಷ್ಣಾವತಾರಿ ವಿಷ್ಣು, ರಾಧೆ, ಹನುಮಂತ, ಕಶ್ಯಪ ಮಹರ್ಷಿ,

ಸಾಯಿಬಾಬಾ ಧರ್ಮಗ್ರಂಥಗಳ ಕುರಿತಾದ ಹಲವು ಚರ್ಚೆಗಳನ್ನು ಕುರಿತಾಗಿ ಅಧಿಕೃತವಾಗಿ ಲೇಖಕರು ಮಾತಾಡಿದ್ದಾರೆ. ಈ ಹಿಂದೆ ನಮ್ಮ ಸಮಾಜದಲ್ಲಿ ದೇವರು ಇದ್ದಾನೆ ಎಂದು ಹೇಗೆ ನಂಬಿಸಿದ್ದಾರೆ ಅದರಿಂದ ಕೆಲವು ವರ್ಗಗಳಿಗಾಗುವ ಪ್ರಯೋಜನಗಳೇನು? ದೇವರು ಒಬ್ಬನೇ ಇದ್ದಾನೆಯೇ, ಆತ ನಮ್ಮ ಕೆಲಸಕಾರ್ಯಗಳನ್ನು ಪೂರೈಸುತ್ತಾನೆಯೇ, ದೇವರಿದ್ದಾನೆಂದು ನಂಬಿದ ಸಮಾಜವು ಎಂತಹುದು, ದೇವರಿದ್ದಾನೆಂದು ಯಾರು ನಂಬಿಸಿದ್ದಾರೆ. ಇದರಿಂದ ಎಂತಹ ಸಮುದಾಯದ ಮೇಲೆ ಪ್ರಭಾವಬೀರುತ್ತದೆ. ಇದರಿಂದ ಯಾರಿಗೆ ಉಪಯೋಗವಾಗುತ್ತದೆ, ಯಾರಿಗೆ ನಷ್ಟವಾಗುತ್ತದೆ ಎನ್ನುವ ಅನೇಕ ಪ್ರಶ್ನೆಗಳನ್ನಿಟ್ಟುಕೊಂಡು ಈ ಕೃತಿ ಮುಂದುವರಿಯುತ್ತದೆ.

ಅರ್ಜುನ್‌ಗೊಳಸಂಗಿ ಅವರು 'ಗ್ರಾಮನಾಮಗಳಲ್ಲಿ ದಲಿತೀಯತೆ' ಲೇಖನದಲ್ಲಿ ಜನಾಂಗದ ಹಿನ್ನೆಲೆಯಲ್ಲಿ ದಲಿತ ಗ್ರಾಮಗಳೆಂದು ಗುರುತಿಸಿ ಈ ಲೇಖನವನ್ನು ಬರೆದಿದ್ದಾರೆ. ಅವರವರ ಸಾಮಾಜಿಕ ರೀತಿ-ನೀತಿ ಬೇರೆ ಬೇರೆಯಾಗಿರುವುದರಿಂದ ಸ್ವತಂತ್ರವಾಗಿ ಜೀವಿಸಲು ತಮ್ಮದೇಯಾದ ಕೇರಿ, ಹೊಲಗೇರಿ, ಮಾದರಗೇರಿ, ಒಕ್ಕಲಗೇರಿ ಇನ್ನು ಕೆಲವೆಡೆ ಬೀದಿಗಳಿಗೆ ಹೆಸರಿಟ್ಟಿರುವುದು ಕಂಡುಬರುತ್ತದೆ ಎಂದು ಹೇಳಿದ್ದಾರೆ. 'ಮಾದಿಗ ಜನಾಂಗವಾಚಿ' ಮಾತಂಗ ವಂಶದವರಾದ ಮಾದಿಗ ಜನಾಂಗವಾಚಿಯಾಗಿ ಅನೇಕ ಗ್ರಾಮನಾಮಗಳು ಕಂಡುಬರುತ್ತವೆ ಎಂದು ಹೇಳಿ ಉದಾಹರಣೆಗಳನ್ನು ಕೊಟ್ಟಿದ್ದಾರೆ. ಮಾದಹಳ್ಳಿ, ಮಾದನಹಳ್ಳಿ, ಮಾದನ ಹಿಪ್ಪರಗಿ, ಮಾದಾರಕಲ್ಲು, ಮಾದಿನಾಯಕನ ಹಳ್ಳಿ, ಮಾದಿಗರ ಹಳ್ಳಿ, ಮಾದಮಂಗಲ ಹೀಗೆ ಅನೇಕ ಹಳ್ಳಿಗಳನ್ನು ಅವರು ಗುರುತಿಸಿದ್ದಾರೆ. 'ದಲಿತರಿಗೆ ಅಡ್ಡಾಗಿರುವ ಅಡ್ಡ ಹೆಸರುಗಳು' ಲೇಖನದಲ್ಲಿ ಅಡ್ಡ ಹೆಸರುಗಳು ದಲಿತರಿಗೆ ಹೇಗೆ ಕಿರಿಕಿರಿಯುಂಟುಮಾಡುತ್ತವೆ ಎಂದು ವಿಶ್ಲೇಷಿಸಿದ್ದಾರೆ. ವೈಯಕ್ತಿಕ ಜೀವನ ನೆಲೆಯಿಂದ ಸಾಮೂಹಿಕ ಜೀವನದ ಸಂದರ್ಭದಲ್ಲೂ ದಲಿತರು ಎಂದು ಸೂಚಿಸುವ ಸರ್‌ನೇಮಗಳು ದಲಿತರಿಗೆ ಸರ್ಪದ ಹುಣ್ಣಿನಂತೆ ಎಂದು ಹೇಳಿ ಲೇಖನವನ್ನು ಮುಂದುವರಿಸುತ್ತಾರೆ.

ನಂಜಯ್ಯ ಹೊಂಗನೂರು ಎಂ. ಅವರ 'ಸ್ಥಳನಾಮಗಳು' (೨೦೦೯) ಎಂಬ ಪುಸ್ತಕದಲ್ಲಿ ವಾರ್ಗೀಕರಣದ ವಿಧಾನವನ್ನು ತಿಳಿಸಿದ್ದಾರೆ. ಅವರು ಸ್ಥಳನಾಮಗಳನ್ನು ಪ್ರಾಕೃತಿಕ ಸ್ಥಳನಾಮಗಳ ಮತ್ತು ಸಾಂಸ್ಕೃತಿಕ ಸ್ಥಳನಾಮಗಳೆಂದು ಎರಡು ರೀತಿಯಲ್ಲಿ ವರ್ಗೀಕರಿಸಿದ್ದಾರೆ. ಪ್ರಾಕೃತಿಕ ಸ್ಥಳನಾಮಗಳಲ್ಲಿ ಮತ್ತೆ ನಾಲ್ಕು ಭಾಗಗಳನ್ನಾಗಿ ಮಾಡಿಕೊಂಡಿದ್ದಾರೆ. ಅವು ಜಲವಾಚಕಗಳು, ಭೂವಾಚಕಗಳು, ಸಸ್ಯವಾಚಕಗಳು, ಪ್ರಾಣಿವಾಚಕಗಳೆಂದು ವಿಭಾಗಿಸಿಕೊಂಡಿದ್ದು, ಸಾಂಸ್ಕೃತಿಕ ಸ್ಥಳನಾಮಗಳು ಎಂಬ ವಿಭಾಗದಲ್ಲಿ ಏಳು ರೀತಿಯಲ್ಲಿ ವರ್ಗೀಕರಣ ಮಾಡಿಕೊಂಡಿದ್ದಾರೆ. ಇದರಲ್ಲಿ 'ದೈವವಾಚಕ ಸ್ಥಳನಾಮಗಳಲ್ಲಿ ವೈಷ್ಣವ ಧರ್ಮ, ಶೈವ ಧರ್ಮ, ಜೈನಧರ್ಮ, ಇಸ್ಲಾಂ ಧರ್ಮ, ಕ್ರೈಸ್ತಧರ್ಮ, ಬೌದ್ಧಧರ್ಮ ಎಂಬ ಐದು ವಿಭಾಗಗಳನ್ನು ಮಾಡಿದ್ದಾರೆ. ಇಲ್ಲಿ ಸಾಂಸ್ಕೃತಿಕ ಸ್ಥಳನಾಮಗಳನ್ನು ಹೇಗೆ ನೋಡಬೇಕು, ಅವುಗಳ ಲಕ್ಷಣಗಳೇನು ಎಂಬುದನ್ನು ತಿಳಿದುಕೊಂಡು ನನ್ನ ವಿಷಯಕ್ಕೆ ಸಂಬಂಧಿಸಿದಂತಹ ವರ್ಗೀಕರಣವನ್ನು ಮಾಡಿಕೊಳ್ಳುವುದಕ್ಕೆ ಈ ಪುಸ್ತಕದಿಂದ ಅನುಕೂಲವಾಯ್ತು.

ಶಶಿಕಲಾ ಎಚ್. ಅವರು ಸಂಪಾದಿಸಿರುವ 'ನಾಮ ವ್ಯಾಸಂಗ' (೨೦೧೨) ಪುಸ್ತಕದಲ್ಲಿ ಕಲ್ಬುರ್ಗಿಯವರು ಬರೆದಿರುವ ಮಾರ್ಗ ಸಂಪುಟಗಳಲ್ಲಿಯ, ನಾಮಾಧ್ಯಯನಕ್ಕೆ ಸಂಬಂಧಪಟ್ಟ ಎಲ್ಲ ಲೇಖನಗಳನ್ನು ಒಂದೆಡೆ ಸೇರಿಸಿ ಓದುಗರಿಗೆ ಅನುಕೂಲ ಮಾಡಿಕೊಟ್ಟಿದ್ದಾರೆ. ಬೈರವ, ಮಂಜಪ್ಪ ಮತ್ತು ಮೈಲಾರ

ಮುದಿಮಲ್ಲಯ್ಯ-ಮುದಿ ವೀರಣ್ಣ- ಮುದಿ ಸಂಗಯ್ಯ, ಮೈಲಾರ-ಮಾಳಚಿ, ಎಜೆಯಪ್ಪ: ಪ್ರಾಚೀನ ಜನಪದ ದೇವತೆ, ಬೂದುಗ ಮತ್ತು ಹೊನ್ನುಗ್ಗಿ, ವಿರೂಪಾಕ್ಷ, ಪಾಂಡುರಂಗ ವಿಠ್ಠಲ-ಪುರಂದರ ವಿಠ್ಠಲ, ಎಕ್ಕಲಮ್ಮ-ಎಲ್ಲಮ್ಮ, ಬಾದುಬ್ಬೆ-ಬಳರಿದೇವತೆ, ಉಡುಚಾದೇವಿ, ಹರಿಹರ ಹೆಸರಿನ ನಿಜರೂಪ, ಕುಮಾರರಾಮ, ಹಕ್ಕಬುಕ್ಕ, ಪ್ರೌಢದೇವರಾಯ ಹೆಸರಿನ ನಿಜರೂಪ, ಮಲ್ಲೇಶ-ಆದ್ರೀಶ ಹೀಗೆ ಕೆಲವು ಪ್ರಾಚೀನ ವ್ಯಕ್ತಿನಾಮ-ಗ್ರಾಮನಾಮಗಳನ್ನು ಅಧ್ಯಯನಕ್ಕೊಳಪಡಿಸಿದ್ದಾರೆ. ಇದರಲ್ಲಿ ಹೆಚ್ಚಾಗಿ ದೇವತೆಗಳ ಹೆಸರುಗಳನ್ನು ಅಧ್ಯಯನಕ್ಕೆ ತೆಗೆದುಕೊಂಡು ಅವುಗಳನ್ನು ವಿಶ್ಲೇಷಿಸಿದ್ದಾರೆ.

ಸಂಸ್ಕೃತಿಯನ್ನು ಮಾನವಶಾಸ್ತ್ರದ ನೆಲೆಯಿಂದ, ಸಾಮಾಜಿಕ ನೆಲೆಯಿಂದ, ಚಾರಿತ್ರಿಕ ನೆಲೆಯಿಂದ ವ್ಯಾಖ್ಯಾನ ಮಾಡಿಕೊಳ್ಳುವ ಮಾದರಿಗಳಿವೆ. ಕನ್ನಡದಲ್ಲಿ ನಾಮವಿಜ್ಞಾನವನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ, ಮಾನವಶಾಸ್ತ್ರ ಮತ್ತು ಚಾರಿತ್ರಿಕ ನೆಲೆಯಿಂದ ಅಧ್ಯಯನ ಮಾಡಲಾಗಿದೆ. ಕಲ್ಬುರ್ಗಿಯವರ ನಾಮ ವಿಜ್ಞಾನವನ್ನು ಇಂತಹ ಅಧ್ಯಯನದ ಕ್ರಮಗಳಿಂದ ಕೇಂದ್ರವಾಗಿಟ್ಟುಕೊಂಡು ನೋಡಬಹುದಾಗಿದೆ. ಈ ಗ್ರಂಥದಲ್ಲಿ ವ್ಯಕ್ತಿನಾಮಗಳು ಕೆಲವು ದೇವತೆಗಳ ಮತ್ತು ಕೆಲವು ಪ್ರಸಿದ್ಧ ವ್ಯಕ್ತಿಗಳ ಹೆಸರಿಗೂ ಅಲ್ಲಿನ ಪರಿಸರಕ್ಕೂ ಇರುವ ಸಂಬಂಧವನ್ನು ಗುರುತಿಸಿಕೊಳ್ಳುವ ಇರಾದೆ ಹೊಂದಿವೆ. ಹೀಗಾಗಿ ಬಳರಿ, ಬೂದುಗ, ಬಾದುಬ್ಬೆ, ಉಡುಚಾದೇವಿ ಇವರು ದೇವತೆಗಳು ಮಾತ್ರವಾಗಿರದೇ ಸ್ಥಳಪುರಾಣವನ್ನು ಸಾರುತ್ತಿರುವ ಜೀವಂತ ಸಾಕ್ಷಿಗಳಾಗಿವೆ. ಅಂತೆಯೇ ಕಪ್ಪೆ-ಅರಭಟ್ಟ, ಅರಿಕೇಸರಿ, ಕುಮಾರರಾಮ, ಅನೇಕ ಐತಿಹಾಸಿಕ ಹೆಸರಿನ ಒಡಲು ಅನೇಕ ಚಾರಿತ್ರಿಕತೆಯನ್ನು ಹುದುಗಿಸಿಟ್ಟುಕೊಂಡಿರುವುದನ್ನು ಕಲ್ಬುರ್ಗಿಯವರು ಕಾಣುತ್ತಾರೆ. ಈ ಸಂಕಲನದಲ್ಲಿರುವ ಲೇಖನಗಳಲ್ಲಿ ಕಲ್ಬುರ್ಗಿಯವರು ದೈವಗಳ ಸುತ್ತಲು ಕನ್ನಡದ ಚರಿತ್ರೆಯನ್ನು ಕಟ್ಟಲು ಹವಣಿಸುತ್ತಾರೆ. ಅದರಲ್ಲಿಯೂ ಜನಪದ ದೈವಗಳ ಆರಾಧನೆಯ ಹಿಂದಿನ ಮೂಲವನ್ನು ಹುಡುಕುತ್ತಾರೆ. ಭೈರವ, ಮೈಲಾರ, ಮಲ್ಲಿಕಾರ್ಜುನ, ಭ್ರಮರಾಂಬೆ, ಮಾಳಚಿ, ಎಕ್ಕಲಮ್ಮ, ಬಾದುಬ್ಬೆ, ಬಳರಿ ಮುಂತಾದವು ಕೆಳಜಾತಿ ಸಮುದಾಯಗಳ ದೇವತೆಗಳಾಗಿವೆ. ಇಂತಹ ದೈವಗಳ ಅಧ್ಯಯನವು ಕನ್ನಡ ಸಮುದಾಯದ ಪ್ರಾಚೀನ ಹಂತದ, ಅದರ ಮುಂದಿನ ಹಂತದ ಜೀವನಕ್ರಮವನ್ನು ತನ್ನೊಳಗೆ ಹುದುಗಿಸಿಕೊಂಡಿರುವ ಸಾಧ್ಯತೆಯಿದೆ. ಅದರ ಒಂದು ಭಾಗವಾಗಿ ಕಲ್ಬುರ್ಗಿಯವರು ಜನಪದ ದೇವತೆಗಳ ಅಧ್ಯಯನ ನಡೆಸಿದ್ದಾರೆ. ನಾಮವ್ಯಾಸಂಗ ಕೃತಿಯಲ್ಲಿಯೇ ಎರಡನೇ ಭಾಗವಾಗಿರುವ 'ಸ್ಥಳನಾಮ' ಎನ್ನುವ ಶೀರ್ಷಿಕೆಯಡಿಯಲ್ಲಿ ೧೦ ಲೇಖನಗಳನ್ನು ಬರೆದಿದ್ದಾರೆ. ಬನವಾಸಿ ಸ್ಥಳನಾಮ ವಿವೇಚನೆ, ಧಾರವಾಡ ಗ್ರಾಮನಾಮ ವಿವೇಚನೆ, ಚಿತ್ರದುರ್ಗ ಪ್ರಾಚೀನ ಹೆಸರು, ಪುಣೆ ಸ್ಥಳನಾಮ ವಿವೇಚನೆ, ಕುಂತಳ, ಕರ್ನಾಟಕ ನಿಷ್ಪತ್ತಿ, ಹಂಪಿಯ ಮನ್ಮಥತೀರ್ಥ ಇನ್ನು ಮುಂತಾದ ಸ್ಥಳನಾಮಗಳನ್ನು ವಿವೇಚಿಸಿದ್ದಾರೆ. ದೇಸೀಯ

ಮೂಲವೆಂಬುದು ಜನಪದರಲ್ಲಿ, ಕಥೆಗಳಲ್ಲಿ, ಸ್ಥಳಪುರಾಣಗಳಲ್ಲಿ ಐತಿಹ್ಯಗಳಲ್ಲಿ ಅಡಗಿರಬಹುದು. ಹೀಗಾಗಿ ಸಂಶೋಧನೆಗೆ ಮೂಲ ಆಕರವಾಗಿ ಇವುಗಳನ್ನು ಅವರು ಬಳಸಿಕೊಂಡಿದ್ದಾರೆ.

ಸಂಶೋಧಕರಾದ ಹಾಲಪ್ಪ ಲಿಂಗದಳ್ಳಿ ಅವರು 'ಬಳ್ಳಾರಿ ಪರಿಸರದ ಹಾಲುಮತ ದೈವಗಳು' (೨೦೧೫) ಎನ್ನುವ ಕೃತಿಯ ಅಧ್ಯಾಯ ಮೂರರಲ್ಲಿ 'ಬಳ್ಳಾರಿ ನಗರ ನಾಮ ನಿಷ್ಪತ್ತಿ'ಯನ್ನು ಪುರಾಣ ಮತ್ತು ದಂತಕಥೆಗಳು ಮತ್ತು ಶಾಸನಗಳ ಮೂಲಕ ಬಳ್ಳಾರಿ ನಾಮ ನಿಷ್ಪತ್ತಿಯನ್ನು ಕಂಡುಕೊಂಡಿದ್ದಾರೆ. ಅಧ್ಯಾಯ ನಾಲ್ಕರಲ್ಲಿ ಹಾಲುಮತ ದೈವಗಳು: ವೀರಪರಂಪರೆಯ ಧಾರ್ಮಿಕತೆ ಎನ್ನುವಲ್ಲಿ ಬೀರದೇವರ ಸಂಪ್ರದಾಯದ ದೈವಗಳ ಹಿನ್ನೆಲೆ, ಆಚರಣೆ, ಪೂಜಾ ವಿಧಾನಗಳನ್ನು ದಾಖಲಿಸಿದ್ದಾರೆ. ಮುಂದೆ ಸ್ತ್ರೀ ದೇವತೆಗಳ ಚರಿತ್ರೆ, ಆಚರಣೆಗಳು ಹಾಲುಮತ ದಾರ್ಶನಿಕರು ಮತ್ತು ಇತರ ದೈವಗಳ ಕುರಿತ ವಿವರಣೆಯಿದೆ. ಒಟ್ಟಾರೆ ಈ ಪುಸ್ತಕದಲ್ಲಿ ಹಾಲುಮತ ದೈವಗಳ ಉಗಮ, ವಿಕಾಸ ಅವುಗಳ ಆಚರಣೆಗೆ ಸಂಬಂಧಿಸಿದಂತಹ ಮಾಹಿತಿಯು ವಿಪುಲವಾಗಿವೆ. ಕುರುಬ ಸಮುದಾಯದ ಕುರಿತ ಅಧ್ಯಯನಕ್ಕೆ ಇದೊಂದು ಪೂರಕ ಗ್ರಂಥವಾಗಬಲ್ಲದು.

ದೇ.ಜ.ಗೌ, ಅವರ 'ವ್ಯಕ್ತಿನಾಮಗಳು–ಜಾನಪದ ಮಹಾಸಂಪುಟ' (೨೦೧೦)ದಲ್ಲಿ ಸಾಂಸ್ಕೃತಿಕ ದೃಷ್ಟಿಯಿಂದ ಅಂಕಿತನಾಮಗಳ, ಸ್ಥಳನಾಮ ಮತ್ತು ವ್ಯಕ್ತಿನಾಮಗಳ ಅಧ್ಯಯನ ಅತ್ಯಂತ ಉಪಯುಕ್ತವಾಗುತ್ತದೆ. ಅವು ಇತಿಹಾಸ, ಭೂಗೋಳ, ಸಾಮಾಜಿಕ ಪದ್ಧತಿ ಅಂತೆಯೇ ಜನರ ಇಷ್ಟಾನಿಷ್ಟ ಮತ್ತು ಸಾಹಸ ಕಲ್ಪನೆಗಳ ಬಗೆಗೆ ಬೆಳಕು ಚೆಲ್ಲುತ್ತವೆ. ದೇವರ ನಾಮಗಳ ಅನುಕರಣೆಯಿಂದ ಕೆಲವು ಹೆಸರುಗಳು ಹುಟ್ಟಿಕೊಳ್ಳುತ್ತವೆ. ಜಾತಿಮತ ಬೇದವಿಲ್ಲದೆ ದೇವ ಎಂಬ ಸರ್ವಸಾಮಾನ್ಯ ಪದವನ್ನು ಯಾರು ಬೇಕಾದರೂ ಬಳಸಿಕೊಳ್ಳಬಹುದು; ಉದಾ. ದೇವಶರ್ಮ, ದೇವನಾಥ, ದೇವಯ್ಯ, ದೇವಶೆಟ್ಟಿ, ಸಾಮಾನ್ಯವಾಗಿ ಮಕ್ಕಳಿಗೆ ತಂತಮ್ಮ ಇಷ್ಟದೇವತೆಗಳ ಹೆಸರನ್ನಿಡುವುದೇ ಹೆಚ್ಚು ರೂಢಿ. ಶಿವಸ್ವಾಮಿ, ರಾಮಚಂದ್ರ, ಸ್ವಾಮಿಗೌಡ, ಚಂದ್ರಯ್ಯ, ಗಣಪಯ್ಯ, ಮದನಗೋಪಾಲ, ಹರಿಹರ, ನಾಗಪ್ಪ, ನಂದೀಶ್ವರ, ಸೂರ್ಯನಾಥ, ಕಮಲನಾಭ ಹೀಗೆ ಹೆಸರಿಸಿದ್ದಾರೆ.

ನಾರಾಯಣ ಕೆ.ವಿ., ಅವರು ಸಂಪಾದಿಸಿರುವ 'ವ್ಯಕ್ತಿನಾಮಗಳ ಸ್ವರೂಪ ಮತ್ತು ವಿಶ್ಲೇಷಣೆ' (೨೦೦೦) ಕೃತಿಯಲ್ಲಿ ಆರು ಲೇಖನಗಳಿದ್ದು, ಪ್ರತಿಯೊಂದು ಲೇಖನವೂ ನಾಮಾಧ್ಯಯನಕಾರರಿಗೆ ಪ್ರಮುಖವಾದ ಆಕರವಾಗಿದೆ. 'ಹೆಸರು:ತಾತ್ವಿಕತೆ' ಎಂಬ ಲೇಖನದಲ್ಲಿ ಕೆ.ವಿ. ನಾರಾಯಣ ಅವರು ಧಾರ್ಮಿಕ ಆವರಣದಲ್ಲಿ ಹಲವು ದೈವಗಳಿಗೆ ನೂರಾರು ಹೆಸರುಗಳಿರುತ್ತವೆ. ಆ ಹೆಸರುಗಳ ವ್ಯಾಖ್ಯೆ ಬಹು ದೀರ್ಘವಾದ ಸಂಕಥನವನ್ನು ನಿರ್ಮಿಸುತ್ತದೆ. 'ತ್ರಿಪೂರಾರಿ; ಮಧುಸೂದನ, ಸಹಸ್ರಾಕ್ಷ, ವಹ್ನಿಕೇಶಿ, ಅಂಬುಜನಾಭ ಮುಂತಾದವು ಹೆಸರುಗಳಾದರೆ, ಅವು ವ್ಯಾಖ್ಯಾನಗಳಾಗಿ ಕೆಲಸ ಮಾಡುತ್ತವೆ; ವಿವಿಧ ಸಂಕಥನಗಳನ್ನು ಪ್ರತಿನಿಧಿಸುತ್ತವೆ. ವ್ಯಕ್ತಿನಾಮ: ಆಕರಗಳು ಎನ್ನುವ ಲೇಖನದಲ್ಲಿ, ಅಶೋಕಕುಮಾರ ರಂಜೇರೆ ಅವರು ಚರಿತ್ರೆಯುದ್ದಕ್ಕೂ ಮತ್ತು ಕಾವ್ಯ, ಪುರಾಣ, ಶಾಸನಗಳಲ್ಲಿ ದೊರೆಯುವ ವ್ಯಕ್ತಿನಾಮಗಳನ್ನು ಗಮನಿಸಿದರೆ ಹೆಚ್ಚು ಕಂಡುಬರುತ್ತವೆ. ಇವರು ಅವುಗಳನ್ನು ೧೦

ವಿಧಗಳಲ್ಲಿ ವರ್ಗೀಕರಿಸಿ ಸ್ಥೂಲವಾಗಿ ವಿವರಿಸಿದ್ದಾರೆ. ಅದರಲ್ಲಿ ದೈವ, ಪ್ರಾದೇಶಿಕವಾಗಿ, ಸಾಮಾಜಿಕ ಶ್ರೇಣೀಕರಣದಲ್ಲಿ ದೇವರ ಹೆಸರುಗಳು ಪುರಾಣದಲ್ಲಿ ಬರುವ ಹೆಸರುಗಳು, ದೈವ ಪುರಾಣ, ಚರಿತ್ರೆಯಿಂದ ಹೆಸರುಗಳನ್ನು ಪಡೆದಂತೆ ನಿಸರ್ಗದಿಂದಲೂ ಅನೇಕ ಹೆಸರುಗಳನ್ನು ಪಡೆದಿದ್ದಾನೆ. ಭೂಮಿ, ಆಕಾಶ, ಸಮುದ್ರ, ನೀರು, ಸೂರ್ಯ, ಚಂದ್ರ ಮತ್ತಿತರ ಪ್ರಕೃತಿಗೆ ಸಂಬಂಧಿಸಿದ ನೂರಾರು ಹೆಸರುಗಳನ್ನು ವ್ಯಕ್ತಿನಾಮವಾಗಿ ಬಳಸಿಕೊಂಡಿದ್ದೇವೆ. ವಸುಧಾ, ವಸುಂದರಾ, ಗಂಗೆ, ಸಾಗರ, ಭೂಮಿಕಾ, ಆಕಾಶ್, ಧರೆ, ಧರಣಿ, ಧರಿತ್ರಿ, ಮೇಘ, ಮೇಘರಾಜ, ಸೂರ್ಯ, ಚಂದ್ರ ಹೀಗೆ ಪಟ್ಟಿಯನ್ನು ನೀಡಬಹುದು ಎಂದಿದ್ದಾರೆ. 'ವ್ಯಕ್ತಿನಾಮಗಳ ರಾಚನಿಕ ಅಧ್ಯಯನ' ಎಂಬುವ ಲೇಖನದಲ್ಲಿ ಡಾ. ಸಾಂಬಮೂರ್ತಿಯವರು ಮೊದಲು ವ್ಯಕ್ತಿನಾಮಗಳನ್ನು ಗುರುತಿಸಿಕೊಂಡು ನಂತರ ರಾಚನಿಕ ವಿಶ್ಲೇಷಣೆಗೆ ಹೋಗಿದ್ದಾರೆ.

ಹಿಂದೂ ಧರ್ಮದಲ್ಲಿ ಸಹಸ್ರಾರು ದೇವರುಗಳಿರುವುದು ಮತ್ತು ಆ ಹೆಸರುಗಳನ್ನೇ ಮಕ್ಕಳಿಗೆ ಇಡುವುದು ನಡೆದುಬಂದಿದೆ. ಇದಕ್ಕೆ ಕಾರಣ ಹಿಂದಿನವರಲ್ಲಿದ್ದ ದೈವಶಕ್ತಿ. ಸದಾ ನಮ್ಮ ನಾಲಿಗೆಯಲ್ಲಿ ದೇವರ ಸ್ಮರಣೆಯಿರಲಿ ಎಂಬುದು ಮಕ್ಕಳಿಗೆ ದೇವರ ಹೆಸರಿಡಲು ಒಂದು ಕಾರಣವೆಂದು ಹೇಳಿದ್ದಾರೆ. ಜೊತೆಗೆ ದೇವರಿಗೆ ಸಮಾನವಾದ ಸಾಧುಸಂತರ ಹೆಸರುಗಳನ್ನೂ ಪ್ರಸ್ತಾಪಿಸಿದ್ದಾರೆ. 'ವ್ಯಕ್ತಿನಾಮಗಳು: ಚಾರಿತ್ರಿಕನೆಲೆ' ಎನ್ನುವ ಲೇಖನದಲ್ಲಿ ಡಾ. ಪಿ. ಮಹಾದೇವಯ್ಯ ಅವರು ವ್ಯಕ್ತಿನಾಮಗಳ ಅಧ್ಯಯನವನ್ನು ಚಾರಿತ್ರಿಕ ನೆಲೆಯಿಂದ ಅಧ್ಯಯನ ಮಾಡುವುದಕ್ಕಿಂತ ಧಾರ್ಮಿಕ ನೆಲೆಯಿಂದ ಶೋಧಿಸುವುದು ಸೂಕ್ತ. ಏಕೆಂದರೆ ನಮ್ಮ ಪ್ರಾಚೀನ ಮತ್ತು ಸಮಕಾಲೀನ ರಾಜಮನೆತನಗಳ ಪುರುಷ ಮತ್ತು ಸ್ತ್ರೀನಾಮಗಳು ಮತ್ತು ಸಾಮಾನ್ಯ ಜನರ ಸ್ತ್ರೀ ಮತ್ತು ಪುರುಷರ ನಾಮಗಳು ಹೆಚ್ಚಿನ ಪ್ರಮಾಣದಲ್ಲಿ ಧಾರ್ಮಿಕ ಮೂಲದಿಂದ ಹುಟ್ಟಿಕೊಂಡಿವೆ. ಈ ಹಿನ್ನೆಲೆಯಿಂದ ವ್ಯಕ್ತಿನಾಮದ ಚಾರಿತ್ರಿಕ ಅಧ್ಯಯನದೊಳಗೆ ಒಂದು ಸಾಂಸ್ಕೃತಿಕ ಚರಿತ್ರೆ ಇರುವಂತೆ ಸಾಂಸ್ಕೃತಿಕ ಪ್ರಭಾವಿತ ವ್ಯಕ್ತಿನಾಮದಲ್ಲಿ ಒಂದು ಚರಿತ್ರೆ ಅಡಗಿರುತ್ತದೆ. ಹಾಗಾಗಿ ವ್ಯಕ್ತಿನಾಮಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ ನೆಲೆಗಳು ಪರಸ್ಪರ ಪೂರಕವಾಗಿವೆ ಎಂದಿದ್ದಾರೆ. 'ವ್ಯಕ್ತಿನಾಮಗಳು: ಸಾಮಾಜಿಕ ನೆಲೆ' ಎನ್ನುವ ಲೇಖನದಲ್ಲಿ ಡಾ.ಡಿ. ಪಾಂಡುರಂಗಬಾಬು ಅವರು ವ್ಯಕ್ತಿನಾಮಗಳು ವ್ಯಕ್ತಿ ಮತ್ತು ಸಮಾಜದ ನಡುವಿನ ಕೊಂಡಿಯಾಗಿ ಹೇಗೆ ಕೆಲಸ ಮಾಡುತ್ತವೆಂಬುದನ್ನು ಜಾತಿ, ವೃತ್ತಿ, ಸ್ತರ ಸೂಚಕ ಅಂಶಗಳನ್ನು ಸ್ಥೂಲವಾಗಿ ವಿವರಿಸುವುದರ ಮೂಲಕ ಹೇಳಿ ವ್ಯಕ್ತಿನಾಮಗಳಲ್ಲಿ ಆಧುನೀಕರಣದಿಂದ ಹೇಗೆ ಬದಲಾವಣೆಯಾಗುತ್ತವೆಂಬುದನ್ನು ಪ್ರಯೋಗದ ಮೂಲಕ ತಿಳಿಸಿದ್ದಾರೆ. ಹಾಗೆಯೇ ಡಾ.ಎಸ್.ಎಸ್. ಅಂಗಡಿಯವರು ಕರ್ನಾಟಕ ಕುಲನಾಮಗಳ ಬಗೆಗೆ ಸ್ಥೂಲವಾದ ಮಾಹಿತಿಯನ್ನು ಒದಗಿಸಿದ್ದಾರೆ.

ನಾರಾಯಣ ಕೆ.ವಿ. ಅವರು ಸಂಪಾದಿಸಿರುವ 'ಸ್ಥಳನಾಮಗಳು ಪರಿವರ್ತನೆ ಮತ್ತು ಪ್ರಭಾವ' (೧೯೯೯) ಎಂಬ ಕೃತಿಯಲ್ಲಿ ಮರಾಠಿ, ಸಂಸ್ಕೃತ, ಉರ್ದು, ಕನ್ನಡೇತರ ದ್ರಾವಿಡ ಭಾಷೆಗಳು, ಇಂಗ್ಲಿಶ್ ಈ ಭಾಷೆಗಳ ಪ್ರಭಾವದಿಂದ ಕನ್ನಡದ ಸ್ಥಳನಾಮಗಳ ಮೇಲೆ ಯಾವ ರೀತಿಯಲ್ಲಿ

ಪ್ರಭಾವ ಬೀರಿವೆ, ಧ್ವನಿ ವ್ಯತ್ಯಾಸಗಳು ಎಲ್ಲೆಲ್ಲಿ ಬದಲಾವಣೆಗೊಂಡಿವೆ ಎಂಬುದು ಪ್ರಯೋಗಗಳನ್ನು ಕೊಡುವುದರ ಮೂಲಕ ಚರ್ಚಿಸಿದ್ದಾರೆ. ಇಂಗ್ಲಿಶ್ ಪ್ರಭಾವದಿಂದಾಗಿ ಕನ್ನಡ ಮಾತಿನ ನಡುವೆಯಾಗಲಿ, ಇಂಗ್ಲಿಷ್ ಮಾತಿನ ನಡುವೆಯಾಗಲಿ ವ್ಯಂಜನಾಂತವಾಗಿ ಉಚ್ಚಾರವಾಗುವುದು ಕಂಡುಬರುತ್ತದೆ. ಉದಾ. ಸೊಂಡೂರು–ಸಂಡೂರ್, ಸುರಪುರ–ಸುರಪೂರ್, ಹೊಸಪೇಟೆ–ಹೊಸಪೇಟ್, ಧಾರವಾಡ–ಧಾರವಾಡ್ ಆಗುತ್ತದೆ. ಕೊನೆಯ ಲೇಖನದಲ್ಲಿ ಎಸ್.ಎಸ್. ಅಂಗಡಿಯವರು, ಎಡೆಗಳು ಹೇಳುವ ಕಂನಾಡ ಕತೆ, ಕೆಲವು ದೇಶನಾಮಗಳು, ತುಳುನಾಡಿನ ಸ್ಥಳನಾಮಗಳು, ವಾಗಾರ್ಥ, ವಿ. ಗೋಪಾಲಕೃಷ್ಣರ ಸ್ಥಳನಾಮ ಅಧ್ಯಯನಗಳು, ಹೆಸರಿನಲ್ಲೇನಿದೆ, ಕನ್ನಡ ನಾಮವಿಜ್ಞಾನ, ಸ್ಥಳನಾಮವ್ಯಾಸಂಗ, ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳ ಅಧ್ಯಯನ, ಸಕಲೇಶಪುರ ಪರಿಸರದ ಸ್ಥಳನಾಮಗಳು ಈ ಕೃತಿಗಳ ಅಧ್ಯಯನದ ಸ್ಥೂಲ ಸಮೀಕ್ಷೆಯನ್ನು ಮಾಡಿದ್ದಾರೆ.

ದೇಶಪಾಂಡೆ ಎಸ್.ಎಲ್. ಅವರ 'ಕರ್ನಾಟಕದ ಸ್ಥಳನಾಮಗಳು ಒಂದು ಅಧ್ಯಯನ' (೨೦೦೭–೦೮) ಎಂಬ ಪುಸ್ತಕದಲ್ಲಿ ಒಟ್ಟಾರೆ ೧೨ ಅಧ್ಯಾಯಗಳನ್ನು ಮಾಡಿಕೊಂಡಿದ್ದಾರೆ. ಏಳನೆಯ ಅಧ್ಯಾಯದಲ್ಲಿ ಕರ್ನಾಟಕದಲ್ಲಿರುವ ಸ್ಥಳನಾಮಗಳ ವೈವಿಧ್ಯತೆ ಎನ್ನುವುದರಲ್ಲಿ ಹನ್ನೊಂದು ರೀತಿಯ ವರ್ಗೀಕರಣವನ್ನು ಮಾಡಿಕೊಂಡಿದ್ದಾರೆ. ಪರಿಮಾಣವನ್ನು ಅನುಲಕ್ಷಿಸಿ, ಜನಾಂಗಸೂಚಕ ಗ್ರಾಮಗಳಿಗೆ ಕರ್ನಾಟಕದಲ್ಲಿ ಮೊದಲನೇ ಸ್ಥಾನ ದೊರೆತರೆ, ದೇವತಾಸೂಚಕ ಸ್ಥಳನಾಮಗಳಿಗೆ ಎರಡನೇ ಸ್ಥಾನ ದೊರೆಯುತ್ತದೆ. ದೇವತೆಗಳಲ್ಲಿ ಅತಿ ಹೆಚ್ಚಿನ ಸ್ಥಾನ ಸಿಗುವುದು ರಾಮದೇವರಿಗೆ. ಒಟ್ಟು ೧೬೫೫ ದೇವತಾ ಸೂಚಕ ಸ್ಥಳನಾಮಗಲ್ಲಿ ರಾಮದೇವರ ಸ್ಥಳನಾಮಗಳು ೨೬೦. ಸಾಮಾನ್ಯ ವ್ಯಕ್ತಿನಾಮಗಳಿರುವ ಗ್ರಾಮಗಳು ೫೦೦ಕ್ಕೂ ಹೆಚ್ಚಿವೆ. ಅವುಗಳಲ್ಲಿ ಅತಿ ಹೆಚ್ಚಿನ ಗ್ರಾಮಗಳು ೨೧೪ ಕನ್ನಡಿಗರ ಕುಲದೈವನಾದ ತಿಮ್ಮಪ್ಪನ ಹೆಸರಿನಲ್ಲಿವೆ. ಸುಮಾರು ೫೩ ದೇವತೆಗಳನ್ನು ಪಟ್ಟಿಮಾಡಿ ಅವು ಎಷ್ಟು ಸಂಖ್ಯೆಗಳಲ್ಲಿ ತಮ್ಮ ಸ್ಥಾನವನ್ನು ಪಡೆದುಕೊಂಡಿವೆ ಎಂಬುದನ್ನು ಕ್ಷೇತ್ರಾಧ್ಯಯನದ ಮೂಲಕ ಪಟ್ಟಿಯನ್ನು ಸಂಶೋಧಕರು ಕೊಟ್ಟಿದ್ದಾರೆ. ಇವುಗಳ ಜೊತೆಗೆ ಕುಲದ ಮಕ್ಕಳು, ವ್ಯಕ್ತಿಸೂಚಕ ಸ್ಥಳನಾಮಗಳು, ಸಾಮಾನ್ಯ ವ್ಯಕ್ತಿನಾಮಗಳು, ನಾಮರೂಪ ಮಾರ್ಪಾಟುಗಳು, ಸಸ್ಯಸೂಚಕ ಸ್ಥಳನಾಮಗಳು, ಪ್ರಾಣಿಸೂಚಕ ಸ್ಥಳನಾಮಗಳು, ವ್ಯವಹಾರ ಸೂಚಕ ಸ್ಥಳನಾಮಗಳು ಇನ್ನು ಅನೇಕ ರೀತಿಯ ಸ್ಥಳನಾಮಗಳ ಪಟ್ಟಿಯನ್ನು ಕೊಟ್ಟಿದ್ದಾರೆ.

ನಾಗಾಚಾರಿ ಎಸ್ ಅವರ 'ನಾಮಸಂಪದ' (೨೦೦೬) ಎಂಬ ಕೃತಿಯಲ್ಲಿ ಗ್ರಾಮನಾಮಗಳ ಅಧ್ಯಯನ ಕ್ರಮಗಳು ಎನ್ನುವ ಅಧ್ಯಾಯದಲ್ಲಿ ಗ್ರಾಮನಾಮಗಳನ್ನು ಭೂಗೋಳಶಾಸ್ತ್ರ, ಮಾನವಶಾಸ್ತ್ರ, ಭಾಷಾಶಾಸ್ತ್ರ, ಜಾನಪದ, ಸಮಾಜಶಾಸ್ತ್ರ, ಶಾಸನಶಾಸ್ತ್ರ ಮತ್ತು ಮನೋವಿಜ್ಞಾನಗಳಂತಹ ಅನ್ಯಜ್ಞಾನ ಶಿಸ್ತುಗಳೊಂದಿಗೆ ಅಧ್ಯಯನ ಮಾಡಿದರೆ ಅಂತಹ ಅಧ್ಯಯನಕ್ಕೆ ಹೆಚ್ಚು ನಿಖರತೆ ಪ್ರಾಪ್ತವಾಗುತ್ತದೆ. ಮುಖ್ಯವಾಗಿ ಗ್ರಾಮನಾಮ ಸಂಶೋಧಕನಿಗೆ ಭೌಗೋಳಿಕ ಪರಿವೀಕ್ಷಣೆ, ಸ್ಥಳೀಯ ಹಿರಿಯರಿಂದ ಮಾಹಿತಿ ಸಂಗ್ರಹಗಳಿಂದ ಕೂಡಿದ ತಲಸ್ಪರ್ಶಿಯಾದ ಕ್ಷೇತ್ರಕಾರ್ಯದ ಜೊತೆಗೆ ಗ್ರಾಮನಾಮಗಳು ಸಂಬಂಧ ಹೊಂದಿರುವ ಅನ್ಯಶಿಸ್ತುಗಳ ಪರಿಚಯವೂ ಇರಬೇಕಾಗುತ್ತದೆ. ದೈವವಾಚಿ ನಿರ್ದಿಷ್ಟವನ್ನು

ಹೊಂದಿರುವ ಗ್ರಾಮನಾಮಗಳು ದೇವರಿಂದ ಬಂದವುಗಳಲ್ಲ. ಗ್ರಾಮಗಳಿಂದ ದೈವಕ್ಕೆ ಹೆಸರು ಬಂದಿದೆ. ಏಕೆಂದರೆ, ಗ್ರಾಮ ಮೊದಲು ಅಸ್ತಿತ್ವ ಪಡೆದು ಆನಂತರ ಆ ಗ್ರಾಮದಲ್ಲಿ ವಾಸಿಸುವ ಜನರಿಗೆ ಮಾನಸಿಕ ನೆಮ್ಮದಿಗಾಗಿ ಪೂಜಿಸುವ ಸಲುವಾಗಿ ಒಂದು ದೈವ ಅಸ್ತಿತ್ವ ಪಡೆಯುತ್ತದೆ ಎಂದು ತಿಳಿಸಿದ್ದಾರೆ.

ಮಲ್ಲಿಕಾರ್ಜುನ ಎಂ. ಅವರ 'ಬೀಳಗಿ ತಾಲೂಕಿನ ಸ್ಥಳನಾಮಗಳು' (೨೦೦೮) ಎಂ.ಫಿಲ್. ನಿಬಂಧದಲ್ಲಿ ತಾಲ್ಲೂಕಿನ ಸ್ಥಳನಾಮಗಳು ಇದರಲ್ಲಿ ಪ್ರಾಕೃತಿಕ, ಸಾಂಸ್ಕೃತಿಕ, ಸಾಮಾಜಿಕ, ಸಂಕೀರ್ಣವೆಂಬ ನಾಲ್ಕು ವಿಭಾಗಗಳನ್ನು ಮಾಡಿಕೊಂಡು, ಸಾಂಸ್ಕೃತಿಕ ಸ್ಥಳನಾಮಗಳಲ್ಲಿ ಎಂಟು ದೈವಮೂಲ ಸ್ಥಳನಾಮಗಳನ್ನು ಹೆಸರಿಸಿ ಅವುಗಳ ಶಬ್ದ ನಿಷ್ಪತ್ತಿಯನ್ನು ತಿಳಿಸಿ, ಯಾಕೆ ಆ ಸ್ಥಳಗಳಿಗೆ ದೈವಮೂಲ ಹೆಸರುಗಳು ಬಂದಿವೆಂಬುದನ್ನು ಸಂಶೋಧಕರು ಗುರುತಿಸಿ ವಿಶ್ಲೇಷಿಸಿದ್ದಾರೆ.

ಸವಿತಾ ಅವರ 'ಸಂಡೂರು ಪರಿಸರದ ಗ್ರಾಮ ದೈವಗಳು' (೨೦೦೫) ಎಂಬ ಎಂ.ಫಿಲ್ ನಿಬಂಧದಲ್ಲಿ ಮಾನವ ಬರುಬರುತ್ತಾ ಕೃಷಿಯನ್ನು ಆರಂಭಿಸಿದ ನಂತರ ಆತನ ದಿಕ್ಕೇ ಬದಲಾಯ್ತು. ಆತನ ಬದುಕು ಸಂಕೀರ್ಣಗೊಳ್ಳಲಾರಂಭಿಸಿತು. ಜೊತೆಗೆ ತನ್ನ ಸುತ್ತಣ ಪರಿಸರ ಅವನಿಗೆ ನಿಗೂಢವಾಗಿ ಕಾಣಲಾರಂಬಿಸಿರಬೇಕು. ಭಯಗೊಂಡ ಮಾನವ ತನ್ನದೇಯಾದ ದೈವಕ್ಕೆ ಮೊರೆ ಹೋಗಿರಬೇಕು. ದೈವದ ಸೃಷ್ಟಿಗೆ ಕೆಲವೊಂದು ಪರಿಸರ ನಿರ್ಮಿತವಾದ ಕಾರಣಗಳು ಮತ್ತು ಮಾನವ ತಾನು ಕಂಡುಕೊಂಡ ಕೆಲವೊಂದು ಮಾಂತ್ರಿಕ ಆಚರಣೆಗಳು ಕಾರಣವಾಗಿರಬಹುದು. ಇಂತಹವುಗಳು ಮನುಷ್ಯನಲ್ಲಿ ಭಯ ಹುಟ್ಟಿಸಿ ದೈವಗಳ ಧಾರ್ಮಿಕ ಆಚರಣೆಗಳು ಬೆಳಕಿಗೆ ಬಂದಿರಬೇಕು ಎಂದು ಸಂಶೋಧಕರು ತೀರ್ಮಾನಿಸಿದ್ದಾರೆ. ಸಂಡೂರಿನ ಕಾರ್ತಿಕೇಶ್ವರ ಸ್ವಾಮಿ, ಯಶವಂತನಗರದ ಗಂಡಿನರಸಿಂಹ, ರಾಮಮಲೆಯ ಪೀರಲಸ್ವಾಮಿ, ಬೆನ್ನಳ್ಳಿಯ ದುರುಗಮ್ಮ, ಗಾಟಿನ ಸ್ವಾಮಿ ಇನ್ನು ಅನೇಕ ದೇವ-ದೇವತೆಗಳು ಸಂಡೂರು ಪ್ರದೇಶದಲ್ಲಿ ಈಗಲೂ ಪೂಜೆಗೊಳ್ಳುತ್ತಲಿವೆ.

ಸಣ್ಣಪಾಪಯ್ಯ ಅವರ 'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' (೨೦೦೯) ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ವ್ಯಕ್ತಿನಾಮಗಳ ಸಾಮಾಜಿಕ ಅಧ್ಯಯನ ಎನ್ನುವ ಅಧ್ಯಾಯದಲ್ಲಿ ಬ್ರಾಹ್ಮಣ, ಲಿಂಗಾಯತ, ರೆಡ್ಡಿ, ಕುರುಬ, ಗೊಲ್ಲ, ವೈಶ್ಯ, ಮರಾಠಿ, ವಿಶ್ವಕರ್ಮ, ಲಂಬಾಣಿ ಜಾತಿಗಳು ಸಮಾಜದಲ್ಲಿ ಹೆಸರುಗಳು ಹೇಗೆ ಕೆಲಸ ಮಾಡುತ್ತವೆಂಬುದನ್ನು ತಿಳಿಸಿ ಅವುಗಳ ಪಟ್ಟಿಯನ್ನು ನೀಡಿದ್ದಾರೆ. ಮುಂದೆ ಇಸ್ಲಾಂ ಪರಿಸರದ ವ್ಯಕ್ತಿನಾಮಗಳನ್ನು ವಿವರಿಸುತ್ತಾ ಅಧ್ಯಯನದ ಅನುಕೂಲಕ್ಕಾಗಿ ಐದು ವಿಭಾಗಗಳನ್ನಾಗಿ ಮಾಡಿ ಅದರಲ್ಲಿ ದೈವಮೂಲದ ಹೆಸರುಗಳನ್ನು ಏಕೆ ಇಡುತ್ತಾರೆನ್ನುವ ಕಾರಣಗಳನ್ನು ತಿಳಿಸಿದ್ದಾರೆ. 'ವ್ಯಕ್ತಿನಾಮಗಳು: ಸಾಂಸ್ಕೃತಿಕ ದೃಷ್ಟಿಕೋನ' ಎನ್ನುವ ಅಧ್ಯಾಯದಲ್ಲಿ ದೇವ-ದೇವತೆಗಳ ಪ್ರಭಾವ ಎಷ್ಟರ ಮಟ್ಟಿಗೆ ಇದೆ ಎಂಬುದನ್ನು ಹೆಸರುಗಳ ಪಟ್ಟಿಯನ್ನು ಕೊಡುವುದರ ಮೂಲಕ ತಿಳಿಸಿದ್ದಾರೆ. ಮುಂದೆ ವ್ಯಕ್ತಿನಾಮಗಳು ಆಧುನಿಕತೆಗೆ ಸಿಲುಕಿ ಹೇಗೆ

ಬದಲಾವಣೆಯಾಗಿವೆ ಎಂಬುದನ್ನು ಪ್ರಯೋಗದ ಮೂಲಕ ತಿಳಿಸಿದ್ದಾರೆ. ಸಮಾರೋಪದಲ್ಲಿ ಅಧ್ಯಯನದ ಮುಖ್ಯ ಫಲಿತಗಳನ್ನು ನೀಡಿದ್ದಾರೆ.

ದೇವೇಂದ್ರಪ್ಪ ಜಾಜಿ ಅವರ 'ಆಂಧ್ರ-ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು' (೨೦೦೪) ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಸ್ಥಳನಾಮಗಳ ಸ್ವರೂಪ, ವರ್ಗೀಕರಣ ಮತ್ತು ಭೌಗೋಳಿಕ ಸ್ವರೂಪ, ಸಾಂಸ್ಕೃತಿಕ ಸ್ವರೂಪ, ಭಾಷಿಕ ಸ್ವರೂಪ, ಗ್ರಾಮನಾಮಗಳ ವಾಸ್ತುರೂಪ ಹಾಗೂ ಹನ್ನೊಂದು ಜನ ವಿದ್ವಾಂಸರು ಸ್ಥಳನಾಮಗಳ ಅಧ್ಯಯನದಲ್ಲಿ ಮಾಡಿಕೊಂಡಿರುವ ವರ್ಗೀಕರಣವನ್ನು ಪಟ್ಟಿಮಾಡಿ ತಿಳಿಸಿದ್ದಾರೆ. ಇದರಲ್ಲಿ ಬಹುಪಾಲು ಧಾರ್ಮಿಕ ವಿಷಯಕ್ಕೆ ಮತ್ತು ದೈವಗಳಿಗೆ ಸಂಬಂಧಿಸಿದಂತಹ ವರ್ಗೀಕರಣವಿದೆ. ಲೇಖಕರು ಪ್ರಾಕೃತಿಕ ಸ್ಥಳನಾಮಗಳು, ಸಾಂಸ್ಕೃತಿಕ ಸ್ಥಳನಾಮಗಳು ಮತ್ತು ಸಂಕೀರ್ಣ ಸ್ಥಳನಾಮಗಳೆಂದು ಪ್ರಧಾನವಾಗಿ ಮೂರು ವಿಭಾಗಗಳನ್ನು ಮಾಡಿಕೊಂಡು, ಸಾಂಸ್ಕೃತಿಕ ಸ್ಥಳನಾಮಗಳಲ್ಲಿ ದೈವವಾಚಿ ಸ್ಥಳನಾಮಗಳನ್ನು ಗುರುತಿಸಿದ್ದಾರೆ. ಮೌಖಿಕ ಪರಂಪರೆ ಮತ್ತು ಸ್ಥಳನಾಮಗಳು ಎನ್ನುವ ಅಧ್ಯಾಯದಲ್ಲಿ ಐತಿಹ್ಯ, ಪುರಾಣ, ಗಾದೆಗಳು, ಒಗಟುಗಳು, ಒಡಪುಗಳು, ಜಾನಪದ ಕತೆ ಹೇಗೆ ಕೆಲಸ ಮಾಡಿವೆ ಎಂಬುದನ್ನು ಸಮಗ್ರ ಅಧ್ಯಯನದ ಮೂಲಕ ತಿಳಿಸಿದ್ದಾರೆ. ಸ್ಥಳನಾಮಗಳು ಸಾಮಾಜಿಕ ಅಧ್ಯಯನ ಎನ್ನುವ ಅಧ್ಯಾಯದಲ್ಲಿ ಆಂಧ್ರ-ಕರ್ನಾಟಕ ಗಡಿಪ್ರದೇಶದ ಸಾಮಾಜಿಕ ಸಂಬಂಧ, ಸ್ಥಳನಾಮಗಳು ಸಾಮಾಜಿಕ ಆಯಾಮಗಳನ್ನು ಗುರುತಿಸಿದ್ದಾರೆ. ಸಮಾರೋಪದಲ್ಲಿ ಅಧ್ಯಯನದ ಮುಖ್ಯ ಫಲಿತಗಳನ್ನು ನೀಡಿದ್ದಾರೆ.

ವೀರೇಶಿ ಎಂ. 'ಬಳ್ಳಾರಿ ತಾಲೂಕಿನ ಸ್ಥಳನಾಮಗಳು: ಸಮಾಜೋ ಸಾಂಸ್ಕೃತಿಕ ಅಧ್ಯಯನ' (೨೦೧೧) ಪಿಎಚ್.ಡಿ. ಮಹಾಪ್ರಬಂಧದಲ್ಲಿ ಬಳ್ಳಾರಿ ಜಿಲ್ಲೆಯ ಘಟಕಗಳ ಸಂಕ್ಷಿಪ್ತ ಶಬ್ದಕೋಶ ಎಂಬ ಶೀರ್ಷಿಕೆಯಡಿಯಲ್ಲಿ, ವ್ಯಕ್ತಿವಾಚಕ, ಸಸ್ಯವಾಚಕ, ಶಿಲಾವಾಚಕ, ಪ್ರಾಣಿವಾಚಕ, ದೈವವಾಚಿ ಸ್ಥಳನಾಮಗಳನ್ನು ಹೆಸರಿಸಿದ್ದಾರೆ. ಅಧ್ಯಾಯ ಐದರಲ್ಲಿ 'ಭಾಷಿಕ ನೆಲೆ' ಹಿನ್ನೆಲೆಯಲ್ಲಿ ದೈವವಾಚಿ ಹೆಸರಿನ ಕ್ಯಾಂಪ್‌ಗಳನ್ನು ಕೊಟ್ಟಿದ್ದಾರೆ. ಸಾಮಾಜಿಕ ನೆಲೆಯ ಹಿನ್ನೆಲೆಯಲ್ಲಿ ಸಮಾಜದಲ್ಲಿನ ವಿಭಿನ್ನ ರೀತಿಯ ಸಂಸ್ಕೃತಿಯ ಚಹರೆಗಳನ್ನು ಸ್ಥಳನಾಮಗಳು ಹೇಗೆ ಗುರುತಿಸಿ, ಮಾರ್ಗವನ್ನು ನಿರ್ಮಿಸುತ್ತಾ ಪ್ರತಿನಿಧಿಗಳಾಗಿ, ಮೂಲಾಧಾರಗಳಾಗಿ ನಿಲ್ಲುತ್ತವೆಂಬುದನ್ನು ವಿವಿಧ ಸಾಮಾಜಿಕ ಆಯಾಮ ಮತ್ತು ನೆಲೆಗಳಿಂದ ಸ್ಥೂಲವಾಗಿ ಚರ್ಚಿಸಲಾಗಿದೆ. ಮನುಷ್ಯರು ಮೊದಲು ನಿಸರ್ಗದತ್ತವಾದಂತಹ ಕಲ್ಲು, ಗುಡ್ಡ, ದಿನ್ನೆ, ಪೊಟರೆ, ಮುಂತಾದವುಗಳೊಂದಿಗೆ ಸ್ಥಳನಾಮಗಳು ಮೊದಲು ಉಗಮಗೊಂಡವು. ಇದು ಸ್ಥಳನಾಮದ 'ಪ್ರಥಮ ಘಟ್ಟ'ವೆಂದು ಕಲ್ಬುರ್ಗಿಯ ಅಭಿಪ್ರಾಯವಾಗಿದೆ ಎಂಬುದನ್ನು ಸಂಶೋಧಕರು ತಿಳಿಸಿದ್ದಾರೆ. ಜೊತೆಗೆ ಅನೇಕ ಜಾತಿಗಳಿಗೆ ಸಂಬಂಧಪಟ್ಟ ಸ್ಥಳನಾಮಗಳು ಯಾವ ರೀತಿಯಾಗಿವೆ. ಅವು ಹೇಗೆ ಸಮಾಜದಲ್ಲಿ ಬಳಕೆಗೊಳ್ಳುತ್ತಲಿವೆಂಬುದನ್ನು ತಿಳಿಸಿದ್ದಾರೆ.

ಶ್ರೀನಿವಾಸ ಬೇಂದ್ರೆ ಅವರ 'ಬೀದರ ಕನ್ನಡ ಸಾಮಾಜಿಕ ಹಾಗೂ ಪ್ರಾದೇಶಿಕ ಪ್ರಭೇದಗಳು' (೨೦೦೨) ಎಂಬ ಪಿಎಚ್.ಡಿ. (ಅ.ಪ್ರ.) ಪ್ರಬಂಧದಲ್ಲಿ ಬೀದರ್ ಜಿಲ್ಲೆಯ ಸ್ಥಳನಾಮಗಳ ಸ್ವರೂಪವನ್ನು

ಗಮನಿಸಿ, ಪ್ರಕೃತಿವಾಚಿ, ನಿರ್ಮಾಣವಾಚಿ, ನಿಸರ್ಗವಾಚಿ, ಜನಾಂಗವಾಚಿ, ವ್ಯಕ್ತಿವಾಚಿ, ನಿರ್ಮಾಣವಾಚಿ, ಆದರ್ಶವಾಚಿ ಎಂಬ ಎಂಟು ವಿಭಾಗಗಳನ್ನು ಮಾಡಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. ಬೀದರ್ ಜಿಲ್ಲೆಯಲ್ಲಿಯ ಅಡ್ಡ ಹೆಸರುಗಳ ಸ್ವರೂಪ ಎಂಬಲ್ಲಿ ಅಡ್ಡ ಹೆಸರುಗಳು ಸೃಷ್ಟಿ ಹೇಗೆ ಆದವು ಎಂಬುದನ್ನು ಹೇಳುತ್ತಾ, ಬೀದರ್ ಜಿಲ್ಲೆಯ ಅಡ್ಡ ಹೆಸರುಗಳನ್ನು ಬ್ರಾಹ್ಮಣರ ಅಡ್ಡ ಹೆಸರುಗಳು, ಲಿಂಗಾಯ್ತರ ಅಡ್ಡ ಹೆಸರುಗಳು, ಮರಾಠರ ಅಡ್ಡ ಹೆಸರುಗಳು, ಹೊಲೆಮಾದಿಗರ ಅಡ್ಡ ಹೆಸರುಗಳು, ಮುಸಲ್ಮಾನರ ಅಡ್ಡಹೆಸರುಗಳೆಂಬ ಐದು ವಿಭಾಗಗಳಲ್ಲಿ ವರ್ಗೀಕರಿಸಿ ಸಾಮಾಜಿಕವಾಗಿ ಅವು ಹೇಗೆ ಉಚ್ಚಾರಗೊಳ್ಳುತ್ತವೆ ಎಂಬುದನ್ನು ಅಂತರಾಷ್ಟ್ರೀಯ ಧ್ವನಿಲಿಪಿಯಿಂದ ಉದಾಹರಿಸಿದ್ದಾರೆ. ಹಾಗೂ ಬೀದರ ಕನ್ನಡದಲ್ಲಿ ವ್ಯಕ್ತಿನಾಮಗಳು ವ್ಯಂಜನಾಂತ್ಯಗಳಾಗುವ ಉದಾಹರಣೆಗಳನ್ನು ಕೊಟ್ಟಿದ್ದಾರೆ.

ರಮೇಶ ಕೆ ಅವರ 'ಉಜ್ಜಿನಿ ಗ್ರಾಮಾಧ್ಯಯನ' (೨೦೦೧) ಎಂಬ ಎಂ.ಫಿಲ್. (ಅ.ಪ್ರ) ಸಂಪ್ರಬಂಧದಲ್ಲಿ ಉಜ್ಜಿನಿ ಗ್ರಾಮದ ಪದನಿಷ್ಪತ್ತಿ, ಉಜ್ಜಿನಿ ಪಂಚಪೀಠ ಪರಂಪರೆ, ಶಾಸನಸಾಹಿತ್ಯ ಕಥೆ, ಲಾವಣಿ, ಗಾದೆ, ಒಗಟುಗಳಿಂದ ಉಜ್ಜಿನಿ ಗ್ರಾಮವನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಚರಿತ್ರೆ, ಪುರಾಣ, ಐತಿಹ್ಯ, ಕಲೆ ವಾಸ್ತುಶಿಲ್ಪದ ಮೂಲಕ ಉಜ್ಜಿನಿ ಗ್ರಾಮದ ಮೂಲಾಧಾರಗಳನ್ನು ಶೋಧಿಸಿದ್ದಾರೆ. ಹಾಗೂ ಈ ಗ್ರಾಮದ ಜನಪದರ ಬದುಕನ್ನು ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಸಂಗತಿಗಳ ಮೂಲಕ ವಿಶ್ಲೇಷಿಸಿದ್ದಾರೆ. ಜೊತೆಗೆ ಗ್ರಾಮದ ಆಚರಣೆಗಳನ್ನು ಹೇಗೆ ಮಾಡುತ್ತಾರೆ ಎಂಬುದನ್ನು ಈ ಸಂಪ್ರಬಂಧದಲ್ಲಿ ಹೇಳಲಾಗಿದೆ. ಕೊನೆಯಲ್ಲಿ 'ಉಜ್ಜಿನಿ ಗ್ರಾಮದ ಮೇಲೆ ಆಧುನಿಕ ಪ್ರಭಾವ' ಎಂಬುದರಲ್ಲಿ, ಸಾಮಾಜಿಕ, ಶೈಕ್ಷಣಿಕ, ರಾಷ್ಟ್ರೀಯ, ಆರ್ಥಿಕ, ಸಾಂಸ್ಕೃತಿಕ, ಭೌತಿಕ, ಭಾಷಿಕ ಬದಲಾವಣೆಗಳಿಂದ ಹೇಗೆ ಉಜ್ಜಿನಿ ಗ್ರಾಮ ಪ್ರಭಾವಕ್ಕೊಳಗಾಗಿದೆ ಎಂಬುದನ್ನು ಹೇಳಲಾಗಿದೆ. ಒಟ್ಟಾರೆಯಾಗಿ ಒಂದು ಗ್ರಾಮಾಧ್ಯಯನವನ್ನು ಮಾಡಲು ಈ ಸಂಪ್ರಬಂಧವು ಸ್ಥೂಲನೋಟವನ್ನು ಒದಗಿಸುತ್ತದೆ.

ವಾಸುದೇವ ಬಡಿಗೇರ ಅವರ 'ಬಸವನ ಬಾಗೇವಾಡಿ' (೨೦೧೦) ಎಂಬ ಕೃತಿಯಲ್ಲಿ ೧೩ ಲೇಖನಗಳಿವೆ. 'ಸ್ಥಳನಾಮ' ಎಂಬ ಲೇಖನದಲ್ಲಿ ಮಹಾದೇವಯ್ಯ ಪಿ. ಅವರು ಬಾಗೆ ಅಥವಾ ಬಾಗ ಪದದ ಅರ್ಥದ ಬಗೆಗೆ ಈ ಕೆಳಗಿನಂತೆ ವಿವೇಚಿಸಿದ್ದಾರೆ. ಬಾಗೆ ಎಂದರೆ ಒಂದು ಬಗೆಯ ಮರ ಎಂಬರ್ಥದಲ್ಲಿ ಬಳಕೆಯಲ್ಲಿದೆ. ಬಾಗೆಯ ಎಂದರೆ ಒಬ್ಬ ವ್ಯಕ್ತಿಯ ಹೆಸರು. ಬಾಗೆಯ ಪದವನ್ನು ಬಾಗೆ+ಅಯ>ಅಯ್ಯ ಎಂದು ವಿಭಜಿಸಲು ಸಾಧ್ಯ. ಬಾಗೆಯಾರ್ ಎಂಬ ಮತ್ತೊಂದು ರೂಪ ಬಳಕೆಯಲ್ಲಿದೆ. ಇದು ಬಾಗೆ+ಊರು ಬಾಗೆಯೂರ್ ಎಂದು ವಿಭಜಿಸಲಾಗಿದೆ. ಒಟ್ಟಾರೆ ಬಾಗೆಯ ಎಂಬ ಪ್ರಸಿದ್ಧ ವ್ಯಕ್ತಿಯೊಬ್ಬ ಇದ್ದು ಆತ ನೆಲೆಸಿರುವ ಸ್ಥಳಕ್ಕೆ ವಾಡೆ ಎಂದಿದ್ದು 'ಎ' ಕಾರಾಂತ ಪದ ಕನ್ನಡದಲ್ಲಿ 'ಇ' ಕಾರಾಂತವಾಗಿ ಬಾಗೇವಾಡಿ ಆಗಿರಬಹುದೆಂದು ಊಹಿಸಿದ್ದಾರೆ. ಮುಂದುವರಿದು, ಜನಪದ ಹಾಡುಗಳಲ್ಲಿ ಬಸವನ ಬಾಗೇವಾಡಿ ಸ್ಥಳನಾಮ ಬಳಕೆಯಲ್ಲಿರುವುದನ್ನು ಈ ಕೆಳಗಿನ ಪದ್ಯಗಳಿಂದ ಸಂಗ್ರಹಿಸಿದ್ದಾರೆ. ಬಾಗೇವಾಡಿ ಎಂಬುದು ಬಾಲೆಯರ ಪಟ್ಟಣ ಮ್ಯಾಲೆ ಚನ್ನಮ್ಮನ ಅರಮನೆಯ ಚಂದಶಕ್ತಿಯ ಮಾತಾಳ ಮ್ಯಾಲೆ ನೀ ಚನ್ನಮ್ಮನ ಅರಮನೆಯ ಬಾಗಿಲಾದಾಗ

ಬಾಗಿನಿಂತಾನ ಬಸವಣ್ಣ....'ಬಾಗೇವಾಡಿ' ಎಂಬುದು ವ್ಯಕ್ತಿವಾಚಿಯಾಗೂ ಬಳಕೆಯಲ್ಲಿದೆ ಎಂಬುದು ಕೆಲವು ಜನಪದರ ನಂಬಿಕೆಯಾಗಿದೆ. 'ಬಾಗಯ್ಯ' ಎಂಬ ದೇವತೆಯು ಈ ಊರಿನ ಹೊರಭಾಗದಲ್ಲಿದ್ದು; ಆ ದೇವತೆಯ ಪ್ರಭಾವದಿಂದ ಈ ಊರಿಗೆ ಬಾಗೇವಾಡಿ ಎಂಬ ಹೆಸರು ಬಂದಿರಬಹುದೆಂದು ಅಭಿಪ್ರಾಯಪಡುತ್ತಾರೆಂದು ಹೇಳಿದ್ದಾರೆ. ಮುಂದೆ ಲೇಖಕರು ಸಾಮಾಜಿಕ ಸೂಚಕ ವ್ಯಕ್ತಿನಾಮಾಧಾರಿತ ಸ್ಥಳನಾಮಗಳು ವಿವರಣೆಯನ್ನು ನೀಡಿದ್ದಾರೆ.

ಮಂಜುನಾಥ ಜೋಗಿನಕಟ್ಟೆ ಅವರ 'ಮಸ್ಕಿ ಕನ್ನಡ: ಒಂದು ಭಾಷಿಕ ಅಧ್ಯಯನ' (೨೦೧೧–೧೨) ಎಂಬ ಪಿಎಚ್.ಡಿ. (ಅ.ಪ್ರ.) ಪ್ರಬಂಧದಲ್ಲಿ ಮಸ್ಕಿ ಕನ್ನಡದ ಚಾರಿತ್ರಿಕ ನೆಲೆ, ಧ್ವನಿ ರಚನೆ, ಪದರಚನೆ, ಸಂಬಂಧವಾಚಕಗಳು ಹಾಗೂ ಸಂಬೋಧನಾ ರೂಪಗಳು, ಸ್ಥಳನಾಮಗಳು ಮತ್ತು ವ್ಯಕ್ತಿನಾಮಗಳು, ಮಸ್ಕಿ ಕನ್ನಡದ ವಿಶಿಷ್ಟ ಪದಗಳು ಮತ್ತು ಪದಗಳ ಪ್ರಯೋಗಾರ್ಥ, ಮಸ್ಕಿ ಕನ್ನಡದ ಪದಕೋಶ ಕೊಟ್ಟಿದ್ದಾರೆ. ಮುಖ್ಯವಾಗಿ ಆರನೆಯ ಅಧ್ಯಾಯದಲ್ಲಿ 'ಮಸ್ಕಿ ಕನ್ನಡದ ಸ್ಥಳನಾಮಗಳು ಮತ್ತು ವ್ಯಕ್ತಿನಾಮಗಳು' ಎಂಬಲ್ಲಿ ಸ್ಥಳನಾಮಗಳ ಅಧ್ಯಯನವನ್ನು ಬಹುಶಿಸ್ತೀಯ ನೆಲೆಯಲ್ಲಿ ವಿಶ್ಲೇಷಿಸುತ್ತಾ ಹೋದಂತೆಲ್ಲಾ ಅವುಗಳ ಸಾಂಸ್ಕೃತಿಕ, ಜಾನಪದೀಯ ಹಾಗೂ ಭಾಷಿಕ ಮಹತ್ವಗಳು ತೆರೆದುಕೊಳ್ಳುತ್ತಾ ಹೋಗುತ್ತವೆ ಎಂದು ಹೇಳಿ ಕನ್ನಡ ನಾಡಿನ ಸ್ಥಳನಾಮಗಳ ಪ್ರಾಚೀನತೆಯನ್ನು ಗುರುತಿಸಿದ್ದಾರೆ. ಸ್ಥಳನಾಮಗಳನ್ನು ಪ್ರಾಕೃತಿಕ ಸ್ಥಳನಾಮಗಳು, ಸಾಂಸ್ಕೃತಿಕ ಸ್ಥಳನಾಮಗಳು ಮತ್ತು ಸಂಕೀರ್ಣ ಸ್ಥಳನಾಮಗಳೆಂದು ಮೂರು ವಿಭಾಗಗಳಲ್ಲಿ ವಿಂಗಡಿಸಿ ವಿಶ್ಲೇಷಣೆಯನ್ನು ಮಾಡಿದ್ದಾರೆ. ವ್ಯಕ್ತಿನಾಮಗಳಲ್ಲಿ ನಿರ್ದಿಷ್ಟ, ವಾರ್ಗಿಕಗಳನ್ನು ನೋಡಿ, ವ್ಯಕ್ತಿನಾಮಗಳನ್ನು ಜಲವಾಚಿ, ವೃತ್ತಿವಾಚಿ, ಜಾತಿವಾಚಿ, ವ್ಯಕ್ತಿವಾಚಿ, ವಸ್ತುವಾಚಿ, ಬಂಧುವಾಚಿ, ವರ್ಣವಾಚಿ, ಶಿಲಾವಾಚಿ, ಪರಿಮಾಣಸೂಚಿ, ಶರೀರವಾಚಿ ಎಂದು ಮಾಡಿ ವಿಶ್ಲೇಷಿಸಿದ್ದಾರೆ. ಒಟ್ಟಾರೆಯಾಗಿ ಮಸ್ಕಿ ಕನ್ನಡದ ರಚನೆಯನ್ನು ತಿಳಿದುಕೊಳ್ಳಲಿಕ್ಕೆ ಮತ್ತು ನಾಮಾಧ್ಯಯನಕಾರರಿಗೆ ಇದೊಂದು ಉತ್ತಮ ಸಹಾಯಕವಾಗಬಲ್ಲದು ಎಂದು ಹೇಳಬಹುದು.



# ಅಧ್ಯಾಯ : ಮೂರು

# ವ್ಯಕ್ತಿ ಮತ್ತು ಸ್ಥಳನಾಮಗಳ ಸ್ವರೂಪ ಮತ್ತು ವರ್ಗೀಕರಣ

# ಅಧ್ಯಾಯ: ಮೂರು

## ವ್ಯಕ್ತಿ ಮತ್ತು ಸ್ಥಳನಾಮಗಳ ಸ್ವರೂಪ ಮತ್ತು ವರ್ಗೀಕರಣ

ಹೆಸರುಗಳು ಒಂದು ಜನಾಂಗ ಮತ್ತು ಸಂಸ್ಕೃತಿಯ ಬೇರುಗಳು, ಅವುಗಳ ಕ್ರಮಬದ್ಧವಾದ ಅಧ್ಯಯನವನ್ನು ನಾಮವಿಜ್ಞಾನ ಎಂದು ಕರೆಯುತ್ತಾರೆ. ಅನುಭವ, ಆಲೋಚನೆ, ವಿಷಯ, ವಸ್ತು, ಸಂಗತಿ ಮೊದಲಾದವುಗಳಿಗೆ ಸೂಕ್ತವಾದ ಹೆಸರು ಗುರುತಿಸಿದಾಗಲೇ ಜ್ಞಾನವಿಕಾಸ ಪ್ರಾರಂಭ ವಾಯಿತು ಎಂದೇಳುವ ಚೀನಿ ಗಾದೆಯಲ್ಲಿ ವಿಶೇಷ ಅರ್ಥವಿದೆ. ನಾಮಗಳ ಸೃಷ್ಟಿ ಹೇಗೆ ಆಗಿರಲಿ ಅವು ಬಳಕೆಗೊಳ್ಳುವ ತನಕ ನರ ವಾನರತ್ವದಿಂದ ಬಿಡಿಸಿಕೊಳ್ಳಲಾಗಲಿಲ್ಲ. ನಾಗರೀಕತೆಯ ಭ್ರೂಣಾವಸ್ಥೆಯಿಂದ ಮುಕ್ತಿ ಪಡೆದಿರಲಿಲ್ಲ. ಹೀಗಾಗಿ ಮನುಷ್ಯ ಅಜ್ಞಾನದ ಅಂದಕಾರದಲ್ಲಿ ತೊಳಲಾಡುತ್ತಿದ್ದನೆಂಬ ವಿಷಯವಂತು ಖಚಿತ. ಹೆಸರುಗಳೇ ಇಲ್ಲದಿದ್ದಾಗ ಸ್ಮರಣ ಸಾಮರ್ಥ್ಯವೂ ಶೂನ್ಯವಾಗುತ್ತದೆ. ಒಬ್ಬ ವ್ಯಕ್ತಿ ಮತ್ತು ವಸ್ತುವಿಗೂ ಸಲ್ಲುವ ಹೆಸರನ್ನು ಅಂಕಿತನಾಮವೆಂದು ಕರೆಯುವುದುಂಟಷ್ಟೇ. ಇಂಥ ನಾಮಗಳನ್ನು ಸಂಜ್ಞಾ ವಾಚಕಗಳೆಂದೂ ಹೆಸರಿಸುವುದುಂಟು. ಅಂಕಿತೇತರ ನಾಮಗಳಷ್ಟೇ ವ್ಯಾಪ್ತಿ ಹಾಗೂ ಸಂಖ್ಯೆ ದೃಷ್ಟಿಯಿಂದ ಮಿಗಿಲಾಗಿವೆ. ವೈಜ್ಞಾನಿಕ ಹಾಗೂ ತಾಂತ್ರಿಕ ಸಂಶೋಧನೆ ಭರಾಟೆಯಿಂದ ಸಾಗುತ್ತಿರುವ ಸಮಯದಲ್ಲಿ ವರ್ಷಪ್ರತೀ ನೂರಾರು ಸಾವಿರಾರು ಹೆಸರುಗಳು ಸೃಷ್ಟಿಗೊಳ್ಳುತ್ತವೆ. ಹೆಸರುಗಳನ್ನು ಎರಡು ವಿಧವಾಗಿ ನೋಡಬಹುದು. ವ್ಯಕ್ತಿಗಳ ಹೆಸರುಗಳೇ ವ್ಯಕ್ತಿನಾಮಗಳು ಅವುಗಳ ಅಧ್ಯಯನವೇ ವ್ಯಕ್ತಿನಾಮವಿಜ್ಞಾನ. ಸ್ಥಳಗಳ ಹೆಸರುಗಳೇ ಸ್ಥಳನಾಮಗಳು ಅವುಗಳ ಅಧ್ಯಯನವೇ ಸ್ಥಳನಾಮವಿಜ್ಞಾನ. ಇತ್ತೀಚಿಗೆ ನಾಮಗಳ ಅಧ್ಯಯನ ಪ್ರತ್ಯೇಕ ಜ್ಞಾನಶಾಖೆಯಾಗಿ ಅಧ್ಯಯನಯೋಗ್ಯ ವಿಷಯವಾಗಿದೆ.

ನಾಮ ವೈವಿಧ್ಯಪೂರ್ಣವಾದ ವಿಸ್ತಾರವಾದ ಪ್ರಪಂಚ. ಅದು ಹಲವು ಮನಸ್ಸು, ಹಲವು ಪ್ರಭಾವಗಳ ಸೃಷ್ಟಿಯಾಗಿದೆ. ಹಳೆಯ ನಾಮ ನಾಮಾವಶೇಷವಾಗುವುದೂ, ಹೊಸ ನಾಮ ಹುಟ್ಟುವುದೂ, ಕೆಲವೊಮ್ಮೆ ಹಳೆಯನಾಮ ಹೊಸ ರೂಪದಲ್ಲಿ ಮುಂದುವರೆಯುವುದೂ, ಸ್ವದೇಶಿ ನಾಮಗಳ ಜೊತೆಗೆ ವಿದೇಶಿ ನಾಮಗಳು ಸೇರಿಕೊಳ್ಳುವುದೂ, ಇವು ಒಂದರ ಪ್ರಭಾವಕ್ಕೆ ಇನ್ನೊಂದು ಗುರಿಯಾಗುವುದೂ, ಇತಿಹಾಸದುದ್ದಕ್ಕೂ ನಡದೇ ಇದೆ. ಜಗತ್ತಿನ ಎಲ್ಲ ಭಾಷೆಗಳಲ್ಲಿ ವ್ಯಕ್ತಿಯನ್ನು ಗುರುತಿಸಲು ವ್ಯಕ್ತಿನಾಮಗಳಿವೆ. ವ್ಯಕ್ತಿನಾಮಗಳೇ ಅತ್ಯಂತ ಪ್ರಾಚೀನವಾದವು. ಪ್ರತಿ ವ್ಯಕ್ತಿಗೂ

ನಾಮಗಳಿರುವುದರಿಂದ ವ್ಯಾಪಕವಾದ ಪ್ರಸರಣವಿದೆ. ಕುಟುಂಬನಾಮಗಳು ಒಂದು ಗ್ರಾಮದ ಒಳಗಿನ ವ್ಯವಹಾರದಿಂದ ಉಂಟಾಗುತ್ತವೆ. ಗ್ರಾಮನಾಮಗಳು ಒಂದು ರಾಷ್ಟ್ರದ ಒಳಭಾಗದ ಗುರುತಿಸುವ ಸಾಧನಗಳು ಆಗಿವೆ. ಇವೆರಡು ಸಾಮಾಜಿಕ ವ್ಯವಹಾರದ ಫಲಗಳು ಆದರೆ ವ್ಯಕ್ತಿನಾಮಗಳು ಕುಟುಂಬದ ಒಳಭಾಗದ ಗುರುತಿಸುವಿಕೆ ಆಗಿವೆ. ಇವು ವಯಕ್ತಿಕ ಎನಿಸಿವೆ. ಕುಟುಂಬ ಇವುಗಳನ್ನು ಸಮಾಜಕ್ಕೆ ಕೊಡುವ ಕೆಲಸ ಮಾಡುತ್ತದೆ.

**೩.೧. ವ್ಯಕ್ತಿನಾಮಗಳ ಸ್ವರೂಪ**

ನಾಮವಿಜ್ಞಾನ ಎಂದರೇನು? ಎಂಬುದನ್ನು ಒಂದೇ ವಾಕ್ಯದಲ್ಲಿ ವ್ಯಾಖ್ಯಾನಿಸುವುದು ತುಂಬಾ ಕಷ್ಟ. ಸರಳವಾಗಿ ಹೇಳುವುದಾದರೆ "ವ್ಯಕ್ತಿನಾಮಗಳ ವೈಜ್ಞಾನಿಕ ಅಧ್ಯಯನವೇ ವ್ಯಕ್ತಿನಾಮ ವಿಜ್ಞಾನ" ಎಂದು ಹೇಳಬಹುದು. ದಿ ನ್ಯೂ ಎನ್‌ಸೈಕ್ಲೊಪಿಡಿಯಾ ಬ್ರಿಟಾನಿಕಾ ಗ್ರಂಥದಲ್ಲಿ ವ್ಯಕ್ತಿನಾಮ ಎಂದರೆ "A name is a word or group of words used to refer to an Individual entity (real or imaginary); the name singles out this entity by directly pointing to it not by specefying it as member of a class (The new encyclopaedia, 1992- 24733) ಎಂದಿರುವುದು ವ್ಯಕ್ತಿನಾಮದ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

ಹೆಸರುಗಳು ಮಾನವನ ಪ್ರತಿನಿತ್ಯದ ವ್ಯವಹಾರಗಳಲ್ಲಿ ಮನೆಯೊಳಗೆ, ಮನೆ ಹೊರಗೆ ಎಲ್ಲ ಕಡೆಗಳಲ್ಲಿಯೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ನಮ್ಮ ಜನರ ನಾಮಗಳು ಅವರು ವಾಸಿಸುವ ಭೌಗೋಳಿಕ ಪರಿಸ್ಥಿತಿ ಮತ್ತು ಆಯಾ ಭಾಷಿಕ ಸಮುದಾಯಗಳ ನಂಬಿಕೆ, ಆಚರಣೆ ಮತ್ತು ಸಂಪ್ರದಾಯ ಮುಂತಾದ ಅಂಶಗಳಿಂದ ನಿರ್ಧರಿತವಾಗಿರುತ್ತವೆ. ಹಾಗೆಯೇ ವ್ಯಕ್ತಿಯು ನಿರ್ವಹಿಸುವ ವೃತ್ತಿ, ಆಯಾ ಸಮುದಾಯದ ಗ್ರಾಮದ ಚಾರಿತ್ರಿಕತೆ, ದೇವಾಲಯ, ನದಿ, ಬೆಟ್ಟ, ಅರಣ್ಯ, ಪ್ರವಾಹ, ಪ್ರಾಣಿ, ಪಕ್ಷಿ, ಋತುಮಾನ, ಪುರಾಣ, ದಂತಕಥೆ ಇತ್ಯಾದಿ ಅಂಶಗಳ ಪ್ರಭಾವದಿಂದ ಹುಟ್ಟಿಕೊಂಡಿರುತ್ತವೆ. ಸಮಾಜದಲ್ಲಿ ವ್ಯಕ್ತಿಗೆ ತಕ್ಕಂತೆ ಹೆಸರು ಇಡಬೇಕೆ? ಅಥವಾ ಬೇಡವೇ? ಎಂಬುದು ಪ್ರಮುಖ ಸಂಗತಿಯಾಗಿದೆ. ಏಕೆಂದರೆ ಒಂದೇ ಹೆಸರುಳ್ಳ ಅನೇಕ ಜನರು ಒಂದೇ ಪ್ರದೇಶದಲ್ಲಿ ವಾಸಿಸುತ್ತಾರೆ. ವ್ಯಕ್ತಿನಾಮಗಳು ಆಯಾ ಪ್ರಾದೇಶಿಕತೆಗೆ ಸೀಮಿತವಾಗಿರುತ್ತವೆ. ಮತ್ತು ವ್ಯಾಪಕತೆಯನ್ನು ಹೊಂದಿರುತ್ತದೆ. ಅದು ಆಯಾ ಪ್ರದೇಶದಲ್ಲಿ ಪ್ರಸಿದ್ಧ ದೇವಾಲಯಗಳ ಪ್ರಭಾವದಿಂದಲೂ ಮತ್ತು ಚಾರಿತ್ರಿಕ ವ್ಯಕ್ತಿನಾಮಗಳ ಪ್ರಭಾವದಿಂದಲೂ ಹುಟ್ಟಿಕೊಂಡಿರುತ್ತವೆ. ಉದಾ. ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳ ಸುತ್ತಮುತ್ತಲಿನ ಪ್ರದೇಶದಲ್ಲಿ ಮಹದೇವ, ಮಹದೇವಪ್ಪ, ಮಹದೇವಯ್ಯ, ಮಹದೇವಿ, ಮಹದೇವಮ್ಮ ಮುಂತಾದ ನಾಮಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಹಾಗೇ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಹಂಪೆಯ ವಿರೂಪಾಕ್ಷೇಶ್ವರ ದೇವರ ಪ್ರಭಾವ ಕರ್ನಾಟಕದಲ್ಲಿ ಅಲ್ಲದೆ ಪಕ್ಕದ ಆಂಧ್ರ ಪ್ರದೇಶದಲ್ಲಿಯೂ ಆ ದೇವರ ಹೆಸರುಗಳ ವ್ಯಕ್ತಿಗಳು ಕಾಣಸಿಗುತ್ತಾರೆ. ಅವು ವಿರೂಪಾಕ್ಷ, ವಿರೂಪಾಕ್ಷಿ, ವಿರುಪಣ್ಣ, ವೀರಮ್ಮ ಮುಂತಾಗಿ ಕಾಣಿಸಿಕೊಳ್ಳುತ್ತವೆ.

ಹೀಗಾಗಿ ವ್ಯಕ್ತಿನಾಮಗಳಲ್ಲದೆ ಒಂದು ಸಮಾಜವನ್ನು ಕಲ್ಪಿಸಿಕೊಳ್ಳುವುದು ಅಸಾಧ್ಯವಾದುದ್ದಾಗಿದೆ. ಅಥವಾ ಅವುಗಳಲ್ಲಿನ ಜೀವನ ಕಲ್ಪನಾತೀತವಾಗುತ್ತದೆ ಮಾತ್ರವಲ್ಲ, ಅದು ಸ್ಥಗಿತಗೊಳ್ಳುವ ಸಂಭವವೂ ಉಂಟು. ಸಾಮಾನ್ಯವಾಗಿ ವ್ಯಕ್ತಿನಾಮಗಳು ಹಿರಿಯರೋ ಹತ್ತಿರದವರೋ ಇಟ್ಟವುಗಳಾಗಿ ಸಮಾಜದಲ್ಲಿ ಗಣ್ಯತೆ ಪಡೆಯುತ್ತವೆ. ಹಿರಿಯರೋ ಇತರರೋ ಇಟ್ಟ ಹೆಸರುಗಳನ್ನು ತೊರೆದು ವ್ಯಕ್ತಿಗಳು ತಾವೇ ಇಟ್ಟುಕೊಂಡವುಗಳು ಸಹ ಸಮಾಜದಲ್ಲಿ ಮಾನ್ಯತೆಯನ್ನು ಪಡೆಯುತ್ತವೆ. ಪರದೇಶಿಗೌಡ ಪರಮೇಶಿ ಆಗಬಹುದು, ಚನ್ನಮ್ಮ ಸುಂದರಾಬಾಯಿ ಆಗಬಹುದು, ವ್ಯಕ್ತಿಗಳು ಮತಾಂತರಗೊಂಡಾಗ ಹಳೆಯ ಹೆಸರುಗಳು ಹೋಗಿ ಹೊಸ ಹೆಸರುಗಳು ಬರುತ್ತವೆ. ಜವರಯ್ಯ, ಜಬ್ಬಾರ್, ಮಾದಯ್ಯ-ಮ್ಯಾಥನ್ ಆಗಿ ಮಾರಮ್ಮ-ಮೇರಿಯಾಗಿ ಹೆಸರುಗಳು ಬದಲಾಗಬಹುದು. ಹಾಗೂ ವ್ಯಕ್ತಿನಾಮಗಳೆಲ್ಲ ಸಾರಾಸಗಟಾಗಿ ಆಯಾಯ ವ್ಯಕ್ತಿಗಳ ಸ್ವರೂಪ ಸ್ವಭಾವಗಳನ್ನು ಸಂಕೇತಿಸುತ್ತವೆಂದು ಹೇಳುವಂತಿಲ್ಲ. ಯಾವುದೋ ಸಂಪ್ರದಾಯಕ್ಕೆ ಕಟ್ಟುಬಿದ್ದು ಯಾವುದೋ ಕಲ್ಪನೆಗೆ ಮನಸೋತು ಹಿರಿಯರು ತಮ್ಮ ಮಕ್ಕಳಿಗೆ ಹೆಸರು ಕಟ್ಟುತ್ತಾರೆ. ದೇವರ ಸಾಧುಸಂತರ ಪುರಾಣ ಪುರುಷರ ಅಥವಾ ಐತಿಹಾಸಿಕ ವ್ಯಕ್ತಿಗಳ ಹೆಸರಿಡುವಲ್ಲಿ ತಮ್ಮ ಮಕ್ಕಳು ಅವರಂತಾಗಬೇಕೆಂದು ಹಾರೈಸುತ್ತಾರೆ. ತಮ್ಮ ಸಂಸಾರ ಹಾಲಿನಂತಿರಬೇಕೆಂದು ಹಾಲಪ್ಪ, ಹಾಲಮ್ಮ ಎಂದು ಹೆಸರಿಡುವುದುಂಟು. ಅದು ಹಾಲೇಶ್ವರನೆಂಬ ದೇವರ ಹೆಸರು ಇದ್ದಿರಬಹುದು. ಆ ಮಗುವಿನ ಭವಿಷ್ಯ ಏನಾಗುತ್ತದೋ ಬೇರೆ ಮಾತು. ಆದರೆ ಶೈಶವದಲ್ಲಿ ಕುಡಿಯಲು ಒಂದು ತೊಟ್ಟು ಸಹ ಹಾಲು ಸಿಗದಿರಬಹುದು. ಮತ್ತು ಚಲುವಯ್ಯ, ಸುಂದರಮ್ಮ, ಲಕ್ಷ್ಮೀಪತಿ ಇಂಥ ಹೆಸರಿಟ್ಟರೂ ಇದಕ್ಕೆ ವಿರುದ್ಧವಾಗಿಯೂ ಅವರು ಇರಬಹುದು. ಅಥವಾ ಇಲ್ಲದೆ ಇರಬಹುದು.

ಇಟ್ಟ ಹೆಸರುಗಳಲ್ಲಿ ಸಾಮಾಜಿಕ ಜನಾಂಗಿಕ ಹಾಗೂ ಕೌಟುಂಬಿಕ ಸಂಸ್ಕೃತಿಯ ರೇಕುಗಳನ್ನು ಗುರುತಿಸಬಹುದು. ಒಬ್ಬ ವ್ಯಕ್ತಿಗೆ ಒಂದು ಹೆಸರಿರಬೇಕಾಗಿಲ್ಲ. ತಂದೆ ತಾಯಿಯರೇ ಮಕ್ಕಳಿಗೆ ಮುದ್ದಿಗೊಂದು, ವ್ಯವಹಾರಕ್ಕೊಂದು ಹೆಸರಿಟ್ಟಿರುತ್ತಾರೆ. ಹೀಗಾಗಿ ತಾಯಿ ತಂದೆಯರು ಕರೆಯುವ ಮುದ್ದು ಹೆಸರುಗಳು ನಿಜನಾಮಗಳನ್ನು ಮರೆಸಿಬಿಡುವ ಸಂಭವವುಂಟು. ತಮ್ಮಯ್ಯ, ಅಣ್ಣಯ್ಯ, ತಾಯಿ, ಚಿಕ್ಕಿ, ಪಪ್ಪಿ ಇಂಥವು ಈ ವರ್ಗಕ್ಕೆ ಸೇರುತ್ತವೆ. ಗುಣಶೀಲ ಸಂದರ್ಭಗಳಿಗನುಗುಣವಾಗಿ ಅಥವಾ ಕುಚೋದ್ಯಕ್ಕಾಗಿ ನೆರೆಹೊರೆಯವರು ಕೊಟ್ಟ ಅಡ್ಡ ಹೆಸರುಗಳು ಖಾಯಮ್ಮಾಗಿ ನಿಂತಾಗ ಅವುಗಳ ಜತೆಯಲ್ಲಿ ಮೂಲನಾಮಗಳನ್ನು ಬಳಸುವುದುಂಟು. ಸಾಹಿತಿಗಳು ಸ್ವಯಂಪೂರ್ತಿಯಿಂದ ಸೃಷ್ಟಿಸಿಕೊಂಡ ಕಾವ್ಯನಾಮಗಳಂತು, ಪ್ರತಿನಾಮಗಳಾಗಿ ಪ್ರವರ್ತಿಸುತ್ತವೆ. ಇವು ಪೂರ್ಣ ನೂತನ ನಾಮಗಳಾಗಬಹುದು. ಇಲ್ಲವೇ ಪ್ರಥಮಾಕ್ಷರ ಘಟಿತ ಸಂಕ್ಷಿಪ್ತ ನಾಮವಾಗಬಹುದು. ಇಲ್ಲಿ ವ್ಯಕ್ತಿನಾಮಗಳಲ್ಲದೆ ಕುಲನಾಮ, ಜಾತಿನಾಮ, ಸಂಸ್ಥೆ, ಮಠ ಮಾನ್ಯಗಳ ಹೆಸರು, ನದಿ ನಾಲೆ ಕೆರೆಗಳ ಹೆಸರು, ಲಾಂಛನ ನಾಮಗಳ ಘಟನೆ ಸನ್ನಿವೇಶಗಳ ಹೆಸರು ಇವೆಲ್ಲ ಸಂಜ್ಞಾವಾಚಕಗಳ ಕಕ್ಷೆಯಲ್ಲೆ ಸೇರುತ್ತವೆ. ಇವುಗಳ ಅಧ್ಯಯನ ಸಂಶೋಧನೆಗಳು ಸಾಮಾನ್ಯವಾಗಿ ಅಭಿದಾನ ವಿಜ್ಞಾನ Onomatics ಎಂಬ ಹೆಸರಿನಿಂದ ಪ್ರಚುರಗೊಳ್ಳುತ್ತವೆ. ಈ ಅಭಿದಾನ ವಿಜ್ಞಾನದ ಒಂದು ಪ್ರಮುಖ ಶಾಖೆಯಾಗಿ ಸ್ಥಳನಾಮ ವಿಜ್ಞಾನ ವ್ಯವಹರಿಸುತ್ತದೆ.

### ೩.೨. ವ್ಯಕ್ತಿನಾಮ ವರ್ಗೀಕರಣದ ಮಾದರಿಗಳು

ಒಂದು ಕ್ಷಣ ಜಗತ್ತಿನಲ್ಲಿ ಯಾರಿಗೂ ಹೆಸರಿಲ್ಲವೆಂದರೆ, ಏನಾಗಬಹುದೆಂದು ಊಹಿಸಿಕೊಳ್ಳಲು ಸಾಧ್ಯವಿಲ್ಲ. ಕೆಲವು ಬುಡಕಟ್ಟುಗಳಲ್ಲಿ ಹೆಸರುಗಳ ವ್ಯಾಪ್ತಿ ತುಂಬಾ ಕಡಿಮೆ ಇರಬಹುದು. ಕೆಲವು ಬುಡಕಟ್ಟುಗಳಲ್ಲಿ ಈಗಲೂ ಕೇವಲ ಮೂರು ನಾಲ್ಕು ಹೆಸರುಗಳಿಗೆ ಸೀಮಿತಗೊಂಡಿದ್ದಾರೆ. ಇಡೀ ಒಂದು ಬುಡಕಟ್ಟಿನ ಜನರೆಲ್ಲ ಈ ಮೂರುನಾಲ್ಕು ಹೆಸರಿನ ವ್ಯಾಪ್ತಿಯೊಳಗೆ ತಮ್ಮ ಹೆಸರನ್ನು ಪಡೆದುಕೊಂಡಿರಬಹುದು. ಆದರೆ ಪ್ರತಿಯೊಬ್ಬರೂ ಒಂದು ಹೆಸರನ್ನು ಪಡೆದಿರುತ್ತಾರೆ. ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬರು ತಮ್ಮ ಗುರುತಿನ ಸಲುವಾಗಿ ಒಂದಲ್ಲ ಒಂದು ಹೆಸರು ಪಡದೇ ಇರುತ್ತಾರೆ. ಹೆಸರುಗಳಿಲ್ಲದ ನಾಗರಿಕ ಮನುಷ್ಯ ಸಮಾಜವೊಂದು, ಭೂಮಿಯ ಮೇಲಿರುವುದು ಇದುವರೆಗೆ ಕಂಡುಬಂದಿಲ್ಲ. ಹೀಗೆ ಒಂದಲ್ಲ ಒಂದು ಹೆಸರನ್ನು ಪಡೆದ ಮನುಷ್ಯರ ಹೆಸರು ಯಾವ ಮೂಲದಿಂದ ಅಥವಾ ಆಕಾರದಿಂದ ಬಂದಿದೆ ಎಂಬುದನ್ನು ಗಮನಿಸುತ್ತ ಹೋದರೆ ಅನೇಕ ಕುತೂಹಲಕಾರಿ ಸಂಗತಿಗಳು ಗಮನಕ್ಕೆ ಬರುತ್ತವೆ.

ಕನ್ನಡದಲ್ಲಿ ವ್ಯಕ್ತಿನಾಮಗಳ ಬಗೆಗೆ ಚರ್ಚೆ ನಡೆದದ್ದೆ ಬಹಳ ಅಪರೂಪ. ಚಿದಾನಂದಮೂರ್ತಿ, ಕಲ್ಬುರ್ಗಿ, ಜವರೇಗೌಡ ಅವರುಗಳು ಬರೆದ ಒಂದೆರಡು ಲೇಖನಗಳನ್ನು ಬಿಟ್ಟರೆ ದೀರ್ಘವಾಗಿ ಚರ್ಚೆ ಆಗಲೇ ಇಲ್ಲ ಎನಿಸುತ್ತದೆ. ಇವರುಗಳು ವ್ಯಕ್ತಿನಾಮಗಳ ಬಗ್ಗೆ ಚರ್ಚಿಸುವಾಗ ಸಾಂದರ್ಭಿಕವಾಗಿ ವ್ಯಕ್ತಿನಾಮಗಳಿಗೆ ಇರುವ ಆಕರಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳಿದ್ದಾರೆ. ಈ ಮಾತುಗಳನ್ನು ಆಧಾರವಾಗಿಟ್ಟುಕೊಂಡು ಚರ್ಚಿಸುವುದಾಗಿದೆ. ಮನುಷ್ಯನ ಚರಿತ್ರೆಯನ್ನು ಗಮನಿಸುತ್ತಾ ಬಂದರೆ ಹಂತ ಹಂತವಾಗಿ ನಾಗರೀಕನಾಗುತ್ತ ಬಂದ ಮನುಷ್ಯ ತನ್ನ ಚಹರೆ ಗುರುತಿಗೋಸ್ಕರ ಕಾಲಕಾಲಕ್ಕೆ ವಿವಿಧ ಬಗೆಯ ಆಕಾರಗಳಿಂದ ಹೆಸರುಗಳನ್ನು ಪಡೆಯುತ್ತಾ ಬಂದಿರುವುದು ಗೊತ್ತಾಗುತ್ತದೆ. ಮನುಷ್ಯ ಒಂದು ಕಾಲದವರೆಗೆ ಸೀಮಿತ ಆಕರಗಳಿಂದ ವ್ಯಕ್ತಿನಾಮಗಳನ್ನು ಬಳಸಿಕೊಳ್ಳುತ್ತಿದ್ದ. ಕೆಲವು ಬುಡಕಟ್ಟು ಜನರಲ್ಲಿ ಈಗಲೂ ಇದನ್ನು ಕಾಣಬಹುದು. ಕಾಲ ಕಳೆದಂತೆ ಬೌದ್ಧಿಕವಾಗಿ ಬೆಳೆದಂತೆ, ಆತ ಆಕರಗಳ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿರುವುದನ್ನು ನೋಡಬಹುದು. ಚರಿತ್ರೆಯುದ್ಧಕ್ಕೂ ಮತ್ತು ಕಾವ್ಯ, ಪುರಾಣ, ಶಾಸನಗಳಲ್ಲಿ ದೊರೆಯುವ ವ್ಯಕ್ತಿನಾಮಗಳನ್ನು ಗಮನಿಸಿದರೆ ಹತ್ತಾರು ಆಕರಗಳಿಂದ ಹೆಸರುಗಳನ್ನು ಪಡೆದುಕೊಂಡಿರುವುದು ಕಂಡುಬರುತ್ತದೆ. ಪ್ರಸ್ತುತ ವ್ಯಕ್ತಿನಾಮಗಳ ಮಾದರಿಗಳನ್ನು ನೋಡುವುದಾದರೆ,

**ಚಿದಾನಂದಮೂರ್ತಿ ಎಂ. ಅವರು ಹೆಸರುಗಳಲ್ಲಿ ಐದು ಬಗೆಯನ್ನು ಗುರುತಿಸುತ್ತಾರೆ.**

೧. ದೈವಮೂಲ ಹೆಸರುಗಳು (Theophoric)

೨. ಪೂರ್ವಜ ಮೂಲ ಹೆಸರುಗಳು (Aqestral, ಪೂರ್ವಜ ಗಂಡಾಗಿದ್ದರೆ, Patranymic, ಹೆಂಗಸಾಗಿದ್ದರೆ Matronymic)

೩. ಅನಿಷ್ಟ ಹೆಸರುಗಳು

೪. ಜನಪ್ರಿಯ ಹೆಸರುಗಳು

೫. ಮುದ್ದ ಹೆಸರುಗಳು

ದೈವಮೂಲ ಹೆಸರುಗಳಲ್ಲಿ ಭಾರತೀಯ ದೈವಗಳು (ಶಿವ, ರುದ್ರ, ರಾಮ, ಹನುಮಂತ, ಕೃಷ್ಣ, ಸೀತೆ, ಪಾರ್ವತಿ, ಗಂಗೆ, ಪದ್ಮಾವತಿ, ಇಂದ್ರ, ಭೈರವ) ಹಾಗೂ ಪ್ರಾದೇಶಿಕ ದೈವಗಳು (ಕರಿಯವ್ವ, ಎಲ್ಲವ್ವ, ಮಾಳವ್ವ, ಕಾಳವ್ವ, ಸುಂಕಮ್ಮ, ತಾಯಮ್ಮ) ಧಾರ್ಮಿಕ ನಾಯಕರಿಗೆ ಸಂಬಂಧಿಸಿದಂತೆ (ಬಸವ, ಸಿದ್ಧರಾಮ, ಮಧ್ವ, ವಾದಿರಾಜ, ಶಂಕರ) ಇತ್ಯಾದಿಯಾಗಿ ನೋಡಬಹುದಾಗಿದೆ. ಪೂರ್ವಜರ ಮೂಲ ಹೆಸರುಗಳಿಗೆ ಸಂಬಂಧಿಸಿದಂತೆ ತಂದೆ-ತಾಯಿಯವರ ಅಪ್ಪ, ಅಮ್ಮಂದಿರ ಹೆಸರುಗಳನ್ನು ತಮ್ಮ ತಮ್ಮ ಮಕ್ಕಳಿಗೆ ಇಡುವುದಾಗಿದೆ. ಹುಟ್ಟಿದ ಮಕ್ಕಳು ಸತ್ತು ಹೋಗಿ ಮುಂದೆ ಮತ್ತೆ ಮಗು ಹುಟ್ಟಿದಾಗ ಅಥವಾ ಬಾಲ್ಯದಲ್ಲಿ ಅವು ರೋಗಪೀಡಿತರಾಗಿದ್ದರೆ ದುಷ್ಟಶಕ್ತಿಗಳ ದೃಷ್ಟಿ ಅವರುಗಳ ಮೇಲೆ ಬೀಳದಿರಲಿ ಎಂದು ಹುಚ್ಚಪ್ಪ, ಗುಂಡಣ್ಣ, ಮಾರಪ್ಪ, ಯಂಕಣ್ಣ, ಡೊಂಕಣ್ಣ ಎಂದು ಹೆಸರುಗಳನ್ನು ಇಡುತ್ತಾರೆ. ಜನಪ್ರಿಯ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುವುದು ಇತ್ತೀಚಿಗೆ ರೂಢಿಯಲ್ಲಿರುವ ಅತ್ಯಂತ ಮಹತ್ವದ್ದು ಆಗಿದೆ. ಅವು ಯರಿತಾತ, ಬಸವಣ್ಣ, ಮಹಾಲಕ್ಷ್ಮಿ, ಐಶ್ವರ್ಯ, ದೀಪಿಕಾ, ಅಕ್ಷಯ ಇತ್ಯಾದಿಯಾಗಿ ನೋಡಬಹುದಾಗಿದೆ. ಹಾಗೇ ಮುದ್ದು ಹೆಸರುಗಳನ್ನು ನೋಡುವುದಾದರೆ ಇಟ್ಟ ಹೆಸರುಗಳನ್ನು ಮೊಟಕುಗೊಳಿಸಿ ಅಥವಾ ಹಾಗೆ ಮಾಡದೆ, ಅದಕ್ಕೆ ಅಂತ್ಯ-ಉ-ಇ ಗಳನ್ನು ಬಳಸಿ ಮುದ್ದು ಹೆಸರುಗಳನ್ನು ಕಲ್ಪಿಸುತ್ತಾರೆ. ಉದಾ. ಶ್ರೀನಿವಾಸ-ಸೀನಿ, ವಿಜಯ-ವಿಜಿ, ಸರಸ್ವತಿ-ಸರಸು, ಚೈತನ್ಯ-ಚೇತು, ರುಕ್ಮಿಣಿ-ರುಕ್ಕು, ಕೃಷ್ಣ-ಕಿಟ್ಟಿ, ಪದ್ಮಜ-ಪದ್ಮ, ರಾಜೇಶ್ವರಿ-ರಾಜಿ, ಚಂದ್ರಮ್ಮ-ಚಂದ್ರಿ, ಮಲ್ಲಿಕಾರ್ಜುನ-ಮಲ್ಲಿ ಇತ್ಯಾದಿಯಾಗಿ ನೋಡಬಹುದಾಗಿದೆ.

**ಕಲಬುರ್ಗಿ ಎಂ.ಎಂ. ಅವರು ವ್ಯಕ್ತಿನಾಮಗಳ ರಾಚನಿಕ ಅಥವಾ ರಚನೆಯ ದೃಷ್ಟಿಯಿಂದ ಆರು ರೀತಿಯಲ್ಲಿ ವರ್ಗೀಕರಿಸಿದ್ದಾರೆ.**

೧. ನಿರ್ದಿಷ್ಟವಾಚಿನಾಮ

೨. ನಿರ್ದಿಷ್ಟ-ವಾರ್ಗಿಕವಾಚಿನಾಮ (ರಾಮ+ಅಪ್ಪ=ರಾಮಪ್ಪ)

೩. ವಿಸ್ತೃತ ನಿರ್ದಿಷ್ಟವಾಚಿನಾಮ (ಸೀತಾ+ರಾಮ=ಸೀತಾರಾಮ)

೪. ವಿಸ್ತೃತ ನಿರ್ದಿಷ್ಟ-ಅವಿಸ್ತೃತ ವಾರ್ಗಿಕವಾಚಿನಾಮ (ಸೀತಾ+ರಾಮ+ಅಪ್ಪ=ಸೀತಾರಾಮಪ್ಪ)

೫. ಅವಿಸ್ತೃತ ನಿರ್ದಿಷ್ಟ-ವಿಸ್ತೃತ ವಾರ್ಗಿಕವಾಚಿನಾಮ (ರಾಮ+ಅಪ್ಪ+ಗೌಡ=ರಾಮಪ್ಪಗೌಡ)

೬. ವಿಸ್ತೃತ ನಿರ್ದಿಷ್ಟ-ವಿಸ್ತೃತ ವಾಗಿರ್ಕವಾಚಿನಾಮ (ಸೀತಾ+ರಾಮ+ಅಪ್ಪ+ಗೌಡ= ಸೀತಾರಾಮಪ್ಪಗೌಡ)

ಹೀಗೆ ನಿರ್ದಿಷ್ಟ ಮತ್ತು ವಾರ್ಗಿಕಗಳ ಅನುಗುಣವಾಗಿ ವಿವೇಚಿಸಬಹುದಾಗಿದೆ ಎಂದು ಹೇಳಿದ್ದಾರೆ.

ಅಶೋಕಕುಮಾರ ರಂಜೇರೆ ಅವರು ಚರಿತ್ರೆ ಮತ್ತು ಕಾವ್ಯ, ಪುರಾಣ, ಶಾಸನಗಳಲ್ಲಿ ದೊರೆಯುವ ವ್ಯಕ್ತಿನಾಮಗಳನ್ನು ಗಮನಿಸಿದರೆ, ಹತ್ತಾರು ಆಕರಗಳಿಂದ ಪಡೆದುಕೊಂಡಿರುವುದು ಕುರಿತಾಗಿ ಹೀಗೆ ವಿವರಿಸಿದ್ದಾರೆ.

೧. ದೈವ

೨. ಪುರಾಣ

೩. ಚರಿತ್ರೆ

೪. ನಿಸರ್ಗ

೫. ಸಮಕಾಲೀನ ಪ್ರಸಿದ್ಧ ವ್ಯಕ್ತಿನಾಮಗಳು

೬. ಕುಟುಂಬದ ಹಿರಿಯರ ಹೆಸರುಗಳು

೭. ಸಂಬಂಧವಾಚಿ ಪದಗಳು

೮. ಮೌಲ್ಯ ಆರೋಪಿತ ವಸ್ತುಗಳು

೯. ಮೌಲ್ಯ ಆರೋಪಿತ ಪದಗಳು

೧೦. ಇತರೆ ಆಕರಗಳು

ಸಣ್ಣಪಾಪಯ್ಯ ಅವರು ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು ಎಂಬ ನಿಬಂಧದಲ್ಲಿ ಮುಸ್ಲಿಂ ಪರಿಸರದ ವ್ಯಕ್ತಿನಾಮಗಳನ್ನು ಹೇಳುವಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಇವರ ಹೆಸರುಗಳನ್ನು ಈ ರೀತಿ ವರ್ಗೀಕರಿಸಿಕೊಳ್ಳಲಾಗಿದೆ.

೧. ದೈವಮೂಲದ ಹೆಸರುಗಳು

೨. ಪುರಾಣಮೂಲದ ಹೆಸರುಗಳು

೩. ಚಾರಿತ್ರಿಕ ಮೂಲದ ಹೆಸರುಗಳು

೪. ಸೂಫಿಸಂತರ ಮೂಲದ ಹೆಸರುಗಳು

೫. ಇತರೆ ವ್ಯಕ್ತಿನಾಮಗಳು

ಈ ಹಿನ್ನೆಲೆಯಲ್ಲಿ ವ್ಯಕ್ತಿನಾಮಗಳನ್ನು ಪ್ರತಿಯೊಂದು ಜನಾಂಗದವರಲ್ಲಿಯೂ ನೋಡಬಹುದಾಗಿದೆ. ಇಲ್ಲಿ ಮುಖ್ಯವಾಗಿ ಆಯಾ ಧರ್ಮಗಳ ಅನುಗುಣವಾಗಿ ಸೂಫಿಸಂತರ, ಧಾರ್ಮಿಕ ನಾಯಕರುಗಳ ಬಿಟ್ಟು ಮಿಕ್ಕೆಲ್ಲ ದೈವ, ಪುರಾಣ, ಚಾರಿತ್ರಿಕ, ಹೆಸರುಗಳು ಪ್ರತಿಯೊಂದು ಧರ್ಮದ ಜನರಲ್ಲಿಯು ಕಂಡುಬರುತ್ತವೆ. ಆದರೆ ಖಚಿತವಾಗಿ ಸೂಫಿಸಂತರು ಇಸ್ಲಾಂ ಧರ್ಮದಲ್ಲಿ, ಪಾದ್ರಿಗಳು ಕ್ರಿಶ್ಚಿಯನ್ನರಲ್ಲಿ ಮತ್ತು ಪುರಾಣಗಳಿಗೆ ಸಂಬಂಧಿಸಿದಂತೆ ಹೆಚ್ಚಾಗಿ ಹಿಂದೂಗಳಲ್ಲಿ ಹೆಸರುಗಳು ಕಂಡುಬರುತ್ತದೆ.

ಈ ರೀತಿಯಾಗಿ ಹೆಸರು ಮತ್ತು ವ್ಯಕ್ತಿಯ ನಡುವೆ ಒಂದು ನಿರಂತರ ಸಂಬಂಧವಿರುವುದರಿಂದ ಎರಡೂ ಒಂದನ್ನೊಂದು ಪರಸ್ಪರ ಅಂತರಸಂಬಂಧ ಹೊಂದಿರುವುದನ್ನು ಪರಂಪರೆಯಿಂದಲೂ ನೋಡುತ್ತಾ ಬರಬಹುದು. ಇತ್ತೀಚಿನ ದಿನಗಳಲ್ಲಿ ಹೆಸರುಗಳ ಆಕಾರ ಇನ್ನೂ ವಿಸ್ತಾರಗೊಳ್ಳುತ್ತಿದೆ. ಮೂರ್ತ ಹೆಸರುಗಳಿಂದ ಅಮೂರ್ತದ ಹೆಸರುಗಳ ಕಡೆಗೆ ಹೆಚ್ಚು ಆಸಕ್ತಿ ತೋರಿಸುತ್ತಿದ್ದಾರೆ. ಇತ್ತೀಚಿಗೆ ಮಕ್ಕಳಿಗೆ ನಾಮಕರಣ ಮಾಡುತ್ತಿರುವ ವಿಸ್ಮಯ, ಕನಸು, ಸಿರಿ, ಸುಪ್ರಿ, ಮಿಂಚು, ಪ್ರಾಮಾಣಿಕ ಮುಂತಾದ ಹೆಸರುಗಳನ್ನು ನೋಡಿದರೆ ತಿಳಿದುಬರುತ್ತದೆ.

ಕನ್ನಡ ನಾಮಾಧ್ಯಯನದಲ್ಲಿ ಕೆಲಸಗಳಾಗಿರುವುದು ಕಡಿಮೆ. ಅದರಲ್ಲೂ ವ್ಯಕ್ತಿನಾಮಗಳ ಬಗೆಗೆ ಕೆಲಸಗಳಾಗಿರುವುದು ಅಲ್ಲೊಂದು, ಇಲ್ಲೊಂದು ಕಂಡುಬರುತ್ತವೆ. ಉದಾಹರಣೆಗೆ, ಕಲ್ಬುರ್ಗಿ ಎಂ.ಎಂ. ಅವರ 'ಕನ್ನಡ ನಾಮವಿಜ್ಞಾನ' ಚಿದಾನಂದಮೂರ್ತಿಯವರು ವ್ಯಕ್ತಿನಾಮಗಳ ಬಗೆಗೆ ಬರೆದ ದೀರ್ಘ ಲೇಖನವಾದ 'ಕರ್ನಾಟಕದ ವ್ಯಕ್ತಿನಾಮಗಳು', ಕನ್ನಡ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದ ಸಣ್ಣ ಪಾಪಯ್ಯನವರ 'ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು' ಇನ್ನುಳಿದ ಹತ್ತಾರು ಲೇಖನಗಳು ಬಂದಿವೆಯಷ್ಟೆ. ಈ ಎಲ್ಲಾ ಬರಹಗಳನ್ನು ಗಮನಿಸಿಕೊಂಡು ಬಳ್ಳಾರಿ ಪರಿಸರದಲ್ಲಿರುವ ದೈವಮೂಲ ವ್ಯಕ್ತಿನಾಮಗಳನ್ನು ಗಮನಿಸಿಕೊಂಡು ಈ ಕೆಳಗಿನಂತೆ ವರ್ಗೀಕರಿಸಲು ಪ್ರಯತ್ನಿಸಿದ್ದೇನೆ.

೧. ಗ್ರಾಮ ದೇವತೆಗಳಿಗೆ ಸಂಬಂಧಿಸಿದ ವ್ಯಕ್ತಿನಾಮಗಳು

೨. ಶಿಷ್ಟ ದೇವತೆಗಳಿಗೆ ಸಂಬಂಧಿಸಿದ ವ್ಯಕ್ತಿನಾಮಗಳು

೩. ದೈವತ್ವಕ್ಕೇರಿದ ದಾರ್ಶನಿಕರಿಗೆ ಸಂಬಂಧಿಸಿದ ವ್ಯಕ್ತಿನಾಮಗಳು

**೩.೨.೧. ಗ್ರಾಮ ದೇವತೆಗಳಿಗೆ ಸಂಬಂಧಿಸಿದ ವ್ಯಕ್ತಿನಾಮಗಳು**

ಮಾತೃದೇವತಾ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳು. ಭಯ, ಭಕ್ತಿ ಭೀತಿಯಿಂದ ಹುತ್ತ, ವೃಕ್ಷ, ಶಿಲೆಗಳನ್ನು ಆರಾದಿಸುತ್ತಿದ್ದ ಗ್ರಾಮೀಣರು ಒಂದು ಕಾಲಘಟ್ಟದಲ್ಲಿ ಅವುಗಳಲ್ಲಿ ಗ್ರಾಮದೇವತೆಗಳನ್ನು ಕಂಡುಕೊಂಡರು. ತಮ್ಮ ಜೀವನದ ಅನುಭವದಿಂದಲೇ ಹುಟ್ಟಿದ ಪುರಾಣ ಕಥೆಗಳನ್ನು ಜೋಡಿಸಿದರು.

"ಅನೇಕ ಗ್ರಾಮದೇವತೆಗಳು ಅತಿ ಪ್ರಾಚೀನವಾದ ಭೂಮಿಪೂಜೆ ಅಥವಾ ಮಾತೃಪೂಜೆಯ ಕುರುಹಗಳಲ್ಲದೆ ಬೇರೆಯಲ್ಲ. ಕೆಲವೊಮ್ಮೆ ಅವು ಫಲಶಕ್ತಿಯ ಸ್ಪಷ್ಟ ಪ್ರತೀಕಗಳಂತೆ ಕಾಣುತ್ತವೆ. ಅರಣ್ಯವಾಸಿಗಳಾದ ಬುಡಕಟ್ಟು ಜನಾಂಗಗಳು ಪೂಜಿಸುವ ಪ್ರೇತಾತ್ಮಗಳು ಗ್ರಾಮಸಮುದಾಯಗಳು ಬೆಳೆದ ಮೇಲೆ ಗ್ರಾಮದೇವತೆಗಳಾಗಿ ಮಾರ್ಪಾಟು ಹೊಂದಿರುವ ಸಾಧ್ಯತೆಗಳಿವೆ. ಅಥವಾ ಐತಿಹಾಸಿಕ ಕಾಲದಲ್ಲಿ ನಡೆದ ಕೆಲವು ಘಟನೆಗಳು ಹಾಗೂ ಆಕಸ್ಮಿಕಗಳು ಕೂಡ ಇಂಥ ದೇವತೆಗಳನ್ನು ಸೃಷ್ಟಿಸಿರಬಹುದು. ಕೆಲವೊಮ್ಮೆ ಕಾಲುಜಾರಿ ಬಿದ್ದು ಅಥವಾ ಸಿಡಿಲು ಬಡಿದು ಅಥವಾ ಇತರ

ಆಕಸ್ಮಿಕಗಳಿಗೆ ಸಿಕ್ಕು ಅಪಮೃತ್ಯುವಿಗೆ ತುತ್ತಾಗಬಹುದು. ಇನ್ನೂ ಹಲವಾರು ಬಗೆಗಳಲ್ಲಿ ನಿರಪರಾಧಿಗಳು ಸಾಯಬಹುದು. ಹೀಗೆ ಸತ್ತವರ ಪ್ರೇತಾತ್ಮಗಳು ಜನರಲ್ಲಿ ಭಯಭಕ್ತಿಯನ್ನು ಹುಟ್ಟಿಸಿ ಅವರಿಂದ ಪೂಜೆಯನ್ನು ಪಡೆಯಬಹುದು." (ನಾಗೇಶ ಎಚ್.ವಿ. ೧೯೮೧, ಪುಟ-೧೪-೧೫) ಇದರ ಜೊತೆಗೆ ಚಾರಿತ್ರಿಕ ವ್ಯಕ್ತಿಗಳು ಮೃತರಾದ ನಂತರ ಹಲವು ವರ್ಷಗಳು ಕಳೆದಂತೆ ಗ್ರಾಮದೇವತೆಗಳೆನಿಸಿಕೊಳ್ಳಬಹುದು.

ಇಂತಹ ಗ್ರಾಮದೇವತೆಗಳು ಪ್ರತಿಯೊಂದು ಊರಿನಲ್ಲಿ ಇರದೇ ಇರವು. ಹಿಂದಿನ ವ್ಯಕ್ತಿನಾಮಗಳು, ಸಾಮಾನ್ಯವಾಗಿ ದೈವಮೂಲದಿಂದಲೇ ಬಂದಂತಹುಗಳಾಗಿವೆ ಎಂಬುದನ್ನು ನಾವು ಶಾಸನಗಳಿಂದ ತಿಳಿಯಬಹುದು. ಬಳ್ಳಾರಿ ಪರಿಸರದಲ್ಲಿರುವ ಗ್ರಾಮದೇವತೆಗಳು ವ್ಯಕ್ತಿನಾಮಗಳ ಮೇಲೆ ಬೀರಿರುವ ಪ್ರಭಾವಗಳನ್ನು ಇಲ್ಲಿ ಗುರುತಿಸಲಾಗಿದೆ. ಹಾಗೂ ಗ್ರಾಮದೇವತೆಗಳ ಪ್ರಭಾವವು ಯಾವ ಜನಾಂಗಗಳ ಮೇಲೆ ಹೆಚ್ಚಾಗಿವೆ ಎಂದು, ದೈವಮೂಲದ ಹೆಸರುಗಳು ಎಷ್ಟು ಪ್ರಮಾಣದಲ್ಲಿವೆ ಎಂಬ ಅಂಶಗಳನ್ನು ಇಲ್ಲಿ ನೋಡಲಾಗಿದೆ.



ನಮ್ಮ ಹಳ್ಳಿಗರ ಬದುಕಿನಲ್ಲಿ ದೈವಗಳ ಪಾತ್ರ ಮಹತ್ತರವಾದುದು. ಅವರ ಎಲ್ಲ ರೀತಿಯ ವ್ಯವಹಾರಗಳಲ್ಲಿ ದೇವರುಗಳು ಒಂದಲ್ಲಾ ಒಂದು ರೀತಿಯಲ್ಲಿ ಪ್ರವೇಶವನ್ನು ಪಡೆದೇ ಇರುತ್ತದೆ. ಊರಿನ ಒಳಿತು ಕೆಡಕುಗಳು ತಾವು ಆಚರಿಸುವ ಹಬ್ಬ-ಹುಣ್ಣಿಮೆಗಳು ಅನುಸರಿಸುವ ರೀತಿ-ನೀತಿಗಳನ್ನು ಅವಲಂಬಿಸಿರುತ್ತದೆಂದೂ ತಮ್ಮ ಪಾಪ-ಪುಣ್ಯಗಳನ್ನು, ನಡೆ-ನುಡಿಗಳನ್ನು ದೇವರು ಸದಾ ನೋಡುತ್ತಿರುವನೆಂದೂ ನಂಬಿದ್ದಾರೆ. ನಂಬಿಕೆಯ ಬೇರು ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಬಲವಾಗಿ ಆವರಿಸುತ್ತದೆ. ಊರಿನಲ್ಲಿ ದನಕರುಗಳಿಗೆ, ಮಕ್ಕಳು ಮರಿಗಳಿಗೆ ಏನಾದರೂ ರೋಗ ಸಂಭವಿಸಿದರೆ, ಅಕಸ್ಮಾತ್ ಸಾವು ನೋವುಗಳುಂಟಾದರೆ, ಅದೆಲ್ಲವೂ ತಾವು ಆಚರಿಸದಿರುವ ಯಾವುದೋ ದೇವರ ಕಾಟವೆಂದು ನಂಬಿ ಅವುಗಳ ಮೊರೆ ಹೋಗುತ್ತಾರೆ. ಪ್ರಕೃತಿಯ ಆರಾಧಕರಾದ ನಮ್ಮ ಜನಪದರಿಗೆ ಪ್ರಕೃತಿಯ ವೈಪರೀತ್ಯಗಳು ಭಯವನ್ನುಂಟುಮಾಡುವುದು ಸಹಜ ಸ್ವಭಾವವಾಗಿದೆ. ಧರ್ಮ, ಪುರಾಣ, ಹಿರಿಯರ ಕಥೆಗಳು, ಇತಿಹಾಸಗಳು ಮುಂತಾದವನ್ನೆಲ್ಲಾ ಪ್ರಕೃತಿಯಲ್ಲಿ ಕಂಡುಕೊಂಡು, ಅದಕ್ಕೊಂದು ಪುರಾಣ ಮೂಲವನ್ನು ಆರೋಪಿಸಿಕೊಂಡು ಪುಣ್ಯಪುರುಷರ ಸ್ಮರಣೆಯನ್ನು ಮಾಡಿಕೊಳ್ಳುತ್ತಾ ತಮ್ಮ ಬದುಕನ್ನು ಅದಕ್ಕೆ ಸಮೀಕರಿಸಿಕೊಳ್ಳುತ್ತಾರೆ. ಮತ್ತು ಅದನ್ನು ಸದಾ ನೆನಪಿನಲ್ಲಿಡಲು ಕೆಲವು ಆಚರಣೆಗಳನ್ನು ರೂಢಿಸಿಕೊಂಡು ಬಂದಿದ್ದಾರೆ. ಹೀಗಾಗಿ ಹಳ್ಳಿಗರ ಪ್ರತಿಯೊಂದು ಸಂದರ್ಭದಲ್ಲಿಯೂ ದೇವರ ಮೊರೆ ಹೋಗುವುದನ್ನು ಕಾಣಬಹುದಾಗಿದೆ.

ಬಳ್ಳಾರಿ ಪರಿಸರದಲ್ಲಿರುವ ಮುಖ್ಯ ಗ್ರಾಮದೇವತೆಗಳು

ಪಟ್ಟಣದ ಎಲ್ಲಮ್ಮ - ಹಂಪಿ

ಸುಂಕಲ ತಾಯಮ್ಮ - ಕಮಲಾಪುರ (ಹೊಸಪೇಟೆ)

ನರೇಗಲ್ಲಮ್ಮ - ಕಮಲಾಪುರ (ಹೊಸಪೇಟೆ)

ಗಾಳೆಮ್ಮ – ಗಾಳೆಮ್ಮನಗುಡಿ (ಹೊಸಪೇಟೆ)

ಊರ ಮಾರಮ್ಮ – ಅಂಚಿನಗುಡಿ (ಹೊಸಪೇಟೆ)

ಸುಂಕಲಮ್ಮ – ವಡ್ರಹಳ್ಳಿ (ಹೊಸಪೇಟೆ)

ದುರುಗಮ್ಮ – ಬಳ್ಳಾರಿ

ಹುಲಿಗೆಮ್ಮ – ಹುಲಿಗಿ (ಕೊಪ್ಪಳ)

ಹುಚ್ಚಂಗೆಮ್ಮ – ಹುಚ್ಚಂಗಿದುರ್ಗ (ಹರಪನಹಳ್ಳಿ)

ಮಾಯಮ್ಮ – ಗಾಣಗಟ್ಟೆ (ಕೂಡ್ಲಿಗಿ)

ಮಾರಮ್ಮ – ಗರಗ (ಹೊಸಪೇಟೆ)

ಚೌಡಮ್ಮ – ಬೋಸೇದೇವರಹಟ್ಟಿ (ಚಳ್ಳಕೆರೆ)

ಗೋಸಂದ್ರ ಮಾರಮ್ಮ – ಗೌರಸಮುದ್ರ (ಚಳ್ಳಕೆರೆ)

ದುರುಗಮ್ಮ – ಬೆನ್ನಳ್ಳಿ (ಕೂಡ್ಲಿಗಿ)

ಉಡುಸಲಮ್ಮ – ಬ್ಯಾಲಕುಂದಿ (ಹೊಸಪೇಟೆ)

ಮಾಯಮ್ಮ – ನಂದಿಬಂಡಿ (ಹೆಚ್.ಬಿ. ಹಳ್ಳಿ)

ಚೌಡಮ್ಮ – ಮಡ್ರಳ್ಳಿ (ಕೂಡ್ಲಿಗಿ)

ಅಂಬಮ್ಮ – ಅಂಬಾಮಠ (ಸಿಂಧನೂರು)

ಮಾರಮ್ಮ – ದೇವರಹಳ್ಳಿ (ಚಳ್ಳಕೆರೆ)

ದ್ಯಾಮಮ್ಮ – ತಾರಾನಗರ (ಸಂಡೂರು)

ಗಂಡಿಮಲಿಯಮ್ಮ – ಯಶವಂತನಗರ (ಸಂಡೂರು)

ದುರುಗಮ್ಮ – ಚಿಲಕನಹಟ್ಟಿ (ಹೊಸಪೇಟೆ)

ಕನ್ನೇರಮ್ಮ – ಡಣಾಯಕನ ಕೆರೆ (ಹೊಸಪೇಟೆ)

ಬಳಗೇರಮ್ಮ – ನಾಯಕನಹಟ್ಟಿ (ಚಳ್ಳಕೆರೆ)

ದುರುಗಮ್ಮ – ಬಂಡ್ರಿ (ಸಂಡೂರು)

ಕಾಲುವೆ ಚೌಡಮ್ಮ – ಚನ್ನಬಸಯ್ಯನ ಹಟ್ಟಿ (ಚಳ್ಳಕೆರೆ)

ಕಣಿವೆಮಾರಮ್ಮ – ಮೆಟ್ರಿ ದರೋಜಿ ಮದ್ಯೆ (ಹೊಸಪೇಟೆ)

ಊರಮ್ಮ – ಕಡ್ಲಬಾಳು (ಹೆಚ್.ಬಿ. ಹಳ್ಳಿ)

ಗುಳೆಲಕ್ಕಮ್ಮ – ಮಜ್ಜಿಗೇರಿ (ಹರಪನಹಳ್ಳಿ)

ಮಾರಮ್ಮ – ವಡ್ಡರಹಳ್ಳಿ (ಚಳ್ಳಕೆರೆ)

ಕೆಂಚಮ್ಮ – ಕಮಲಾಪುರ

ಕಿರೀಟ ಎಲ್ಲಮ್ಮ – ಚಪ್ಪರದಳ್ಳಿ (ಹೊಸಪೇಟೆ)

ಉಡುಸಲಮ್ಮ – ದಶಮಾಪುರ

ಈ ಮೇಲಿನ ಗ್ರಾಮದೇವತೆಗಳಲ್ಲದೆ ಇನ್ನೂ ಅನೇಕ ದೇವತೆಗಳು ಬಳ್ಳಾರಿ ಪರಿಸರದಲ್ಲಿರುವ ವ್ಯಕ್ತಿನಾಮಗಳ ಮೇಲೆ ಪ್ರಭಾವಬೀರಿರುವುದನ್ನು ನಾವು ಕಾಣಬಹುದು.

ಕೆಳವರ್ಗದಲ್ಲಿ ಸ್ತ್ರೀ ದೇವತೆಗಳನ್ನು ನಾವು ವಿಶೇಷವಾಗಿ ನೋಡುತ್ತೇವೆ. ಆದ್ದರಿಂದ ಅಲ್ಲಿರುವ ಸಮುದಾಯದವರು ಸ್ತ್ರೀದೇವತೆಗಳ ಹೆಸರುಗಳನ್ನೇ ಹೆಚ್ಚಾಗಿ ತಮ್ಮ ಮಕ್ಕಳಿಗೆ ಇಟ್ಟಿರುವುದನ್ನು ಗಮನಿಸುತ್ತೇವೆ.

ಉದಾಹರಣೆಗೆ ಗೊಲ್ಲ ಸಮುದಾಯದಲ್ಲಿ : ಕ್ಯಾತಪ್ಪ, ಮೈಲಾರಲಿಂಗೇಶ್ವರ, ಎತ್ತಯ್ಯ, ಕಣಿಮೆ ಈರಣ್ಣ, ಚಿತ್ರಲಿಂಗೇಶ್ವರ, ಬೊಮ್ಮಲಿಂಗೇಶ್ವರ, ಕಾಟಲಿಂಗೇಶ್ವರ, ಕೃಷ್ಣ, ಸಿದ್ದಯ್ಯ, ಕದರಯ್ಯ, ಗುದ್ರಿ ದೊಡ್ಡಣ್ಣ ಮುಂತಾದ ದೇವತೆಗಳಿಗೆ ಆ ಸಮುದಾಯವು ನಡೆದುಕೊಳ್ಳುತ್ತದೆ. ಆದರೂ ಕೂಡಾ ಗ್ರಾಮದೇವತೆಗಳಾದ ಮಾರಮ್ಮ, ಎಲ್ಲಮ್ಮ, ದುರುಗಮ್ಮ, ಗುಳೆಲಕ್ಕಮ್ಮ, ದ್ಯಾಮವ್ವ, ಸುಂಕಲವ್ವ, ಮೈಲವ್ವ ನಂತಹ ದೇವತೆಗಳ ಹೆಸರುಗಳನ್ನು ಬಳಸಿಕೊಂಡು ತಮ್ಮ ಮಕ್ಕಳಿಗೆ ಹೆಸರುಗಳಿಟ್ಟಿರುವುದನ್ನು ಗಮನಿಸುತ್ತೇವೆ. ಉದಾಹರಣೆಗೆ ಎಲ್ಲಮ್ಮ, ತಾಯಮ್ಮ, ಮಾರೆಕ್ಕ, ಮಾಯಮ್ಮ, ದುರುಗಮ್ಮ, ಹುಲಿಗೆಮ್ಮ, ಗಾಳೆಮ್ಮ.

ಈ ಮೇಲೆ ಉದಾಹರಿಸಿದ ಹೆಸರುಗಳು ಕೇವಲ ಗೊಲ್ಲ ಸಮುದಾಯದಲ್ಲೊಂದೇ ಅಲ್ಲ ಕೆಳವರ್ಗಗಳ ಪ್ರತಿಯೊಂದು ಸಮುದಾಯದಲ್ಲೂ ಈ ತರಹದ ಗ್ರಾಮೀಣ ದೇವತೆಗಳ ಹೆಸರುಗಳು ಇಟ್ಟಿರುವುದನ್ನು ಗಮನಿಸುತ್ತೇವೆ.

ಸಾಮಾನ್ಯವಾಗಿ ಸ್ತ್ರೀ ದೇವತೆಗಳ ಹೆಸರುಗಳನ್ನು, ಪುರುಷರಿಗೆ ಇಡಲಾಗುತ್ತದೆ. ಹೆಣ್ಣುಮಕ್ಕಳ ಹೆಸರುಗಳಲ್ಲಿ ಅಮ್ಮ, ಅಕ್ಕ ಸಂಬಂಧವಾಚಕಗಳನ್ನು ಹೆಚ್ಚಾಗಿ ಕಾಣುತ್ತೇವೆ. ಅದೇ ಪುರುಷರ ಹೆಸರುಗಳಲ್ಲಿ ಅಪ್ಪ, ಅಣ್ಣಗಳಾಗಿ ಬದಲಾಗುತ್ತವೆ. ಉದಾ. ಮೈಲಪ್ಪ, ದುರುಗಪ್ಪ, ಕರಿಯಣ್ಣ, ದ್ಯಾಮಪ್ಪ, ಮರಿಯಪ್ಪ, ಗಾಳೆಪ್ಪ, ಮಾಯಣ್ಣ ಹೀಗೆ ಗೊಲ್ಲ ಸಮುದಾಯದಲ್ಲಿ ಗ್ರಾಮದೇವತೆಗಳ ಹೆಸರುಗಳನ್ನು ಸ್ತ್ರೀ ಮತ್ತು ಪುರುಷರ ಹೆಸರುಗಳಲ್ಲಿ ಕಾಣುತ್ತೇವೆ. ಈ ಮೇಲೆ ತಿಳಿಸಿರುವ ಹೆಸರುಗಳು ಸಾಮಾನ್ಯವಾಗಿ ೪೦–೫೦ ವರ್ಷಗಳು ವಯಸ್ಸಾಗಿರುವವರಲ್ಲಿ ಹೆಚ್ಚು ಕಂಡುಬರುತ್ತವೆ.

ಇತ್ತೀಚೆಗೆ ಪ್ರತಿಯೊಂದು ಸಮುದಾಯಗಳಲ್ಲೂ ದೇವತೆಗಳ ಹೆಸರುಗಳನ್ನು ಇಡುವುದು ಕಡಿಮೆಯಾಗಿದೆ. ಅಂದರೆ ಸಂಪೂರ್ಣವಾಗಿ ಇಡೀ ರಚನೆಯ ಬದಲಾವಣೆಯಾಗಿಲ್ಲ ಅಪ್ಪ, ಅಮ್ಮ, ಅಕ್ಕ, ಅಣ್ಣ, ವಾರ್ಗಿಕಗಳು ಮಾಯವಾಗುತ್ತವೆ. ಉದಾಹಹರಣೆಗಾಗಿ ಈ ಕೆಳಕಂಡ ಹೆಸರುಗಳನ್ನು ಗಮನಿಸಬಹುದು.

| **'ಅ' ಪಟ್ಟಿ** | **'ಬ' ಪಟ್ಟಿ** |
|---|---|
| ದುರುಗಮ್ಮ | ದುರ್ಗ |
| ಮಲ್ಲಮ್ಮ | ಮಧುರ |
| ಮಲಿಯಮ್ಮ | ಮಲ್ಲಿಗೆ |
| ಸುಂಕಲಮ್ಮ | ಸುಧಾ |
| ಧ್ಯಾಮವ್ವ | ಧರಿತ್ರಿ |
| ಮಾರಮ್ಮ | ಮಾಲಾ |
| ತಿಪ್ಪವ್ವ | ತೀರ್ಥ |
| ಕರಿಯಮ್ಮ | ಕುಸುಮ |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ 'ಅ' ಪಟ್ಟಿಯಲ್ಲಿರುವ ಹೆಸರುಗಳು ನೇರವಾಗಿ ಗ್ರಾಮದೇವತೆಗಳ ಮೂಲದಿಂದ ಬಂದವುಗಳು, ದೇವತೆಯ ಹೆಸರಿನ ಮೊದಲ ಅಕ್ಷರವನ್ನು ಉಳಿಸಿಕೊಳ್ಳುವ ಉದ್ದೇಶದಿಂದಾಗಿ 'ಬ' ಪಟ್ಟಿಯಲ್ಲಿರುವ ಹೆಸರುಗಳನ್ನು ನಾವು ಕಾಣುತ್ತೇವೆ.

ಪ್ರಾದೇಶಿಕ ಗಂಡು ದೈವಗಳ ಹೆಸರುಗಳನ್ನು ಸ್ತ್ರೀಯರಿಗೂ ಕೂಡಾ ಇಟ್ಟಿರುವುದನ್ನು ಗೊಲ್ಲ ಸಮುದಾಯದಲ್ಲಿ ಕಾಣುತ್ತೇವೆ.

| **'ಅ'ಪಟ್ಟಿ** | **'ಬ'ಪಟ್ಟಿ** |
|---|---|
| ಶಿರಿಬಿಯ ಮೂಗಬಸವೇಶ್ವರ | ಮೂಗವ್ವ |
| ಕೊತ್ತಲ ಆಂಜಿನೇಯ | ಕೊತ್ಲಮ್ಮ |
| ನುಂಕೆಮಲೆ ಸಿದ್ಧೇಶ್ವರ | ನುಂಕಮ್ಮ |
| ಆಂಜಿನೇಯ | ಅಂಜಿನಮ್ಮ |
| ಉಜ್ಜಿನಿ ಮರುಳಸಿದ್ದೇಶ್ವರ | ಉಜ್ಜಿನವ್ವ |

ಈ ಮೇಲೆ ತಿಳಿಸಿದ ದೇವರು ಇರುವ ಸ್ಥಳಗಳನ್ನು ಬಳಸಿಕೊಂಡು ಸ್ತ್ರೀಯರಿಗೆ ಮತ್ತು ಪುರುಷರಿಗೆ ಹೆಸರುಗಳನ್ನು ಇಡುತ್ತಾರೆ. ಈ ಮೇಲೆ ಕೊತ್ತಲ, ನುಂಕೆಮಲೆ, ಉಜ್ಜಿನಿ, ಸ್ಥಳನಾಮಗಳನ್ನು ಬಳಸಿಕೊಂಡು ಸ್ತ್ರೀಯರ ಹೆಸರುಗಳು ಇರುವುದನ್ನು ನೋಡಬಹುದು.

'ಮಾದಿಗ' ಸಮುದಾಯವು ಅನೇಕ ಸ್ತ್ರೀ ದೇವತೆಯರನ್ನು ಗ್ರಾಮದೇವತೆಗಳಾಗಿ ಮಾಡಿಕೊಂಡು ಪೂಜೆ ಮಾಡುತ್ತಿರುವುದನ್ನು ನೋಡುತ್ತೇವೆ. ಅವರಲ್ಲಿಯೂ ಕೂಡಾ ಗ್ರಾಮದೇವತೆಗಳ ಹೆಸರುಗಳು ಇರುವುದನ್ನು ನಾವು ನೋಡುತ್ತೇವೆ. ಬಳ್ಳಾರಿ ಪರಿಸರದಲ್ಲಿ ಮಾದಿಗ ಸಮುದಾಯವನ್ನು ಗಮನಿಸಿ ಈ ಕೆಳಗಿನ ಹೆಸರುಗಳನ್ನು ಸಂಗ್ರಹಿಸಲಾಗಿದೆ.

ಗೌರವ್ವ, ಮಲಿಯವ್ವ, ಕನ್ನೆರಮ್ಮ, ಗಾಳೆಮ್ಮ, ದುರುಗಮ್ಮ, ಲಕ್ಕಮ್ಮ (ಗುಳೆಲಕ್ಕಮ್ಮ) ಕರಿಯಮ್ಮ, ಉಡುಸಲಮ್ಮ ಈ ದೇವತೆಗಳ ಹೆಸರುಗಳನ್ನಲ್ಲದೆ ಇನ್ನೂ ಅನೇಕ ದೇವತೆಗಳ ಹೆಸರುಗಳನ್ನು ಮಾದಿಗ ಸಮುದಾಯದಲ್ಲಿ ನೋಡಬಹುದು. ಹಾಗೆಯೇ ಸ್ತ್ರೀ ದೇವತೆಗಳ ಹೆಸರುಗಳನ್ನು ಗಂಡಸರು ಇಟ್ಟುಕೊಳ್ಳುತ್ತಾರೆ. ಹೆಸರುಗಳ ಜೊತೆಗೆ ಜಾತಿಯು ವಿವಿಧ ರೀತಿಯಲ್ಲಿ ಬಳಕೆಯಾಗುತ್ತದೆ. ಹರಿಜನ ಸಾರೆಪ್ಪ, ಮಾದರ ಕರಿಯಪ್ಪ, ಹರಿಜನ ದುರುಗಪ್ಪ, ಆದಿಕರ್ನಾಟಕ ಲಕ್ಕಪ್ಪ.

ಇಲ್ಲಿ ಹೆಸರುಗಳ ಜೊತೆಗೆ ಜಾತಿಯು ನಮೂದಾಗಿದೆ. ಇತ್ತೀಚೆಗೆ ಜಾತಿಯನ್ನು ನಮೂದು ಮಾಡಲು ಕೆಲವು ಜನರು ಹಿಂದೆ ಸರಿಯುತ್ತಿದ್ದಾರೆ. ಕೆಲವು ಜನರು ಜಾತಿಯನ್ನು ಇಂಗ್ಲಿಷ್ ಇನ್ಸಿಯಲ್‌ನಲ್ಲಿ ಬರೆಸುತ್ತಾರೆ. ಉದಾ. ಎ.ಕೆ.ಎಚ್. ಎಂಬ ಇಂಗ್ಲಿಷ್ ಅಕ್ಷರಗಳನ್ನು ಹೆಸರಿನ ಮೊದಲೋ ಅಥವಾ ಹೆಸರಿನ ನಂತರವೋ ಬಳಸುತ್ತಾರೆ. ಬಳ್ಳಾರಿ ಪರಿಸರದಲ್ಲಿ ಹೆಚ್ಚಾಗಿ ಹೆಸರಿನ ಪೂರ್ವದಲ್ಲಿಯೇ ಜಾತಿಯ ಹೆಸರು ಇರುವುದನ್ನು ಹೆಚ್ಚಾಗಿ ಗಮನಿಸುತ್ತೇವೆ.

ಹೆಸರುಗಳ ಜೊತೆಗೆ ಗುಣವಾಚಕಗಳಾದ, ಕರಿಯ, ಕೆಂಪ, ವಿಶೇಷ ಗುಣಗಳಾದ ಸಣ್ಣ, ದೊಡ್ಡ ಎಂಬ ವಾರ್ಗಿಕಗಳನ್ನು ನೋಡುತ್ತೇವೆ. ಹೀಗೆ ಗ್ರಾಮದೇವತೆಗಳ ಹೆಸರುಗಳು ಬಳಕೆಯಾಗಿವೆ.

'ಕುರುಬ' ಸಮುದಾಯವು ಕರ್ನಾಟಕದ ಜನಸಂಖ್ಯೆಯಲ್ಲಿ ಹೆಚ್ಚಿರುವ ವರ್ಗಗಳಲ್ಲಿ, ಸಮುದಾಯಕ್ಕೊಂದೊಂದು ಸಂಪ್ರದಾಯಗಳಿರುವಂತೆ ಈ ಸಮುದಾಯಕ್ಕೆ ಅನೇಕ ಪರಂಪರೆಗಳಿವೆ. ಬಳ್ಳಾರಿ ಪರಿಸರದಲ್ಲಿ ಕುರುಬ ಸಮುದಾಯದ ಅನೇಕ ಸ್ತ್ರೀ ಮತ್ತು ಪುರುಷ ದೇವತೆಗಳನ್ನು ನೋಡಬಹುದು. ಹಾಗೆಯೇ ಆ ಸಮುದಾಯದ ವ್ಯಕ್ತಿಗಳು ತಮ್ಮ ಪವಾಡಗಳ ಮೂಲಕ, ಸಾಮಾನ್ಯ ಜನರ ನಂಬಿಕೆಯನ್ನು ಗಳಿಸಿ ದೈವತ್ವಕ್ಕೇರಿ ದೇವಮಾನವರೆನಿಸಿಕೊಂಡಿದ್ದಾರೆ. ಮೊದಲ ತಲೆಮಾರಿನ ಜನರಲ್ಲಿ ಹಾಗೂ ಎರಡನೇ ತಲೆಮಾರಿನ ಜನರಲ್ಲಿ ಈಗಲೂ ಕೂಡಾ ಈ ಸಮುದಾಯವು ಪೂಜಿಸಲ್ಪಡುವ ಸ್ತ್ರೀ ಮತ್ತು ಪುರುಷ ದೇವತೆಗಳ ಹೆಸರುಗಳನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

**ಸ್ತ್ರೀ ದೇವತೆಗಳ ಹೆಸರುಗಳು**

ಮಲೆಯಮ್ಮ – ರಾಯರಕೆರೆ

ಬಂಡೆ ಹುಚ್ಚಮ್ಮ – ನೆವಲಿ

ಉಡುಸಲಮ್ಮ – ಬಾದನಹಟ್ಟಿ

ತೋಪು ಮಾರಮ್ಮ - ಅಮೃತಾಪುರ

ಸುಂಕಲಮ್ಮ - ಕುರುಗೋಡು

ಮಲೆಯಮ್ಮ - ಅರಳಳ್ಳಿ

ದುರುಗಮ್ಮ - ಬಳ್ಳಾರಿ

ಮಂಕಾಳಮ್ಮ - ಬಲಕುಂದೆ

ಬನಶಂಕರಿ - ದಮ್ಮೂರು

ಮರದಮ್ಮ - ಮದಿರೆ (ಹಾಲಪ್ಪ ಲಿಂಗದಳ್ಳಿ, ೨೦೧೫, ಪುಟ-೧೯೫)

ಈ ಮೇಲಿನ ಸ್ತ್ರೀ ದೇವತೆಗಳ ಹೆಸರುಗಳಲ್ಲಿ, ಬಂಡೆ ಹುಚ್ಚಮ್ಮ, ಬನಶಂಕರಿ, ಮರದಮ್ಮ ದೇವತೆಗಳ ಹೆಸರನ್ನು ಬಳಸಿಕೊಂಡು ಉದಾ. ಬಂಡೆಪ್ಪ, ಬಂಡೆಮ್ಮ, ಬನದಪ್ಪ, ಬನದಮ್ಮ, ಮರದಪ್ಪ, ಮರದಮ್ಮ ಎಂಬ ಹೆಸರುಗಳಿರುವುದನ್ನು ಕಾಣಬಹುದು.

ಇಲ್ಲಿ ಬಂಡೆ ಹುಚ್ಚಮ್ಮನನ್ನು, ಬನಶಂಕರಿಯನ್ನು, ಮರದಮ್ಮನನ್ನು ಈ ಮೇಲಿನ ರೀತಿಯಲ್ಲಿ ಬದಲಿಸಿಕೊಂಡು ಹೆಸರುಗಳನ್ನು ಈ ಸಮುದಾಯವು ಇಟ್ಟುಕೊಂಡಿದೆ. ಈ ಹೆಸರುಗಳು ೫೦-೬೦ ವರ್ಷವಾಗಿರುವ ಸ್ತ್ರೀ ಮತ್ತು ಪುರುಷರಲ್ಲಿ ಹೆಚ್ಚು ಕಂಡುಬರುತ್ತವೆ.

ಸ್ತ್ರೀ ದೇವತೆಯ ಜೊತೆಗೆ ಪುರುಷ ದೇವತೆಗಳನ್ನು ಪೂಜಿಸುವ ಸಂಪ್ರದಾಯವನ್ನು ಇಂದಿಗೂ ಬೆಳಿಸಿಕೊಂಡು ಬಂದಿದ್ದಾರೆ. ಬಳ್ಳಾರಿ ಪರಿಸರದಾಚೆಗೂ ಈ ದೇವತೆಗಳು ಪ್ರಸಿದ್ಧಿಯನ್ನು ಪಡೆದ ಉದಾಹರಣೆಗಳಿವೆ. ಮನುಷ್ಯನಿಗೆ ಸಮಸ್ಯೆಗಳು ಎದುರಾಗುವುದು ಸಹಜ, ಅಂತಹ ಕಷ್ಟಗಳನ್ನು ಪರಿಹರಿಸುವುದಕ್ಕಾಗಿ ಸಾಮಾನ್ಯ ಜನರು ದೇವತೆಗಳ ಮೊರೆ ಹೋಗುತ್ತಾರೆ. ಒಂದು ವೇಳೆ ಆ ಸಮಸ್ಯೆಗಳು ಪರಿಹಾರವಾದಲ್ಲಿ ಹರಕೆಯನ್ನು ತೀರಿಸಲು ಮುಂದಾಗುತ್ತಾರೆ. ಬೀರದೇವರ ಸಂಪ್ರದಾಯದ ಅನೇಕ ದೇವರು ಬಳ್ಳಾರಿ ಪರಿಸರದಲ್ಲಿ ಕಾಣುತ್ತೇವೆ. ಅಂತಹುಗಳಲ್ಲಿ

ಸಿದ್ಧಲಿಂಗೇಶ್ವರ - ಗೋಸಬಾಳ

ಕಂಚೇಶ್ವರ - ಪಾಪಿನಾಯಕನಹಳ್ಳಿ (ಹೊಸಪೇಟೆ)

ಶ್ರೀಗುರು ಬೀರಲಿಂಗೇಶ್ವರ ಸಂಸ್ಥಾನ - ಗೋನಾಳ

ಬೀರಲಿಂಗೇಶ್ವರ - ದಮ್ಮೂರು (ಬಳ್ಳಾರಿ)

ಕೆಂಚಮಾಳಪ್ಪ - ಮದಿರೆ

ಕಲ್ಲುಡೇಶ್ವರ - ಕುರುಗೋಡು

ಹೊಸಗೇರಪ್ಪ - ಬಸವಾಪುರ (ಸಂಡೂರು)

ಹೀರಾಳಪ್ಪ - ಮುಂಡರಗಿ (ಆಲೂರು ತಾಲೂಕು ಆಂಧ್ರ ಪ್ರದೇಶ)

ಬೀರಲಿಂಗೇಶ್ವರ - ಕುರೆಕೊಪ್ಪೆ

ಬಲ್ಲಕುಂದೆಪ್ಪ - ಬಲಕುಂದೆ (ಸಿರುಗುಪ್ಪ)

ತರಸಾಲಪ್ಪ - ಬಾಗವಾಡಿ (ಸಿರುಗುಪ್ಪ)

ಆದ್ಯಪ್ಪಸ್ವಾಮಿ - ಕಂಪ್ಲಿ

ಕಾರಮಿಂಚಪ್ಪ - ರಾಮಸಾಗರ

ಉಲ್ತಪ್ಪ - ರಾಮಸಾಗರ

ನಾಗಲಿಂಗೇಶ್ವರ - ಕೆರನಳ್ಳಿ

ಗುಂತಗಲ್ಲಪ್ಪ - ಗುಂತಕಲ್

ಚಿನ್ನೂರೇಶ್ವರ - ಗೂಳ್ಯರಿ (ಹಾಲಪ್ಪ ಲಿಂಗದಳ್ಳಿ, ೨೦೧೫, ಪುಟ, ೫೦)

ಈ ಮೇಲಿನ ದೈವಗಳಲ್ಲದೆ ಈ ಸಮುದಾಯವು ಮೈಲಾರಲಿಂಗನ ಪರಂಪರೆಯ ದೈವಗಳನ್ನು ಪೂಜಿಸುತ್ತಾರೆ. ಉದಾಹರಣೆಗೆ ಮಲ್ಲಯ್ಯ, ಗುಡ್ಡದ ಮಲ್ಲಯ್ಯ, ಮೈಲಾರಲಿಂಗ ಹೀಗೆ ಕರೆಯಲ್ಪಡುವ ಮೈಲಾರವು ಪಶುಪಾಲಕರಾದ ಹಾಲುಮತಸ್ಥರ ದೈವವಾಗಿದ್ದಾನೆ. ಮೈಲಾರಲಿಂಗನ ಒಂದು ರೂಪವೇ ಮಲ್ಲಿಕಾರ್ಜುನ ಎಂದು ಸಂಶೋಧಕರಾದ ಹಾಲಪ್ಪ ಲಿಂಗದಳ್ಳಿ ಅವರು ಹೇಳುತ್ತಾರೆ.

ಹೀಗೆ ಬೇಡ, ಮೇದ, ಈಡಿಗ, ಉಪ್ಪಾರ, ಲಂಬಾಣಿ, ವಡ್ಡ, ಕೊರಚ, ಕಿಳ್ಳೇಕ್ಯಾತ ಮುಂತಾದ ಕೆಳವರ್ಗಗಳಲ್ಲಿ ಅವರವರ ಒಕ್ಕಲು ದೇವರುಗಳಿವೆ. ಅವರು ಪೂಜೆಮಾಡುವ ದೇವತೆಗಳನ್ನು ಹೆಚ್ಚಾಗಿ ಆಯಾ ಸಮುದಾಯದವರು ಹೆಸರುಗಳನ್ನು ಇಡುತ್ತಾರೆ. ಜನಪ್ರಿಯ ದೇವತೆಗಳೆನಿಸಿದ ಹುಲಿಗಿಯ ಹುಲಿಗೆಮ್ಮ, ಬಳ್ಳಾರಿ ದುರುಗಮ್ಮ, ಗಾಣಗಟ್ಟೆ ಮಾಯಮ್ಮ, ಅಂಬಾಮಠದ ಅಂಬಮ್ಮ, ಸೌದತ್ತಿಯ ಎಲ್ಲಮ್ಮ, ಬೆನ್ನಳ್ಳಿ ದುರುಗಮ್ಮ ಇಂತಹ ಪ್ರಸಿದ್ಧಿ ಹೊಂದಿದಂತಹ ದೇವತೆಗಳ ಹೆಸರುಗಳನ್ನು ಕೆಳವರ್ಗದ ಎಲ್ಲಾ ಸಮುದಾಯಗಳಲ್ಲಿ ನೋಡಬಹುದಾಗಿದೆ. ಈ ಹೆಸರಿನ ಅಂದರೆ ಗ್ರಾಮೀಣ ದೇವತೆಗಳ ಹೆಸರುಗಳಿಡುವುದು ಇತ್ತೀಚಿಗೆ ಕಡಿಮೆಯಾಗಿದೆ. ಇದಕ್ಕೆ ಕಾರಣ, ಕಾಲ ಸರಿದಂತೆ ವಿವಿಧ ರೀತಿ ಯೋಚನೆ ಮಾಡುವ ಜನರು ಹೆಸರುಗಳನ್ನು ಆಧುನೀಕತೆಗೆ ಒಗ್ಗಿಸಿದ್ದಾರೆ.

ಮೇಲ್ವರ್ಗದ ಜನರು ಅಪ್ಪಿತಪ್ಪಿಯೂ, ಹುಲಿಗೆವ್ವ, ಮಾರವ್ವ, ಮಸಣೆವ್ವ, ದುರುಗವ್ವ, ಧ್ಯಾಮವ್ವ, ಕರಿಯವ್ವ ಎಂದು ನಾಮಕರಣ ಮಾಡಿರುವುದನ್ನು ನಾವು ಕಾಣುವುದಿಲ್ಲ. ಈ ದೇವತೆಗಳ ಹೆಸರು ಕೇವಲ ಕೆಳವರ್ಗಗಳಲ್ಲಿ ಮಾತ್ರ ಕಾಣಲು ಸಾಧ್ಯ. ಆದರೆ ಬ್ರಾಹ್ಮಣ, ಜಂಗಮ, ಲಿಂಗಾಯತ, ವೀರಶೈವ, ಸಮುದಾಯಗಳು ಪೂಜಿಸುವ ದೇವತೆಗಳ ಹೆಸರುಗಳನ್ನು ಕೆಳವರ್ಗದವರು ತಮ್ಮ

ಮಕ್ಕಳಿಗೆ ಇಡುತ್ತಾರೆ. ಉದಾಹರಣೆಗೆ, ಶಿವರಾಜ, ಈಶ್ವರ, ಗಣೇಶ, ಪಾರ್ವತಿ, ವಿಷ್ಣು, ಸರಸ್ವತಿ, ನಂದೀಶ, ಜಗದೀಶ, ಬ್ರಹ್ಮ, ಮಹೇಶ ಇಂತಹ ಹೆಸರುಗಳನ್ನು ಕೆಳವರ್ಗಗಳಲ್ಲಿ ಕಾಣಲು ಸಾಧ್ಯ. ಆದರೆ ಅವರು ಕೆಳಸಮುದಾಯದ ದೇವತೆಗಳ ಹೆಸರುಗಳನ್ನು ಅನುಕರಿಸುವುದಿಲ್ಲ.

**೩.೨.೨. ಶಿಷ್ಟ ದೇವತೆಗಳಿಗೆ ಸಂಬಂಧಿಸಿದ ವ್ಯಕ್ತಿನಾಮಗಳು**

ಯಾವ ಬಗೆಯ ಲಿಖಿತಾಧಾರಗಳೂ ಇಲ್ಲದೆ, ಗ್ರಾಮೀಣ ಜನಾಂಗಗಳಲ್ಲಿ ಆದಿಕಾಲದಿಂದಲೂ ಉಳಿದುಬಂದಿರುವ ದೇವತೆಗಳು ಜನಪದ ದೇವತೆಗಳಾದರೆ "ಶಿಷ್ಟ ಪುರಾಣಗಳಲ್ಲಿ, ಕಾವ್ಯ ಸಮುದಾಯಗಳಲ್ಲಿ ವೈಭವದಿಂದ ಮರೆದಿರುವ ಹಾಗೂ ಶಿಷ್ಟ ಜನಾಂಗದಿಂದ ಆರಾಧನೆಗೊಳ್ಳುವ ದೇವತೆಗಳನ್ನು ಶಿಷ್ಟ ದೇವತೆಗಳು ಎಂದು ಕರೆಯಬಹುದು." (ನಾಯಕ್.ಹಾ.ಮಾ. (ಸಂ) ಕನ್ನಡ ವಿಶ್ವಕೋಶ ಸಂಪುಟ-೭, ಪುಟ-೬೮೨)

ಶಿಷ್ಟ ದೇವತೆಗಳ ಆರಾಧನೆ ಬೆಳಕಿಗೆ ಬರುವ ಮುನ್ನವೇ ಜನಪದ ದೇವತೆಗಳ ಆರಾಧನೆ ಇದ್ದು, ಇವು ಶಿಷ್ಟ ದೇವತೆಗಳಲ್ಲಿ ಅನೇಕ ದೇವರುಗಳ ಕಲ್ಪನೆಗೆ ಆಧಾರವು ಆಗಿದ್ದವು. ಈ ಹಿನ್ನೆಲೆಯಲ್ಲಿ ಶಿಷ್ಟದೇವತೆಗಳ ಅಸ್ತಿತ್ವ ಅಥವಾ ಉಗಮದ ಚರಿತ್ರೆಯನ್ನು ಗಮನಿಸಿದಾಗ ಗ್ರಾಮದೇವತೆಗಳ ಉಗಮಕ್ಕೂ ಮೊದಲೇ ಶಿಷ್ಟದೇವತೆಗಳ ಕಲ್ಪನೆ ಇಲ್ಲವೆಂದೇ ಹೇಳಬೇಕು.

ಮಾನವ ತಾನು ನಾಗರೀಕನಾದಂತೆಲ್ಲಾ ಬೆಳಕಿಗೆ ಬಂದ ದೇವತೆಗಳು ಈ ಶಿಷ್ಟದೇವತೆಗಳು ಎನ್ನಬಹುದು. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ ಮುಂದುವರಿದ ಹಾಗೂ ಮೇಲ್ವರ್ಗಕ್ಕೆ ಸೇರಿದ ದೇವತೆಗಳನ್ನು ನಾವು ಶಿಷ್ಟದೇವತೆಗಳೆಂದು ಗುರುತಿಸಬಹುದು. ಮಾತೃಪ್ರಧಾನ ವ್ಯವಸ್ಥೆಯನ್ನು ಒಳಗೊಂಡ ಕೃಷಿಕರಲ್ಲಿ ಸ್ತ್ರೀಪ್ರಧಾನ ದೇವತೆಯ ಕಲ್ಪನೆಯಿದ್ದರೆ, ಪಿತೃಪ್ರಧಾನ ವ್ಯವಸ್ಥೆಯನ್ನು ಒಳಗೊಂಡ ಪಶುಪಾಲಕ ವಲಸೆಗಾರರಲ್ಲಿ ಶಿಷ್ಟದೇವತೆಗಳ ಕಲ್ಪನೆ ಕಂಡುಬರುತ್ತದೆ. ನಂತರದ ಕಾಲದಲ್ಲಿ ಇವೆರಡರ ಸಮನ್ವಯ ಕಾಣಬಹುದು.

"ದ್ರಾವಿಡ ಸಂಸ್ಕೃತಿ ಪರಂಪರೆಗೆ ದಕ್ಷಿಣದ ನಾಲ್ಕು ರಾಜ್ಯಗಳು ಭಾರತೀಯ ನೆಲೆಗಳಾಗಿವೆ. ಆದರೆ ಒಂದು ಕಾಲದಲ್ಲಿ ದ್ರಾವಿಡ ಪರಂಪರೆ ಇಡೀ ದೇಶವನ್ನು ವ್ಯಾಪಿಸಿತ್ತು. ದ್ರಾವಿಡ ಸಮಾಜ ಮತ್ತು ಸಂಸ್ಕೃತಿ ಪರಂಪರೆಯಲ್ಲಿ ಎರಡು ಪ್ರತ್ಯೇಕ ವಾಹಿನಿಗಳಿದ್ದವು. ಅವುಗಳಲ್ಲಿ ೧. ಹೊಲೆಮಾದಿಗ ಕೃಷಿ ಮೂಲದ ಸಂಸ್ಕೃತಿ ೨. ದ್ರಾವಿಡ ಜಾತಿಗಳ ವಲಸೆಗಾರರ ಕೃಷಿ ಬೇಸಾಯಗಾರರು ಪಶುಪಾಲಕರ ಸಂಸ್ಕೃತಿ. ಈ ಎರಡರ ಸಮನ್ವಯಗೊಂಡ ರೂಪವೇ ದ್ರಾವಿಡ ಸಂಸ್ಕೃತಿ. ಕೃಷಿಕರಾಗಿದ್ದ ಹೊಲೆಮಾದಿಗರು ಅಮ್ಮಂದಿರನ್ನು ಪೂಜಿಸುತ್ತಿದ್ದುದು ಸಹಜವಾಗಿದ್ದಂತೆ ಪಶುಪಾಲಕರಾಗಿದ್ದ ಗೊಲ್ಲ, ಬೇಡ, ಕುರುಬ, ಗೊಂಡರಾದಿ, ದ್ರಾವಿಡರು, ಪುರುಷ ದೇವತೆಗಳನ್ನು ಪ್ರಧಾನವಾಗಿ ಆರಾಧಿಸುತ್ತಿದ್ದರು. ಆದರೆ ಅವರು ಕೃಷಿಕರಾಗಿ ಮಾರ್ಪಟ್ಟಿದ್ದರಿಂದ ತಮ್ಮ ಮಾರಿ ಸಪ್ತಮಾತೃಕೆಯರನ್ನು ಮತ್ತು ಮೊದಲಾದ ಮಾತೃದೇವತೆಗಳನ್ನು ಕೃಷಿ ದೇವತೆಗಳನ್ನಾಗಿ ಒಪ್ಪಿಕೊಳ್ಳಬೇಕಾಯಿತು." (ಹಿರೇಮಠ ಎಸ್.ಎಸ್., ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ-೨, ಜಾತ್ರೆಗಳು, ಪುಟ ೧೪)

"ವೈದಿಕ ವಾಙ್ಮಯದಲ್ಲಿ ಸಪ್ತಮಾತೃಕೆ"ಯರಿಗೆ ಭಿನ್ನ ಭಿನ್ನ ಹೆಸರುಗಳಿವೆ. ಬ್ರಾಹ್ಮಿ, ವೈಷ್ಣವಿ, ರೌದ್ರಿ, ಕೌಮುದಿ, ಇಂದ್ರಿ, ಯಮಿ, ವಾರುಣಿ, ಕಾವೇರಿ, ಇವರು ಕ್ರಮವಾಗಿ ಬ್ರಹ್ಮ, ವಿಷ್ಣು, ಶಿವ, ಸ್ಕಂದ, ಇಂದ್ರ, ಯಮ, ವರುಣ, ಕುಬೇರ ಈ ದೇವತೆಗಳ ವಾಡಿಕೆ ೦೭ ಇದ್ದರೂ ೦೮, ೦೯, ೧೬ ಹೆಸರುಗಳು ಅಲ್ಲಲ್ಲಿ ಕಂಡುಬರುತ್ತವೆ. ದ್ರಾವಿಡ ಕುಲಗಳಿಂದ ಅನಂತರ ಕೆಳಜಾತಿಗಳಿಂದ ವೈಧಿಕ ಮೇಲುಜಾತಿ ಧರ್ಮಗಳಿಗೆ ಪ್ರವೇಶ ಪಡೆಯುವಾಗ ತಮ್ಮ ಅನೇಕ ಬದಲಾವಣೆಗಳನ್ನು ಕಾಣುವಂತಾದರು ಸಹಜ. ಹಾಗೆ ವೈಧಿಕ ಧರ್ಮಕ್ಕೆ ಪ್ರವೇಶ ಪಡೆದನಂತರ ಆಕೆ ವೈಧಿಕ ಗಂಡು ದೇವರುಗಳ ಹೆಣ್ಣು ರೂಪವಾಗಿವೆ ಅಷ್ಟೆ. ಅಂದರೆ

ಬ್ರಹ್ಮ – ಬ್ರಾಹ್ಮಿ

ವಿಷ್ಣು – ವೈಷ್ಣವಿ

ಇಂದ್ರ – ಇಂದ್ರಾಣಿ

ಕುಮಾರ – ಕೌಮಾರಿ

ನರಸಿಂಹ – ನಾರಸಿಂಹ

ವರಾಹ – ವಾರಾಹಿ

ಮಹೇಶ್ವರ – ಮಾಹೇಶ್ವರಿ

ರುದ್ರ – ರೌದ್ರಿ

ಯಮ – ಯಮಿ

ವರುಣ – ವಾರುಣಿ

ಕುಬೇರ – ಕೌಬೇರಿ

ವಿನಾಯಕ– ವೈನಾಯಕಿ ಎಂದಾಗಬೇಕಾಯಿತು. "ಭಗವಾನ್ ಎಂಬಲ್ಲಿಯುವ ಭಗ (ಯೋನಿ) ಐಶ್ವರ್ಯ, ಸಮೃದ್ಧಿ ಎಂಬರ್ಥದಲ್ಲೂ ಇದ್ದು ಈ ಶಬ್ದ ಮಾತೃದೇವತೆಯ ಸಾಂಕೇತಿಕತೆಯನ್ನು ಪುರುಷ ದೇವತೆಗಳು ಒಳಗೊಂಡು ಒಂದು ಅವಸ್ಥಾಂತರವನ್ನು ತೋರಿಸುತ್ತದೆ." (ಹಿರೇಮಠ ಎಸ್.ಎಸ್., ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ–೨, ಜಾತ್ರೆಗಳು, ಪುಟ ೨೭) ಹೀಗೆ ಪಶುಪಾಲಕ ವಲಸೆಗಾರರ ಕಾಲಕ್ರಮೇಣ ಕೃಷಿಕರಾಗಿ ತಮ್ಮ ದೇವತೆಗಳಲ್ಲಿ ಸಮನ್ವಯ ಸಾಧಿಸಿದರು. ಆದರೆ "ವೈಧಿಕರ ಇಂದ್ರ, ವರುಣಿ, ಬೃಹಸ್ಪತಿ, ವೆಂಕಟರಮಣ, ಕೃಷ್ಣ, ಧರ್ಮರಾಯ, ಅರ್ಜುನ, ಸಹದೇವ ಮೊದಲಾದ ದೇವತೆಗಳಲ್ಲಿ ಯಾವ ರೀತಿಯ ಸಮನ್ವಯ ಸಾಧಿಸಲೂ ಸಾಧ್ಯವಿಲ್ಲ. ಕಾರಣ ಇವೆಲ್ಲಾ ಪುರುಷವಾಚಕಗಳು. ಇವು ಸ್ತ್ರೀಲಿಂಗಗಳಾಗಲಾರವು. ಆದರೆ ರಾಮಪ್ಪ–ರಾಮವ್ವ, ಭೀಮಪ್ಪ–ಭೀಮವ್ವ ಎನ್ನುವ ಪದಗಳಲ್ಲಿ ದ್ರಾವಿಡರ ಪ್ರಭಾವ ಎದ್ದು ಕಾಣುತ್ತದೆ." (ಹಿರೇಮಠ ಎಸ್.ಎಸ್., ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ–೨, ಜಾತ್ರೆಗಳು, ಪುಟ–೧೫) ಈ

ಅಂಶಗಳನ್ನು ಗಮನಿಸಿದಾಗ ದ್ರಾವಿಡ ಪರಂಪರೆಯು ಹೇಗೆ ವೈಧಿಕ ಶಿಷ್ಟ ಪರಂಪರೆಯ ಮೇಲೆ ತನ್ನ ಪ್ರಭಾವ ಬೀರಿದೆ ಎಂಬುದನ್ನು ತಿಳಿಯಬಹುದು.

ಹೀಗೆ ಗ್ರಾಮ ದೇವತೆಯ ಅಸ್ತಿತ್ವಕ್ಕೆ ದ್ರಾವಿಡ ಸಂಸ್ಕೃತಿಯ ಕೃಷಿಕ ಸಮಾಜ ಕಾರಣವಾದರೆ, ವೈದಿಕರ ಕಾಲದಲ್ಲಿ ಶಿಷ್ಟ ದೇವರ ಆರಾಧನೆಯು ಉತ್ತುಂಗ ಸ್ಥಿತಿಯಲ್ಲಿತ್ತು. ಹೀಗೆ ಮೊದಲಿನಿಂದಲೂ ಗ್ರಾಮದೇವತೆಗಳಷ್ಟು ಪ್ರಭಾವಶಾಲಿಗಳಾಗಿರಲಿಲ್ಲ. ಹಾಗೆಯೇ ಶಿಷ್ಟದೇವತೆಗಳ ದೇವಾಲಯಗಳು ಗ್ರಾಮದೇವತೆಗಳ ದೇವಾಲಯಗಳಿಗೆ ತದ್ವಿರುದ್ಧವಾಗಿದ್ದವು. ಇವು ಸುಂದರವೂ ವ್ಯವಸ್ಥಿತವೂ ಆಗಿದ್ದು, ಒಳಹೊರ ಕೆತ್ತನೆಗಳಿಂದ ಕೂಡಿದ್ದು, ಮೇಲ್ನೋಟಕ್ಕೆ ಎಲ್ಲರನ್ನು ಆಕರ್ಷಿಸುವ ಗುಣ ಹೊಂದಿದ್ದವು. ಇಲ್ಲಿಯ ದೇವತೆಗಳು ಉಗ್ರರೂಪಿನ ದೇವತೆಗಳಾಗಿರದೆ, ಸೌಮ್ಯರೂಪಿ ದೇವತೆಗಳಾಗಿದ್ದವು. ಈ ದೇವಾಲಯಗಳಿಗೆ ಸಾಮಾನ್ಯವಾಗಿ ಮೇಲ್ವರ್ಗದವರೇ ಪುರೋಹಿತರಾಗಿದ್ದರು.

ಬಳ್ಳಾರಿ ಪರಿಸರದಲ್ಲಿರುವ ಶಿಷ್ಟದೇವತೆಗಳ ಮೂಲದಿಂದ ನಿರ್ದೇಶಿಸಿರುವ ಹೆಸರುಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಗಮನಿಸಬಹುದು.

'ಬ್ರಾಹ್ಮಣ' ಸಮುದಾಯವು ಬಳ್ಳಾರಿ ಪರಿಸರದಲ್ಲಿ ಅಲ್ಪಸಂಖ್ಯಾತರಾಗಿದ್ದು, ಇವರು ಭಾರತಕ್ಕೆ ಆಗಮಿಸಿದ ಆರ್ಯಮೂಲ ಸಮುದಾಯದವರೆಂದು ಹೇಳಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಭಾರತಕ್ಕೆ ಬಂದು ನೆಲೆಯೂರಿದ ಆರ್ಯರು ಪಿತೃಪ್ರಧಾನ ಸಮಾಜದ ಅನುಯಾಯಿಗಳಾಗಿದ್ದು, ಪ್ರಕೃತಿ ಮತ್ತು ಶಕ್ತಿ ಆರಾಧಕರಾಗಿದ್ದುದು ಚರಿತ್ರೆಯಿಂದ ತಿಳಿಯುತ್ತದೆ. ಇವರು ಪ್ರಕೃತಿ ಮತ್ತು ಶಕ್ತಿ ಪೂಜೆಯಿಂದ ಕಲಾಂತರದಲ್ಲಿ ವೇದಗಳು, ಉಪನಿಷತ್ತುಗಳು ರಚನೆಗೊಂಡ ನಂತರ ವಿಷ್ಣು, ಬ್ರಹ್ಮ, ಲಕ್ಷ್ಮಿ ನಾರಾಯಣ ಮುಂತಾದ ದೇವರುಗಳನ್ನು ಪೂಜಿಸುವ ಪದ್ಧತಿ ಆರಂಭವಾಯಿತೆನ್ನಬಹುದು. ಕ್ರಿ.ಶ. ೬ನೇ ಶತಮಾನದ ಹೊತ್ತಿಗೆ ವೈಷ್ಣವ ಧರ್ಮ ಪುನರುಜ್ಜೀವನಗೊಂಡಿತು. ಬಹುತೇಕ ಕನ್ನಡ ರಾಜಮನೆತನಗಳು ಆರಂಭದಲ್ಲಿ ಶ್ರೀ ವೈಷ್ಣವ ಧರ್ಮವನ್ನು ನಾಡಿನ ರಾಜಧರ್ಮವನ್ನಾಗಿ ಸ್ವೀಕರಿಸಿದ್ದು ಶಾತವಾಹನರಿಂದ ವಿಜಯನಗರದ ಅರಸರವರೆಗೆ ಕಂಡುಬರುತ್ತದೆ. ಮುಂದೆ ಧರ್ಮವು ಎರಡು ಕವಲುಗಳಾಗುತ್ತವೆ. ಶಿವನನ್ನು ಪೂಜಿಸುವ ಸಮುದಾಯವು ಶೈವ ಶೈವರೆಂದು, ವಿಷ್ಣುವನ್ನು ಪೂಜಿಸುವ ಸಮುದಾಯವು ಶ್ರೀ ವೈಷ್ಣವರೆಂದು ಕರೆಯಲಾಗಿದೆ. ಬ್ರಾಹ್ಮಣರಲ್ಲಿಯೂ ಶೈವ ಮತ್ತು ವೈದಿಕ ಬ್ರಾಹ್ಮಣರೆಂಬ ಎರಡು ಕವಲುಗಳಿವೆ. ಈ ಕವಲುಗಳಿಗೆ ಸಂಬಂಧಿಸಿದಂತೆ ವಿವರವಾದ ಅಧ್ಯಯನ ಮುಂದಿನ ಅಧ್ಯಾಯದಲ್ಲಿದೆ ಇಲ್ಲಿ ಬ್ರಾಹ್ಮಣರ ಹೆಸರುಗಳನ್ನು ತಲೆಮಾರುಗಳಲ್ಲಿ ಗುರುತಿಸಲಾಗಿದೆ.

**ಪುರುಷರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ರಾಮಚಂದ್ರಶರ್ಮ | ವೇದಮೂರ್ತಿ | ಚೇತನ್ |
| ವಿಷ್ಣುಶರ್ಮ | ನಾರಾಯಣಶಾಸ್ತ್ರಿ | ಮಾರುತಿ |

| | | |
|---|---|---|
| ಹನುಮಂತ ಜೋಯಿಸ | ಕೃಷ್ಣಮೂರ್ತಿ ಜೋಯಿಸ | ಗುರುರಾಜ್ |
| ರಾಘಪ್ಪಾಚಾರ್ಯ | ವೇಣುಗೋಪಾಲಚಾರ್ಯ | ಕಿರಣ್ |
| ಗೋಪಾಲಭಟ್ಟ | ಅನಿಲಕುಮಾರ | ವಿಲಾಸ್ |

**ಸ್ತ್ರೀಯರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ಭಾಗ್ಯಮ್ಮ | ರುಕ್ಮಣಮ್ಮ | ಕೌಸಲ್ಯ |
| ಭೀಮವ್ವ | ರಾಧಮ್ಮ | ಪದ್ಮಾವತಿ |
| ಸೀತಾಬಾಯಿ | ಯಶೋಧಮ್ಮ | ವೇದಾವತಿ |
| ಜಾನಕೀಬಾಯಿ | ರಮಾಮಣಿ | ಅಮೃತ |
| ಶ್ಯಾಮಲಬಾಯಿ | ಕೃಷ್ಣಾಬಾಯಿ | ಪ್ರಣೀತ |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ ಒಂದನೇ ತಲೆಮಾರು (೬೦ ವರ್ಷದಿಂದ ಮೇಲ್ಪಟ್ಟು) ಪಟ್ಟಿಯಲ್ಲಿರುವ ಈ ಸಮುದಾಯದ ಹೆಸರುಗಳು ಸಂಪೂರ್ಣವಾಗಿ ದೈವಮೂಲದ ಹೆಸರುಗಳಿರುವುದನ್ನು ಗಮನಿಸಬಹುದು. ಎರಡನೇ ತಲೆಮಾರು (೩೦ ರಿಂದ ೬೦) ಪಟ್ಟಿಯಲ್ಲಿರು ಹೆಸರುಗಳು ಸ್ವಲ್ಪ ಪ್ರಮಾಣದಲ್ಲಿ ದೈವಮೂಲ ಹೆಸರುಗಳು ಕಡಿಮೆಯಾಗಿರುವುದನ್ನು ನೋಡಬಹುದು. ಹಾಗೂ ೩ನೇ ತಲೆಮಾರು (ಹುಟ್ಟಿನಿಂದ ೩೦ರವರೆಗೆ) ಪಟ್ಟಿಯಲ್ಲಿರುವ ಹೆಸರುಗಳನ್ನು ಗಮನಿಸಿದಾಗ, ಸ್ವಲ್ಪ ಪ್ರಮಾಣದಲ್ಲಿ ದೈವಮೂಲದ ಹೆಸರುಗಳನ್ನು ನೋಡಬಹುದು. ಇನ್ನುಳಿದವು ಆಧುನಿಕತೆಗೆ ತೆರೆದುಕೊಂಡಿವೆ.

ಲಿಂಗಾಯತ ಸಮುದಾಯವು ಮೂಲತಃ ಲಿಂಗಾರಾಧಕರಾಗಿದ್ದು, ಏಕದೇವೋಪಾಸನೆಯನ್ನು ಒಪ್ಪಿಕೊಂಡವರಾಗಿದ್ದಾರೆ. ಈ ಸಮುದಾಯವು ಮುಖ್ಯವಾಗಿ ಎರಡು ಪಂಗಡಗಳಿಂದ ಗುರುತಿಸಕೊಳ್ಳುತ್ತದೆ. ಒಂದು ಶೈವಧರ್ಮ (ಶಿವಾರಾಧಕರು) ಇನ್ನೊಂದು ಬಸವಣ್ಣನಿಂದ ಸ್ಥಾಪಿಸಲ್ಪಟ್ಟ ವೀರಶೈವ ಧರ್ಮ. ಮುಖ್ಯವಾಗಿ ವೀರಶೈವರಲ್ಲಿ ಅನೇಕ ಉಪಪಂಗಡಗಳಿವೆ. ಪಂಚಾಚಾರ ಸಾಧು, ಬಣಜಿಗ, ಗಾಣಿಗ, ಹೂಗಾರ, ಕುಂಬಾರ, ಮಡಿವಾಳ ಹೀಗೆ ವಿವಿಧ ರೀತಿಯಲ್ಲಿವೆ. ಇವರು ಒಂದೇ ಸಂಸ್ಕೃತಿಯನ್ನು ಅನುಸರಿಸುತ್ತಾರೆ. ಆದರೆ ಸಾಮಾಜಿಕವಾಗಿ ವೈವಾಹಿಕ ಸಂಬಂಧಗಳಂತಹ ಸಂಗತಿಗಳಲ್ಲಿ ಇವರ ಒಳಪಂಗಡಗಳ ಭಿನ್ನತೆಯಿರುವುದು ಕಾಣಬಹುದು.

ಲಿಂಗಾಯಿತರಿಗೆ ವೀರಭದ್ರ, ಈಶ್ವರ, ಬಸವ ಮತ್ತು ಶರಣರು ಆರಾಧ್ಯ ದೈವಗಳಾಗಿದ್ದು, ಅವರ ಹೆಸರುಗಳು ಕೂಡಾ ಈ ದೈವಗಳ ಪ್ರೇರಣೆಯನ್ನು ಪಡೆದುಕೊಂಡಿವೆ. ಅಲ್ಲದೆ ಶ್ರೀಶೈಲ, ಉಜ್ಜಯಿನಿ, ಕಾಶಿ, ಕೇದಾರ, ಕಲ್ಯಾಣ ಈ ಕ್ಷೇತ್ರಗಳು ಇವರಿಗೆ ಪವಿತ್ರ ಸ್ಥಳಗಳಾಗಿವೆ. ಶಿವ

ಪಾರ್ವತಿ ಮತ್ತು ಶಿವನ ಗಣಗಳು ಮತ್ತು ಅವರ ವಿವಿಧ ನಾಮಗಳು ಲಿಂಗಾಯಿತರಿಗೆ ಹೆಸರುಗಳಾಗಿರುವುದೇ ಹೆಚ್ಚು. ಉತ್ತರ ಕರ್ನಾಟಕದಲ್ಲಿ ಈ ಜನಾಂಗ ಹೆಚ್ಚು ಇದ್ದು ಬಸವಾದಿ ಶರಣರು ಅಲ್ಲದೆ ಮಠದ ಪರಂಪರೆಯ ಸಿದ್ಧಲಿಂಗಯತಿ, ಅನ್ನದಾನೇಶ್ವರ, ಶಿವಕುಮಾರ, ಕಲ್ಮೇಶ್ವರ ಇತ್ಯಾದಿ ಅನೇಕ ಶರಣರ ಹೆಸರುಗಳನ್ನು ಈ ಭಾಗದಲ್ಲಿ ಇಟ್ಟುಕೊಂಡಿರುವುದು ತಿಳಿಯುತ್ತದೆ. ಅಂತೆಯೇ ಬಳ್ಳಾರಿ ಪರಿಸರದಲ್ಲಿ ಕೊಟ್ಟೂರಿನ ಕೊಟ್ಟೂರೇಶ್ವರ, ಉಜ್ಜನಿಯ ಮರುಳಸಿದ್ದೇಶ್ವರ, ಕೊಪ್ಪಳದ ಗವಿಸಿದ್ಧೇಶ್ವರ, ನಾಗಲಾಪುರದ ವಪ್ಪತ್ತೇಶ್ವರ, ನಾಯಕನಹಟ್ಟಿಯ ತಿಪ್ಪೇಸ್ವಾಮಿ, ಚೆಳ್ಳಗುರ್ಕಿಯ ಎರ್ರಿತಾತ, ಸಂಡೂರಿನ ಕುಮಾರಸ್ವಾಮಿ, ಬಳ್ಳಾರಿ ಅವದೂತರು, ಮೋಕಾದ ಮಲ್ಲಿಕಾರ್ಜುನ ಈ ಎಲ್ಲಾ ದೇವತೆಯ ಹೆಸರುಗಳು ಈ ಸಮುದಾಯದಲ್ಲಿ ಹೆಚ್ಚಿರುವುದನ್ನು ಕಾಣಬಹುದಾಗಿದೆ.

ಉದಾಹರಣೆಗಾಗಿ ಲಿಂಗಾಯತ ಸಮುದಾಯದ ಹೆಸರುಗಳನ್ನು ಮಾದರಿಗಾಗಿ ಗಮನಿಸಬಹುದು. ರುದ್ರಯ್ಯ, ಸಿದ್ಧನಗೌಡ ಪಾಟೀಲ, ಬಸಪ್ಪ ಪಾಟೀಲ, ಶಿವಾರೆಡ್ಡಿ, ಸೋಮಶೇಖರ ಗೌಡ, ಚಂದ್ರಶೇಖರ, ಗಂಡಿ ಬಸವರಾಜ, ವೀರೇಶಪ್ಪ, ಮಲ್ಲಿಕಾರ್ಜುನ ರೆಡ್ಡಿ, ಮಂಜುನಾಥ ಪಾಟೀಲ, ಮಲ್ಲಯ್ಯ ಸ್ವಾಮಿ, ಯರ್ರಿಸ್ವಾಮಿ ಬಣಕಾರ, ಮಹಾದೇವ ಬಣಕಾರ, ನಿತೀಶ್‌ಗೌಡ, ಪ್ರಕಾಶ್‌ಗೌಡ, ಅರುಣ್‌ಕುಮಾರ, ಸ್ವರೂಪನಂದ ಈ ಹೆಸರುಗಳನ್ನು ಗಮನಿಸಿದಾಗ ೩೦ ರಿಂದ ೪೦ ವಯಸ್ಸಿನ ಜನರಲ್ಲಿ ದೈವಮೂಲದ ವ್ಯಕ್ತಿನಾಮಗಳನ್ನು ಹೆಚ್ಚಾಗಿ ಕಾಣುತ್ತೇವೆ. ಮೂವತ್ತರಿಂದ ಕೆಳಗಿನ ವಯಸ್ಸಿನ ಮಕ್ಕಳ ಹೆಸರುಗಳು ಕಡಿಮೆ ದೈವಮೂಲದವುಗಳಾಗಿವೆ. ಇಲ್ಲಿ ಗೌಡ, ಬಣಕಾರ, ರೆಡ್ಡಿ, ಪಾಟೀಲ ಎನ್ನುವ ವಾರ್ಗಿಕಗಳು ಅವರ ಹೆಸರಲ್ಲಿ ಇರುವುದನ್ನು ಕಾಣುತ್ತೇವೆ.

ವೈಶ್ಯ ಸಮುದಾಯವು ಬಳ್ಳಾರಿ ಪರಿಸರದಲ್ಲಿದ್ದು, ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತಾರೆ. ವೈಶ್ಯರು ವಿಷ್ಣು ಆರಾಧಕರಾಗಿದ್ದು, ಈ ಮೂಲದ ಹೆಸರುಗಳನ್ನೇ ವ್ಯಕ್ತಿನಾಮಗಳನ್ನಾಗಿ ನಿರ್ದೇಶಿಸಿಕೊಳ್ಳುವುದು ತಿಳಿಯುತ್ತದೆ. ಉದಾಹರಣೆಗೆ ತಿಮ್ಮಯ್ಯಶೆಟ್ಟಿ, ಕೃಷ್ಣಪ್ಪ, ವೆಂಕಟೇಶ ಶೆಟ್ಟಿ, ಗೋಪಾಲಗುಪ್ತ, ವೆಂಕಟಮ್ಮ, ಸುಬ್ಬಲಕ್ಷ್ಮಿ, ರಾಧಮ್ಮ, ತಿಪ್ಪಮ್ಮ, ತಿರುಮಲ, ಲಕ್ಷ್ಮಣ ಶೆಟ್ಟಿ, ನಾರಾಯಣಮ್ಮ, ಈರಮ್ಮ ಈ ರೀತಿಯ ಹೆಸರುಗಳಿದ್ದು ಹೆಚ್ಚಾಗಿ ಒಂದು ಮತ್ತು ಎರಡನೇ ತಲೆಮಾರಿನಲ್ಲಿ ದೈವಮೂಲದ ಹೆಸರುಗಳಿದ್ದು, ೩ನೇ ತಲೆಮಾರಿನಲ್ಲಿ ವಾರ್ಗಿಕಗಳಾದ 'ಶೆಟ್ಟಿ' ಗುಪ್ತ ಎಂಬ ವಾರ್ಗಿಕಗಳಿರದೇ ಕೇವಲ ಹೆಸರುಗಳು ಮಾತ್ರ ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ ಹರೀಶ್, ತಿಮ್ಮರಾಜ್, ಪವನ್, ಗೋವರ್ಧನ್, ಶೃತಿ, ಚೇತನ್, ಪಲ್ಲವಿ, ವೀಣಾ ಈ ರೀತಿಯ ಹೆಸರುಗಳು ಕಂಡುಬರುವುದನ್ನು ಕಾಣುತ್ತೇವೆ.

ವಿಶ್ವಕರ್ಮ ಸಮುದಾಯದವರು ಹೆಚ್ಚಾಗಿ ವೈದಿಕ ಧರ್ಮದ ಆಚರಣೆಗಳನ್ನು ಅನುಸರಿಸುತ್ತಾರೆ. ಇವರ ಮೂಲದೈವ ಬ್ರಹ್ಮನೆಂದು ನಂಬಿದ್ದಾರೆ. ಇಂದು ತಿಂತಿಣಿಯ ಮೌನೇಶ್ವರನನ್ನು ತಮ್ಮ ಆರಾಧ್ಯ ದೈವವೆಂದು ಪೂಜಿಸುತ್ತಾರೆ. ಹೆಚ್ಚಾಗಿ ಇವರ ವ್ಯಕ್ತಿನಾಮಗಳು ವೈದಿಕ ಮೂಲದ ಮತ್ತು

ಶೈವಮೂಲದ ದೈವಗಳನ್ನೇ ಹೋಲುತ್ತವೆ. ಅಲ್ಲದೆ ಇವರ ಹೆಸರಿನ ಉತ್ತರ ಭಾಗದಲ್ಲಿ ಆಚಾರಿ, ಶಿಲ್ಪಿ, ಅಯ್ಯ ಮುಂತಾದ ವಾರ್ಗಿಕಗಳು ಕಂಡುಬರುತ್ತವೆ.

ಹೀಗೆ ಇನ್ನು ಅನೇಕ ಮೇಲ್ವರ್ಗಗಳನ್ನು ಶೈವ ಮತ್ತು ವೈಷ್ಣವ ಧರ್ಮಕ್ಕೆ ಸಂಬಂಧಿಸಿದಂತಹ ದೈವಮೂಲ ವ್ಯಕ್ತಿನಾಮಗಳನ್ನು ಬಳ್ಳಾರಿ ಪರಿಸರದಲ್ಲಿ ಕಾಣುತ್ತೇವೆ. ಒಟ್ಟಾರೆಯಾಗಿ ಇತ್ತೀಚಿನ ಹೆಸರುಗಳಲ್ಲಿ ವೃತ್ತಿವಾಚಿ, ಸಂಬಂಧವಾಚಿ ವಾರ್ಗಿಕಗಳು ಕಣ್ಮರೆಯಾಗುತ್ತವೆ. ಮೇಲಾಗಿ ಎಲ್ಲ ವರ್ಗಗಳ ಜನರೂ ಯಾವ ದೈವಮೂಲದ ಹೆಸರುಗಳನ್ನು ಸಹಾ ನಿರ್ದೇಶಿಸಿಕೊಳ್ಳಬಹುದಾಗಿದೆ. ಈ ಹಿಂದೆ ಆ ರೀತಿಯಾದ ಸಂದರ್ಭಗಳಿರಲಿಲ್ಲ. ಕೆಳವರ್ಗದ ಜನರು ಮೇಲ್ವರ್ಗದ ದೇವತೆಗಳ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡಲು ಹಿಂಜರಿಯುತ್ತಿದ್ದರು.

ಮುಸ್ಲಿಂ ಜನಾಂಗದಲ್ಲಿ ದೇವರೊಬ್ಬನೇ ಇರುವುದರಿಂದ 'ಅಲ್ಲಾ'ನ ಗುಣ ಸ್ವಭಾವ, ಕರ್ತವ್ಯಗಳನ್ನು ಹೇಳುವ ವರ್ಣನಾತ್ಮಕ ಹೆಸರುಗಳು, ಮುಸ್ಲಿಂ ಪುರುಷ ಹೆಸರುಗಳಲ್ಲಿ ಕಂಡುಬರುತ್ತವೆ. 'ಅಲ್ಲಾ'ನು ಪುರುಷ ದೈವವಾಗಿರುವುದಕ್ಕೆ ಇದು ಕಾರಣವಾಗಿರಬಹುದು. ಉದಾಹರಣೆಗೆ ಅಬ್ದುಲ್ ಮಾಲಿಕ್ (ಪ್ರಪಂಚದ ಒಡೆಯ), ರೆಹಮಾನ್ ಸಾಬ್ (ಅನುಕಂಪ ತೋರಿಸುವವನು), ಅಕ್ಬರ್ ಬಾಷಾ (ಶ್ರೇಷ್ಠ ಪರಮೋಚ್ಛ) ಸಾದಿಕ್‌ಬಾಷಾ (ಸೃಷ್ಟಿಸುವವನು) ಮುಂತಾದ ಹೆಸರುಗಳನ್ನು ನೋಡಬಹುದು.

ಮಹಮ್ಮದ್ ಪೈಗಂಬರ ಹೆಸರು ಮುಸ್ಲಿಂ ಸಮುದಾಯದ ಮಕ್ಕಳ ಮೇಲೆ ಗಾಢವಾದ ಪ್ರಭಾವ ಬೀರಿರುವಂತಿದೆ. ಉದಾಹರಣೆಗೆ ಮಹಮ್ಮದ್ ಸಲಾಂ, ಮಹಮ್ಮದ್ ಇಬ್ರಾಹಿಂ, ಲಜೀರ್ ಮಹಮ್ಮದ್, ಮಹಮ್ಮದ್ ಬಾಷ ಮುಂತಾದವುಗಳು.

ಮೇಲೆ ತಿಳಿಸಿದ ಮೇಲ್ವರ್ಗದವರು ಮತ್ತು ಮುಸ್ಲಿಂ ಸಮುದಾಯದ ಮಕ್ಕಳಿಗೆ ದುರುಗವ್ವ, ಮಾರೆವ್ವ, ದ್ಯಾಮವ್ವ, ಕರಿಯವ್ವ, ಸುಡುಗಾಡಪ್ಪ, ಹುಲುಗಪ್ಪ, ದುರುಗಪ್ಪ ಎನ್ನುವ ಹೆಸರುಗಳನ್ನು ಇಟ್ಟುಕೊಳ್ಳುವುದಿಲ್ಲ. ಆದರೆ ಕೆಳವರ್ಗದವರು ತಮ್ಮ ಮಕ್ಕಳಿಗೆ ಮೇಲ್ವರ್ಗದ ದೇವತೆಗಳ ಹೆಸರುಗಳನ್ನು ಸರಾಗವಾಗಿ ಇಟ್ಟುಕೊಳ್ಳುತ್ತಾರೆ.

### ೩.೨.೩. ದೈವತ್ವಕ್ಕೇರಿದ ದಾರ್ಶನಿಕರಿಗೆ ಸಂಬಂಧಿಸಿದ ವ್ಯಕ್ತಿನಾಮಗಳು

ಬಳ್ಳಾರಿ ಪರಿಸರದಲ್ಲಿ ವ್ಯಕ್ತಿಗಳಾಗಿದ್ದು, ದೈವತ್ವಕ್ಕೇರಿದ ದಾರ್ಶನಿಕರಿಗೇನೂ ಕಡಿಮೆಯಿಲ್ಲ. ಅವರು ತಮ್ಮ ದೈವೀಶಕ್ತಿಯ ಮೂಲಕ ಪವಾಡಗಳನ್ನು ಮಾಡಿ, ಜನರ ಸಮಸ್ಯೆಗಳನ್ನು, ಕಷ್ಟದ ಸಂದರ್ಭಗಳನ್ನು ಪರಿಹರಿಸಿದವರಾಗಿದ್ದಾರೆ. ಅಂತಹವರಲ್ಲಿ ಮುಖ್ಯವಾದ ಸ್ಥಾನವನ್ನು ಪಡೆದುಕೊಂಡವರೆಂದರೆ ಬಳ್ಳಾರಿ ಪರಿಸರದಲ್ಲಿರುವ ಅವಧೂತರು.

ಸಂತರಂತೆ ಅವದೂತರು ಸಹಾ ಲೌಕಿಕ ಬಂಧವನ್ನು ತಿರಸ್ಕರಿಸಿ, ಧ್ಯಾನಯೋಗದಂತಹ ಸಾಧನೆಯಲ್ಲಿ ನಿರತರಾಗಿ, ಗುರುವಿನ ಅನುಗ್ರಹ ಪಡೆದು, ಆಧ್ಯಾತ್ಮಿಕ ಅನುಭಾವವನ್ನು ಸಾಕ್ಷಾತ್ಕರಿಸಿ ಕೊಂಡವರು. ಇಂತಹ ಮಹಾನುಭಾವಿಗಳು ದೇಶದ ಪ್ರತಿಭಾಗದಲ್ಲಿಯೂ, ಪ್ರತೀ ತಲೆಮಾರಿನಲ್ಲಿಯೂ

ಆಗಾಗ್ಗೆ ಅವತರಿಸಿರುತ್ತಾರೆ. ಬದುಕಿನ ಜಂಜಾಟದಿಂದ ದೂರವಾಗಿ, ತಮ್ಮ ಸಾಧನೆಯಿಂದ ಅನುಭಾವದ ಚೇತನವಾಗಿ ಬೆಳೆಸಿದ್ದಾರೆ. ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ ಜನಸಾಮಾನ್ಯರನ್ನು ತನ್ನೆಡೆಗೆ ಸೆಳೆದುಕೊಂಡು, ಸರ್ವ ವರ್ಗದವರಿಂದ, ಸರ್ವಧರ್ಮದವರಿಂದ ಭಕ್ತಿಪೂರ್ವಕ ಮನ್ನಣೆ ಪಡೆದಿದ್ದಾರೆ.

"ಅವಧೂತ ಎಂದರೆ ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿ, ದಿಗಂಬರ, ವರ್ಣಾಶ್ರಮಗಳನ್ನು ಮೀರಿ, ಸನ್ಮಾರ್ಗದಲ್ಲಿ ನಡೆದು ಆತ್ಮನಲ್ಲಿಯೇ ವಿಹರಿಸುವವನು ಎಂದರ್ಥ." (ಕರಿಯಪ್ಪ ಜಿ. ಮಾಳಿಗೆ, ೨೦೦೮, ಪುಟ-೧) ದೈವಾನುಗ್ರಹ, ಗುರೂಪದೇಶ ಪಡೆದು ತನ್ನನ್ನು ತಾನೇ ಮರೆತು, ಲೋಕಕ್ಕೆ ಮರುಳನಂತೆ ಕಂಡು, ದೇಶಸಂಚಾರ ಮಾಡಿ ಹೋದಲ್ಲೆಲ್ಲಾ ತನ್ನ ಮಹಿಮೆಯನ್ನು ತೋರಿ, ಕೊನೆಗೊಂಡು ಊರಲ್ಲಿ ನೆಲೆನಿಂತು ಸಮಾದಿ ಹೊಂದಿದವರು.

ಕರ್ನಾಟಕದಲ್ಲಿ ಅವಧೂತ ಮಾರ್ಗ ಎನ್ನುವುದು ಬೆಳಕಿಗೆ ಬಂದಿದ್ದು ಸು. ೧೨ನೇ ಶತಮಾನದಿಂದ ಎಂದೆನ್ನಬಹುದು. "ಮೇಲುವರ್ಗದವರೆಲ್ಲಾ ಶೈವ, ವೈಷ್ಣವದಂತಹ ಧರ್ಮಗಳಿಗೆ ಹಂಚಿಹೋದಾಗ, ಸಮಾನತೆಯ ಸೌಜನ್ಯದಿಂದ, ಆಧ್ಯಾತ್ಮಿಕ ಚರ್ಚೆಯಿಂದ ವಂಚಿತವಾದ ಕೆಳವರ್ಗದ ಜನತೆ, ವೈಧಿಕ ವಿರೋಧಿ ನಡತೆಯನ್ನು ಹುಟ್ಟುಹಾಕಿದ ಪರಿಣಾಮವಾಗಿಯೇ ವಾಮಾಚಾರದಂತಹ ಪಂಥಗಳು ನಮ್ಮಲ್ಲಿ ಭಾಷೆ ತೊರೆದು, ಎದ್ದು ನಿಂತವು ಎನಿಸುತ್ತದೆ. ಸಿದ್ದಸಂಪ್ರದಾಯವು ಇಂತಹ ನೆಲೆಯಿಂದೆದ್ದ ಮಹಾಸಾಗರವಾಗಿದೆ. ಈ ಸಾಗರದ ಅಲೆಗಳಾದ ನಾಥ, ಆರೂಢ, ಅವಧೂತ ಮೊದಲಾದ ಪಂಥಗಳು ಮದ್ಯಕಾಲೀನ ಕರ್ನಾಟಕದಲ್ಲಿ ಭಕ್ತಿಪಂಥದ ಶಿಷ್ಟಧರ್ಮಗಳ ಭುಜಕ್ಕೆ ಭುಜಕೊಟ್ಟು ಸೆಣಸಿದ ಇತಿಹಾಸವಿದೆ." (ಚಕ್ರವರ್ತಿ ಶ್ರೀನಿವಾಸ ಗೋಪಾಲಚಾರ್ಯ (ಸಂ), ೧೯೮೪, ಸಂಸ್ಕೃತ ಕನ್ನಡ: ಶಬ್ದಕೋಶ, ಭಾಗ-೩)

೧೨ನೇ ಶತಮಾನದ ವಚನಕಾರರ ಅಥವಾ ಶರಣರ ಇಷ್ಟಲಿಂಗ ಸಂಸ್ಕೃತಿಯನ್ನು ನಿರಾಕರಿಸುವ ಆತ್ಮಲಿಂಗ ವಾದಿಗಳ (ಅಜಗಣ್ಣ, ಅಲ್ಲಮ, ರೇವಣಸಿದ್ದ, ಇವರಲ್ಲಿ ಅವಧೂತ ಲಕ್ಷಣ ಕಾಣಬಹುದು) ಈ ಪಂಥ ಮುಂದೆ ಕಲ್ಯಾಣದಲ್ಲಿ ಉದ್ಭವವಾದ ಸಾಂಸ್ಕೃತಿಕ ಬಿಕ್ಕಟ್ಟನ್ನು ಎದುರಿಸಲಾರದ ಪರಿಸ್ಥಿತಿ ನಿರ್ಮಾಣವಾದಾಗ, ಅಲ್ಲಿಂದ ಚದುರಿದ ಶರಣರು ವಿವಿಧ ಕಡೆ ನೆಲೆಸಿರುವಂತೆ ಹಂಪಿ ಪರಿಸರದಲ್ಲೂ ನೆಲೆಸಿದ್ದಾರೆ. ಅವರುಗಳೇ ವಿಜಯನಗರ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರು, ಆ ವಿರಕ್ತರಲ್ಲಿ ಕೆಲವರು ಅವಧೂತ ಲಕ್ಷಣಗಳನ್ನು ಹೊಂದಿದ್ದರೆಂದು ತಿಳಿಯುತ್ತದೆ.

೧೯ ಮತ್ತು ೨೦ನೇ ಶತಮಾನದ ಆಜು ಬಾಜಿನಲ್ಲಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಹೆಚ್ಚಿನ ಸಂಖ್ಯೆಯ ಅವಧೂತರನ್ನು ಕಾಣುತ್ತೇವೆ. ಚಾರಿತ್ರಿಕವಾಗಿ ನೋಡಿದರೆ ಹಂಪಿ ಪರಿಸರವೇ ಇದಕ್ಕೆ ಕಾರಣವಾಗಿರಬಹುದು. ಅದೆಷ್ಟೋ ಕವಿಗಳಿಗೆ, ಪಂಡಿತರಿಗೆ, ವಿರಕ್ತರಿಗೆ, ಶರಣರಿಗೆ, ದಾಸರಿಗೆ, ಅನುಭಾವಿಗಳಿಗೆ ಈ ಪ್ರದೇಶವು ಆಶ್ರಯದ ನೆಲೆ ಮತ್ತು ಸಂಚಾರದ ಭೂಮಿಯಾಗಿದೆ.

ಹಂಪಿಯ ಮಾದಿರಾಜ, ಹರಿಹರ, ರಾಘವಾಂಕ, ದೇಪರಾಜ, ಮಹಾಲಿಂಗದೇವ, ಲಕ್ಕಣ್ಣದಂಡೇಶ, ಗುರುಬಸವ, ಚಾಮರಸ, ಕರಸ್ಥಲ ನಾಗಿದೇವ, ಕನಕದಾಸ, ಪುರಂದರದಾಸ, ವಿರೂಪಾಕ್ಷ ಪಂಡಿತ ಹೀಗೆ ಕವಿ ಪರಂಪರೆ ಮತ್ತು ಅನುಭಾವ ಪರಂಪರೆ ಈ ನೆಲದಲ್ಲಿ ಬೆಳೆದುಬಂದಿದೆ. ೨೦ನೇ ಶತಮಾನದ ವೇಗದ ಯುಗದಲ್ಲಿ, ವೈಜ್ಞಾನಿಕ ಕ್ಷೇತ್ರಕ್ಕೆ ಆಶ್ಚರ್ಯ ಮತ್ತು ಕುತೂಹಲ ಮೂಡಿಸುವಂತೆ ಇವರ ಅವತಾರವಾಗಿದೆ. ಇವರುಗಳೆಲ್ಲಾ ಭಕ್ತ ಜನತೆಯ ಆರಾಧ್ಯ ದೈವವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಸ್ಪಷ್ಟ. ಇಂತಹ ದೈವೀಪುರುಷರು ಬಳ್ಳಾರಿ ಪರಿಸರದ ಎಲ್ಲ ವರ್ಗಗಳ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ.

**ಬಳ್ಳಾರಿ ಪರಿಸರದಲ್ಲಿರುವ ಅವಧೂತರು**

೧. ಚೇಳಗುರಿಕೆ ಎರಿತಾತ

೨. ಎಮ್ಮಿಗನೂರು ಜಡೆಪ್ಪತಾತ

೩. ದಮ್ಮೂರು ವೆಂಕಾವಧೂತ

೪. ಕೊಳಗಲ್ಲು ಎರಿಬಸವತಾತ

೫. ಸಿಂಧಿಗೇರಿ ಮಲ್ಲಪ್ಪತಾತ

೬. ಹಂಪಿ ಶಿವರಾಮಧೂತ

೭. ಹೇರೂರು ವಿರುಪಾವಧೂತರು

೮. ಕಾಳಘಟ್ಟದ ರುದ್ರಾವಧೂತರು

೯. ಬೈಲುವದ್ದಿಗೇರಿ ಸುಡುಗಾಡಪ್ಪ ತಾತ

೧೦. ಕುಡಿತಿನಿ ಶಂಕ್ರಪ್ಪತಾತ

೧೧. ಕೊಟಗಿನಹಾಳ ಬಸಪ್ಪತಾತ

೧೨. ಹೊಸಪೇಟೆ ಕೆಂಪಾವಧೂತ

೧೩. ಕಾಳಘಟ್ಟ ರುದ್ರಾವಧೂತ

೧೪. ಹರಗಿನ ದೋಣಿ ಬುಗ್ಗಪ್ಪತಾತ

ಈ ಮೇಲಿನ ಅವಧೂತರಲ್ಲಿ ಹೆಚ್ಚಿನ ಅವಧೂತರು ಬೇರೆ ಬೇರೆ ಕಡೆಯಿಂದ ಬಂದವರಾಗಿದ್ದಾರೆ. ಇವರೆಲ್ಲರೂ ಬಳ್ಳಾರಿ ಪರಿಸರದಲ್ಲಿ ನೆಲೆನಿಂತು ಇಲ್ಲೇ ಜೀವಸಮಾಧಿಯಾಗಿ ಜನಸಾಮಾನ್ಯರಲ್ಲಿ ದೈವೀಭಕ್ತಿಯನ್ನು ಮೂಡಿಸಿದ್ದಾರೆ. ಇಂದಿಗೂ ಕೂಡಾ ಅವಧೂತರ ಸಮಾದಿಗಳನ್ನು ದೇವಸ್ಥಾನ ವೆಂಬಂತೆ ನೋಡಿ ಅವುಗಳಿಗೆ ಪೂಜೆಮಾಡುತ್ತಿದ್ದಾರೆ.

ಮೇಲ್ವರ್ಗ ಸಮುದಾಯಗಳ ಹೆಸರುಗಳಲ್ಲಿ ಹೆಚ್ಚು ಪ್ರಮಾಣದಲ್ಲಿಯೇ ಅವಧೂತರ ಹೆಸರುಗಳನ್ನು ಕಾಣಬಹುದು. ಹಾಗೆಯೇ ಕೆಳವರ್ಗದ ಸಮುದಾಯಗಳಲ್ಲೂ ಸಮೇತ, ಅವಧೂತರನ್ನೂ ದೈವವೆಂಬಂತೆ ಪೂಜಿಸಿ, ಅವರ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುತ್ತಿದ್ದಾರೆ. ಉದಾಹರಣೆಗೆ ಬಳ್ಳಾರಿ ಪರಿಸರದಲ್ಲಿ ಈ ಹೆಸರುಗಳನ್ನು ನೋಡಬಹುದು. ಬಣಕಾರ ಯರ್ರಿಸ್ವಾಮಿ, ವೆಂಕನಗೌಡ, ಮಾದರ ಬಸಪ್ಪ, ನಾಯಕರ ಸುಡುಗಾಡಪ್ಪ, ಜಡಿಯಪ್ಪಸ್ವಾಮಿ, ವಿರೂಪಾಕ್ಷಯ್ಯ, ಶಂಕರಿ, ರುದ್ರಪ್ಪ, ಬುಗ್ಗಪ್ಪಗೌಡ, ಹರಿಜನ ಬಸಪ್ಪ, ಮಲ್ಲಿಕಾರ್ಜುನಗೌಡ, ಸಿಂಧಿಗೇರಪ್ಪ, ಜಡೇಶ ಕುರುಬರ ಈ ಹೆಸರುಗಳು ಬಳ್ಳಾರಿ ಪರಿಸರದಲ್ಲಿ ಮೇಲ್ವರ್ಗ ಮತ್ತು ಕೆಳವರ್ಗಗಳಲ್ಲಿ ಕಾಣಬಹುದಾಗಿದೆ. ಈ ಮೇಲೆ ಮಾದರಿಗಾಗಿ ಬಣಕಾರ, ಗೌಡ, ಮ್ಯಾದಾರ್, ಲಿಂಗಾಯತ, ನಾಯಕ, ಕುರುಬ ಹೆಸರಿನ ವ್ಯಕ್ತಿನಾಮಗಳನ್ನು ಮಾತ್ರ ತೋರಿಸಲಾಗಿದೆ. ಮತ್ತು ಬಳ್ಳಾರಿ ಪರಿಸರದಿಂದಾಚೆಗೂ ಅವಧೂತರ ಪ್ರಭಾವವನ್ನು ಗುರುತಿಸಬಹುದಾಗಿದೆ.

### ೩.೩. ಸ್ಥಳನಾಮಗಳ ಸ್ವರೂಪ

ಸ್ಥಳನಾಮಗಳ ಅಧ್ಯಯನವು ಅಪಾರ ಸಾಧ್ಯತೆಯುಳ್ಳದ್ದು. ಬಹುಶಿಸ್ತೀಯ ಅಧ್ಯಯನದ ನೆಲೆಯಲ್ಲಿ ಸ್ಥಳನಾಮಗಳನ್ನು ವಿಶ್ಲೇಷಿಸುತ್ತಾ ಹೋದಂತೆಲ್ಲಾ ಅವುಗಳ ಸಾಂಸ್ಕೃತಿಕ, ಜಾನಪದೀಯ ಹಾಗೂ ಭಾಷಿಕ ಮಹತ್ವಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಸೂಕ್ಷ್ಮ ಹಾಗೂ ತರ್ಕಬದ್ಧವಾಗಿ ವೈಜ್ಞಾನಿಕ ದೃಷ್ಟಿಯಿಂದ ನಡೆಸಬೇಕಾದ ಅಧ್ಯಯನ ವಿಷಯಗಳ ಪೈಕಿ ಸ್ಥಳನಾಮ ಅಧ್ಯಯನವೂ ಸಹ ಒಂದು. ಇತ್ತೀಚಿನ ದಿನಗಳಲ್ಲಿ ಪ್ರಪಂಚದಾದ್ಯಂತ ಹೆಚ್ಚು ಜನರ ಕುತೂಹಲವನ್ನು ಕೆರಳಿಸಿ, ತನ್ನ ಕಡೆಗೆ ಆಕರ್ಷಿಸಿರುವ ಸ್ಥಳನಾಮ ವಿಜ್ಞಾನ ಮಾನವನ ಬದುಕಿನಲ್ಲಿ ಒಂದು ಅನಿವಾರ್ಯ ಪ್ರಕ್ರಿಯೆಯಾಗಿ ಬೆಳೆದುಬಂದಿದೆ. ಬಹಳ ಗಂಭೀರವಾಗಿ ಸ್ಥಳನಾಮಗಳ ವಿವಿಧ ಘಟಕಗಳನ್ನು ವಿಶ್ಲೇಷಿಸಿದರೆ ಅನೇಕ ಹೊಸ ಹೊಸ ವಿಚಾರಗಳು ಬೆಳಕಿಗೆ ಬರುತ್ತವೆ. ಅದು ಮಾನವನ ಹುಟ್ಟು, ಬೆಳವಣಿಗೆ, ಸಂಸ್ಕೃತಿಗೆ ನಾಗರಿಕತೆಯ ಹೊಸದೃಷ್ಟಿ ಮತ್ತು ಜೀವಂತ ಪಳೆಯುಳಿಕೆಗಳ ಮಹತ್ವವನ್ನು ಖಚಿತಪಡಿಸುತ್ತದೆ. ಈಚೆಗೆ ಇದೊಂದು ಅಂತರ್‌ಶಿಸ್ತೀಯ ಅಧ್ಯಯನವಾಗಿ ಬೆಳೆಯುತ್ತದೆ. ಮಾನವಶಾಸ್ತ್ರ, ಸಮಾಜಶಾಸ್ತ್ರ, ಭೂಗೋಳ, ಇತಿಹಾಸ, ಭಾಷಾವಿಜ್ಞಾನ, ಸಾಹಿತ್ಯ, ಜಾನಪದ, ಪುರಾತತ್ವ, ಶಾಸನಶಾಸ್ತ್ರ ಜಲ, ಶಿಲ, ವಿಜ್ಞಾನಗಳಲ್ಲದೆ ಕೆಲವೊಮ್ಮೆ ಸಸ್ಯ ಮತ್ತು ಪ್ರಾಣಿ ವಿಜ್ಞಾನಗಳಂಥ ಶಿಸ್ತುಗಳ ಜೊತೆ ಇದನ್ನು ಅನ್ವಯಿಸಿ ನೋಡಿದಾಗ ಸ್ಥಳನಾಮಗಳ ವಸ್ತುನಿಷ್ಟ ಸತ್ವ ಗೋಚರವಾಗುತ್ತದೆ.

ಇಂಗ್ಲಿಷಿನಲ್ಲಿ ಸ್ಥಳನಾಮಶಾಸ್ತ್ರಕ್ಕೆ Toponomy ಎಂಬ ಹೆಸರಿದೆ. ಇದು ಮೂಲತಃ ಗ್ರೀಕ್ ಭಾಷೆಯಿಂದ ಬಂದದ್ದು. Toponomy ಎಂಬುದು ಸ್ಥಳದ ಕ್ಷೇತ್ರದ ಅಧ್ಯಯನ ಎಂದರ್ಥ. ಇತ್ತೀಚಿಗೆ ಇದೊಂದು ಶಾಖೆಯಾಗಿ ಸುವ್ಯವಸ್ಥಿತ ಶಾಸ್ತ್ರವಾಗಿ ಬೆಳೆದುಬಂದಿದೆ. ಆದ್ದರಿಂದ ಅದನ್ನು a science of place-place names ಸ್ಥಳನಾಮಗಳನ್ನು ಕುರಿತು ಅಧ್ಯಯನ ಮಾಡುವ ವಿಜ್ಞಾನ ಎಂದೇ ವ್ಯಾಖ್ಯಾನಿಸಬಹುದು. ಸ್ಥಳನಾಮಗಳಿಗೆ ವಿವಿಧ ಕೋಶಗಳಲ್ಲಿ ಅನೇಕ ರೀತಿಯ ಮಾಹಿತಿಗಳು

ಲಭ್ಯವಾಗುತ್ತವೆ. Place name ಬಗ್ಗೆ ನ್ಯೂ ಎನ್ಸೈಕ್ಲೋಪೀಡಿಯಾ ಆಫ್ ಬ್ರಿಟಾನಿಕಾದಲ್ಲಿ ಹೀಗೆ ಹೇಳಿದೆ. "Designation of a Geographical Locality, as a town, river of mountain. The origins of such names are varied some derived from description of physical feature's (The new encyclopedia of britranica- Vol-VII, p.18).

ಸ್ಥಳನಾಮ ವಿಜ್ಞಾನ ಎಂಬುದು ತನ್ನ ನಿಜವಾದ ಅರ್ಥದಲ್ಲಿ ಮಾನವನ ವಾಸ್ತವ್ಯ ಸ್ಥಳಗಳನ್ನಷ್ಟೇ ಅಲ್ಲದೆ, ನಿರ್ವಸಿತ ಸ್ಥಳಗಳ ಹೆಸರಿನ ಅಧ್ಯಯನಗಳನ್ನು ಒಳಗೊಂಡಿದೆ. ಸ್ಥಳಗಳು, ಕ್ಷೇತ್ರಗಳು, ವಸಾಹತುಗಳು ಮುಂತಾದವುಗಳ ಹೆಸರಿಗೆ ಸಂಬಂಧಿಸಿದ ಅತ್ಯಂತ ಸೂಕ್ಷ್ಮ ವಿವರಗಳನ್ನು ಒಳಗೊಳ್ಳುವ ಈ ಅಧ್ಯಯನಕ್ಕೆ ಸ್ಥಳನಾಮ ವಿಜ್ಞಾನ ಎಂದು ಕರೆಯಲಾಗಿದೆ. ಶಾಸನಗಳಲ್ಲೂ ನಿರ್ದಿಷ್ಟ ವ್ಯಕ್ತಿ ಅಥವಾ ದೇವತೆಗೆ ದತ್ತಿಬಿಟ್ಟ ಭೂಮಿಯ ಮೇರೆಗಳನ್ನು ಉಲ್ಲೇಖಿಸುವ ಸಂದರ್ಭದಲ್ಲಿ ಸ್ಥಳಗಳನ್ನು ವಿವರಿಸುವ ಪ್ರವೃತ್ತಿಯನ್ನು ಕಾಣಬಹುದು. ಕೆಲವು ಶಾಸನಗಳು ಹಲವು ಕ್ಷೇತ್ರಗಳನ್ನು ವಿಸ್ತೃತ ಭೌಗೋಳಿಕ ಘಟಕದ (ಊರ ಹೆಸರುಗಳು) ಅಂಗವಾಗಿ ಅಥವಾ ಉಪ ಆಕೃತಿಮಾಗಳನ್ನು ಅಂಟಿಸುವುದರ ಮೂಲಕ ವಿವರಿಸುವ ಪ್ರವೃತ್ತಿ ಸ್ವಾರಸ್ಯಕರವಾಗಿದೆ. (ಆರ್ಕೆಮಣಿಪಾಲ್, ೧೯೮೯,- ಪುಟ-೩೦)

ಸ್ಥಳನಾಮಗಳ ಅಧ್ಯನಯದ ಮಹತ್ವವನ್ನು ಮೊದಲು ಗುರುತಿಸಿದವನು ಗಾತ್‌ಫ್ರೀಡ್ ವಿಲ್ಹೆಲ್ಮ್ ಲೀಬ್ನಿಜ್ (೧೭೬೮). ಈ ಕಾರಣದಿಂದಾಗಿ ಇವನನ್ನು ಸ್ಥಳನಾಮಶಾಸ್ತ್ರದ ಮೂಲ ಪುರುಷನೆಂದು ಕರೆಯಲಾಗುತ್ತದೆ. ಹೀಗಿದ್ದೂ ಪಶ್ಚಿಮ ರಾಷ್ಟ್ರಗಳಲ್ಲಿ ಈ ಬಗ್ಗೆ ಶಾಸ್ತ್ರಶುದ್ಧ ಅಧ್ಯಯನ ಬೆಳೆಯತೊಡಗಿದ್ದು ೧೮೪೦ರ ತರುವಾಯ ಫಾಯರ್ ಸ್ಟೆಮ್ಯಾನ್ ರಚಿಸಿದ Altdeuthces Nemen Buch, ಐಸಾಕ್, ಟೇಲರ್ ರಚಿಸಿದ 'Words and Places' ಈ ಅವಧಿಯ ಗಮನಾರ್ಹ ಕೃತಿಗಳೆನಿಸಿವೆ. ನಂತರ ಈ ಕ್ಷೇತ್ರದಲ್ಲಿ ಗಣನೀಯ ಕೆಲಸ ಮಾಡಿದ ಜಿ.ಜಿ. ಎಗ್ಲಿ ಅವರು ಸ್ಥಳನಾಮಾಧ್ಯಯನದ ಮಹಾ ಪುರುಷನಾಗಿದ್ದಾನೆ. ನಂತರ ಈ ಕ್ಷೇತ್ರದ ಅಧ್ಯಯನ ಪ್ರಪಂಚದಾದ್ಯಂತ ಬೆಳೆದುಬಂದಿದೆ. ಭಾರತದಲ್ಲಿ ಈ ಅಧ್ಯಯನ ತೀರಾ ಇತ್ತೀಚಿನದು. ಎಚ್.ಡಿ. ಸಂಕಾಲಿಯಾ ಇವರ ಪ್ರಬಂಧಗಳು ಈ ಶಾಸ್ತ್ರದ ಇತಿಹಾಸದಲ್ಲಿ ಮೈಲಿಗಲ್ಲೆನಿಸಿವೆ. ಹಾಗೇ ಕರ್ನಾಟಕದಲ್ಲಿಯೂ ಸಹ ೧೯ನೇ ಶತಮಾನದ ಆಸು ಪಾಸಿನಲ್ಲಿಯೇ ಈ ಮಾದರಿಯ ಅಧ್ಯಯನಗಳಿಗೆ ಚಾಲನೆ ದೊರೆತಿದ್ದು.

ಕಾಲಗಣನೆಯ ದೃಷ್ಟಿಯಿಂದ ವ್ಯಕ್ತಿನಾಮಗಳಿಗಿಂತ ಸ್ಥಳನಾಮಗಳು ಈಚಿನವೆಂದೇ ಹೇಳಬೇಕಾಗುತ್ತದೆ. ಆದಿಮಾನವ ವನ್ಯಜೀವಿಯಂತೆ ನಿಸರ್ಗವನ್ನವಲಂಬಿಸಿದ್ದನು. ಅವನ ಜೀವನ ವ್ಯಾಪಾರಗಳು ಏಕ ಕ್ಷೇತ್ರಕ್ಕೆ ಸೀಮಿತವಾಗಿರಲಿಲ್ಲ. ಹಳ್ಳ-ಕೊಳ್ಳಗಳು ಒಣಗಿದಂತೆಲ್ಲ, ಜಗತ್ತು ಭಗವಂತನದು ಅದರ ಅನುಭೋಗ ಅವನ ಮಕ್ಕಳಿಗೆಲ್ಲ ಸಲ್ಲತಕ್ಕದ್ದೆಂಬ ಭಾವನೆ ಅವರಲ್ಲಿ ರಕ್ತಗತವಾಗಿತ್ತು. ಕೃಷಿ ಸಂಸ್ಕೃತಿ ವಿಕಾಸವಾದಂತೆಲ್ಲ ಅವರ ಮೂಲಭೂತ ಭಾವನೆಗಳಲ್ಲಿ ವ್ಯತ್ಯಾಸ ತಲೆದೋರಿ, ಅವರ ಜೀವನ ವಿಧಾನವೂ ಪರಿವರ್ತನೆಗೊಳ್ಳುತ್ತಿತ್ತು. ಈಗಿನ ಹಕ್ಕಿಪಿಕ್ಕಿಯವರಂತೆಯೋ, ಕುರಿಗಾಹಿ ಗಳಂತೆಯೋ, ನಾಲ್ಕಾರು ದಿನ ಒಂದೆಡೆಯಲ್ಲಿದ್ದು, ಮಡಕೆ-ಕುಡಿಕೆ ತಟ್ಟೆ ಪುಟ್ಟಿಗಳನ್ನು ಹೊತ್ತುಕೊಂಡು

ದನ ಕುರಿ ನಾಯಿಗಳನ್ನು ಹಿಡಿದುಕೊಂಡು, ಮುಂದೆ ಸಾಗುತ್ತಿದ್ದರು. ಅನುಕೂಲಕರ ಪರಿಸರದಲ್ಲಿ ಬೀಡು ಬಿಡುತ್ತಿದ್ದರು. ಕಾಲಾಂತರದಲ್ಲಿ ಆ ಬೀಡುಗಳೇ ಹಟ್ಟಿಗಳಾದವು. ಕೊಪ್ಪಲುಗಳಾದವು. ಇದು ಶಂಬಾ ಜೋಶಿಯವರ ಊಹೆ. ಪಾಡು, ಪಾಡಿ, ಪಟ್ಟಣ, ಪೇಟೆ, ಹಾರ, ಆರ, ಆಡಿ, ಬಾಡ, ಬಾಳು, ವಾಡೆ, ಬಾಳ, ವಾಟಿ, ವಠಾರ, ಹಾಟ, ಹಾಳು, ಪಾಳ್ಯ, ಪಳ್ಳಿ ಇವೇ ಮೊದಲಾದ ಹತ್ತಾರು ರೂಪಗಳ ಪಟ್ಟಿಯಿಂದ ಸಿದ್ದವಾಗಿ ಗೊಲ್ಲ, ಗೋವಳ, ಗೌಳಿಗ, ಗೌಡ ಪದಗಳು ಜ್ಞಾತಿ ಸಂಬಂಧಿಗಳಾಗಿ ಹುಟ್ಟಿಕೊಂಡವು. ಅದೇನೇ ಇರಲಿ ಶಿಷ್ಟ ಸಂಪ್ರದಾಯದ ಸಾಹಿತ್ಯ–ವಿಜ್ಞಾನಿಗಳ ಮುನ್ನವೇ ಜನಪದರು ಹಟ್ಟಿಗಳನ್ನು ಕಟ್ಟಿಕೊಂಡು, ಊರುಗಳಲ್ಲಿ ನೆಲೆಸಿ ಅಲೆಮಾರಿತನಕ್ಕೆ ವಿರಾಮ ಹೇಳಿದ್ದಾರೆ. ಅಂದ ಮೇಲೆ ಸಾಮಾಜಿಕ ಕಲ್ಪನೆಗೆ ರಾಜಕೀಯ ಸಂಸ್ಥೆಗಳ ಉಗಮಕ್ಕೆ, ಇತಿಹಾಸದ ವಿಕಾಸಕ್ಕೆ ಮೇಲಾಗಿ ಸಂಸ್ಕೃತಿ ನಾಗರೀತಕೆಗಳ ಪ್ರಭಾವಕ್ಕೆ ಹಟ್ಟಿ, ಪಾಡಿ, ಊರುಗಳೇ ಮೂಲವಾಗಿವೆ. ಊರುಗಳ ಬೆಳವಣಿಗೆಯೊಡನೆ ಭಾಷೆಯೂ ವಿಕಾಸಗೊಳ್ಳುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

ಜ್ಞಾನ–ವಿಜ್ಞಾನ ವಿಚಾರಗಳ ಪ್ರಚಾರದೊಡನೆ, ಭಿನ್ನ ಭಿನ್ನ ಜನಾಂಗಗಳ ಸಂಪರ್ಕದೊಡನೆ ಕಾಲವಾಹಿನಿಯೊಡನೆ, ಊರುಗಳ ಹೆಸರು ಸಹ ರೂಪಾಂತರಗೊಳ್ಳುತ್ತವೆ. ಜನರ ಏಳು–ಬೀಳುಗಳು ಇತಿಹಾಸದ ಸಂಸ್ಕೃತಿಗಳ ವಿಚಾರ ಸಂಸರ್ಗ ಭಾವನಾಸಂಘರ್ಷಗಳು ಅವುಗಳಲ್ಲಿ ಪ್ರತಿಫಲನಗೊಳ್ಳುತ್ತವೆ. ಹೀಗಾಗಿ ಸ್ಥಳನಾಮಗಳ ಇತಿಹಾಸವೇ ನಾಗರಿಕತೆಯ ಇತಿಹಾಸವಾಗುತ್ತವೆ. ಸ್ಥಳನಾಮಗಳು ಅನೇಕ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಘಟನೆಗಳಿಗೆ ಸಾಕ್ಷಿಯಾಗಿ ಮಾನವನ ಅನನ್ಯತೆಯ ನಡುವೆ ನಿತ್ಯ ಜೀವನ ನಿದರ್ಶನಗಳಾಗಿ ಕಾಲರಾಯನ ದಾಳಿಯಲ್ಲಿ ವಿಜಯ ಧ್ವಜಗಳಾಗಿ, ಸಾಮಾಜಿಕ ಜೀವನದ ಅವಿಚ್ಛಿನ್ನಗತಿಯ ಉಸಿರಾಗಿ, ಏಕಕಾಲದಲ್ಲಿ ಪರಂಪರೆ ಪ್ರಗತಿಗಳ ಪ್ರತೀಕವಾಗಿ, ಭವಿಷ್ಯದ ಭರವಸೆಗಾಗಿ ಅವು ಜಗತ್ತಿನ ಉದ್ದಗಲದಲ್ಲಿ ರಾರಾಜಿಸುತ್ತಿವೆ.

ಹೀಗೆ ವ್ಯಕ್ತಿ ಮತ್ತು ಸ್ಥಳನಾಮಗಳು ಒಂದು ಪ್ರದೇಶದ ಭೌಗೋಳಿಕತೆಯನ್ನು ಅಲ್ಲಿಯ ಜನತೆಯ ಇತಿಹಾಸ, ಸಂಸ್ಕೃತಿಗಳ ಸ್ವರೂಪಗಳನ್ನು ತಿಳಿಸಿಕೊಡುವ ಉತ್ತಮ ಸಾಧನಗಳಾಗಿವೆ. ಇಲ್ಲಿ ಜನಾಂಗದ ಸಾಂಸ್ಕೃತಿಕ ಚರಿತ್ರೆಯನ್ನು ಘಟ್ಟ ಘಟ್ಟವಾಗಿ ಕಟ್ಟುವಲ್ಲಿ ವ್ಯಕ್ತಿನಾಮಗಳು ಸಹಾಯ ಮಾಡುತ್ತವೆ. ಹಾಗೆಯೇ ಸ್ಥಳಗಳೂ ಸಹ ಊರುಗಳ ಸಾಂಸ್ಕೃತಿಕ ವೈಭವವನ್ನು ತಿಳಿಸುವಲ್ಲಿ ಸಹಾಯಕವಾಗಿವೆ. ವ್ಯಕ್ತಿ ಮತ್ತು ಸ್ಥಳನಾಮಗಳು ಎರಡರ ಸಹಾಯದಿಂದ ಆಯಾ ನಾಡಿನ ಸಾಮಾಜಿಕ, ಧಾರ್ಮಿಕ, ಭೌಗೋಳಿಕ, ಭಾಷಿಕ ಮತ್ತು ಜನಾಂಗಿಕ ಸ್ವರೂಪವನ್ನು ಅರಿಯಲು ಮತ್ತು ಅರ್ಥೈಸಲು ಸಾಧ್ಯವಾಗುತ್ತದೆ.

**೩.೪. ಸ್ಥಳನಾಮಗಳ ವರ್ಗೀಕರಣದ ಮಾದರಿಗಳು**

ಸ್ಥಳನಾಮಗಳ ವರ್ಗೀಕರಣವು ತಜ್ಞರ ಬುದ್ಧಿ ಪ್ರತಿಭೆಗಳಿಗೆ, ಸವಾಲಾಗಿರುವ ಸಂಗತಿಗಳಾಗಿವೆ. ಎಷ್ಟು ಊರುಗಳಿರುತ್ತವೋ ಅಷ್ಟು ಹೆಸರುಗಳಿರುತ್ತವೆ. ಹೀಗಾಗಿ ನಿರ್ದಿಷ್ಟವಾಗಿ ಹೀಗೆ ಎಂದು ನಿರ್ಣಯಿಸುವಲ್ಲಿ ತೊಡಕುಂಟಾಗುತ್ತದೆ. ಈ ಕಾರಣವಾಗಿ ಹಲವು ವಿದ್ವಾಂಸರು ಈವರೆಗಿನ

ಸ್ಥಳನಾಮಗಳ ವರ್ಗೀಕರಣ ಮಾದರಿಗಳನ್ನು ವಿವಿಧ ರೀತಿಯಲ್ಲಿ ಪಟ್ಟಿ ಮಾಡಿದ್ದಾರೆ. ಅಂತಹ ಅಧ್ಯಯನಕಾರರಲ್ಲಿ ಪಾಶ್ಚಾತ್ಯ ವಿದ್ವಾಂಸರೂ ಇದ್ದಾರೆ. ದೇಶಿ ವಿದ್ವಾಂಸರು ಇದ್ದಾರೆ. ಕೆಲವು ಮಾದರಿಗಳನ್ನು ನೋಡುವ ಮೂಲಕ ಪ್ರಸ್ತುತ ಪ್ರಾದೇಶಿಕ ವರ್ಗೀಕರಣ ಮುಂದುವರೆಯುತ್ತದೆ.

೧. ಲ್ಯಾಂಬರ್ಟ್ ಮತ್ತು ಮೇರಿಯಾ ಪೈ: ಅಮೆರಿಕನ್ ಪ್ಲೇಸ್ ನೇಮ್ಸ್ ಎಂಬ ಗ್ರಂಥದಲ್ಲಿ ಸ್ಥಳನಾಮಗಳನ್ನು ಹತ್ತು ವಿಧವಾಗಿ ವರ್ಗೀಕರಿಸಿದ್ದಾರೆ.

1. Descriptive names 2. Association names 3. Possessive names 4. Incident names 5. Commendatory names 6. Coined names 7. Transfer and shift names 8. Commemorative names 9. Folk etymology 10. Onistake names.

೨. ಜೆ.ಜೆ. ಯುಗ್ಲಿ: 1. Natural names 2. Cultural names ಎಂಬ ಸಂಕ್ಷಿಪ್ತವಾಗಿ ವರ್ಗೀಕರಿಸುತ್ತಾರೆ.

೩. ಕೆ.ಪಿ. ಪದ್ಮನಾಭ ಮೆನನ್: ಇವರು Some place names of malbar (1932) ಎಂಬ ಲೇಖನದಲ್ಲಿ ಸ್ಥಳನಾಮಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ.

1. Toppographical 2. Artificial condition 3. Native soil products 4. Temple 5. Ancient military holds 6. Culture and religious 7. Incidental 8. Trade culture 9. Profession of the people 10. Accidental phenomena.

೪. ಸಿ. ನಾರಾಯಣರಾವ್: ಅವರು A study of place names in Ananthapuram district (1935) ಕೃತಿಯಲ್ಲಿ

1. Direction 2. Rocks 3. Big and Small 4. Old and New 5. Hill and Spring 6. Cold and Hot 7. Channels 8. Forts 9. Home sheds 10. Hevenly bodies 11. Animal and birds 12. Part of human body 13. Food 14. Proffession 15. Family 16. Dynasty.

೫. ರಾಮಚಂದ್ರ ಚಟ್ಟಿಯಾರ್: ಅವರು Place names of Selan district ಎಂಬ ಲೇಖನದಲ್ಲಿ ಆರು ವಿಧವಾಗಿ ವಿಂಗಡಿಸಿದ್ದಾರೆ.

1. Hill area 2. Water sources 3. Plains 4. Civic life 5. Agriculture 6. Religion.

೬. ಹಿರಾಲಾಲ್: Indian Antiquary (1931) ಯಲ್ಲಿ ಹೀಗೆ ವಿಂಗಡಿಸಿದ್ದಾರೆ.

೧. ಮರಗಳ ಬೆಳವಣಿಗೆಗಿಂತ ಮುಂಚಿತವಾಗಿ ಇಟ್ಟ ಹೆಸರು ೨. ಪ್ರಾಣಿ ಪಕ್ಷಿಗಳಿಂದ ಬಂದ ಹೆಸರುಗಳು ೩. ದೇವತೆಗಳಿಂದ ಬಂದ ಹೆಸರುಗಳು.

೭. ಎಸ್.ಎಸ್. ರಾಮಚಂದ್ರಮೂರ್ತಿ: ಅವರು A study of Telugu place names ಎಂಬ ನಿಬಂಧದಲ್ಲಿ ಒಂಭತ್ತು ಬಗೆಯಲ್ಲಿ ವಿಂಗಡಿಸಿದ್ದಾರೆ.

೧. ಭೌತಿಕ ಮತ್ತು ಭೌಗೋಳಿಕ ಲಕ್ಷಣಗಳಿರುವಂಥವು ೨. ಸಸ್ಯಲೋಕದ ಹೆಸರುಗಳು ೩. ಪ್ರಾಣಿಲೋಕದ ಹೆಸರುಗಳು ೪. ಧಾರ್ಮಿಕ ಸಂಗತಿಗಳು ೫. ಜನಾಂಗಿಕ ಅಂಶಗಳು ೬. ಚಾರಿತ್ರಿಕ ಹೆಸರುಗಳು ೭. ವ್ಯಾಪಾರ-ವಾಣಿಜ್ಯ ೮. ಪ್ರಸಿದ್ಧ ವರ್ಗಗಳ ನಾಮದಿಂದ ಬಂದಂತಹವು ೯. ಸಂಕೀರ್ಣ.

೮. ಎಸ್.ಕೆ. ಚಟರ್ಜಿ: ಅವರ ವರ್ಗೀಕರಣ ಹೀಗಿದೆ.

೧. ಬುಡಕಟ್ಟು ಅಥವಾ ಜಾತಿಯ ಹೆಸರಿನಿಂದ ೨. ನೈಸಗಿಕ ಲಕ್ಷಣಗಳು ೩. ಧಾರ್ಮಿಕ ಸಂಗತಿಗಳು ೪. ವ್ಯಕ್ತಿ ಅಥವಾ ಘಟನೆ ೫. ಹಳೆಯ ಹೆಸರುಗಳಿಂದ

೯. ಎಚ್.ಡಿ. ಸಂಕಾಲಿಯಾ: ಅವರು ವರ್ಗೀಕರಣವನ್ನು ಏಳು ರೀತಿಯಲ್ಲಿ ಹೇಳಿದ್ದಾರೆ.

೧. ವ್ಯಕ್ತಿಯಾಧಾರಿತ ೨. ಘಟನೆ ಆಧಾರಿತ ೩. ಸಂಪ್ರದಾಯ ಮತ್ತು ಮೌಢ್ಯಗಳಿಂದ ೪. ಭೌಗೋಳಿಕ ಲಕ್ಷಣಗಳಿಂದ ೫. ಹೂ, ಹಣ್ಣು, ಮರ, ಬೆಳೆಗಳಿಂದ ೬. ಪ್ರಾಣಿ-ಪಕ್ಷಿಗಳಿಂದ ೭. ಹಳೆಯ ಹೆಸರುಗಳಿಂದ.

೧೦. ಶಂಬಾಜೋಶಿ: ಅವರು 'ಎಡೆಗಳು ಹೇಳುವ ಕಂನಾಡ ಕತೆ' ಕೃತಿಯಲ್ಲಿ ಇಪ್ಪತ್ತೊಂದು ಬಗೆಯಲ್ಲಿ ವರ್ಗೀಕರಣವನ್ನು ಹೇಳಿದ್ದಾರೆ.

೧. ಪ್ರಾಣಿಗಳಿಂದ ಬಂದವು ೨. ಗಿಡಗಂಟಿಗಳಿಂದ ಬಂದ ಹೆಸರು ೩. ದೇಹದ ಅಂಗಾಂಗಗಳಿಂದ ೪. ಬಳಗದವರಿಂದ ೫. ಮನೆಗಳಿಂದ ೬. ದಿನಸುಗಳಿಂದ ೭. ಬಣ್ಣಗಳಿಂದ ೮. ಹರಳುಗಳಿಂದ ೯. ಬಂಗಾರದಿಂದ ೧೦. ಅಂಕೆಗಳಿಂದ ೧೧. ಗ್ರಹಾದಿಗಳಿಂದ ೧೨. ನೆಲದಿಂದ ೧೩. ಬೇಸಾಯದಿಂದ ೧೪. ಕಾಲದಿಂದ ೧೫. ಮಳೆ ಮಿಂಚು ಮುಂತಾದವುಗಳಿಂದ ೧೬. ಚಿಕ್ಕ, ದೊಡ್ಡ ೧೭. ಕೂಡಿಕೆಯಿಂದ ೧೮. ದೇವತಾದಿಗಳಿಂದ ೧೯. ಜನಗಳಿಂದ ೨೦. ವ್ಯವಸಾಯ ಉದ್ಯೋಗಾಧಿಕಾರಿಗಳಿಂದ ೨೧. ವ್ಯಕ್ತಿಗಳಿಂದ ಎ. ಪುರಾತನ ಋಷಿ ಬಿ. ರಾಜಕೀಯ, ಸಾಮಾಜಿಕ ಸಿ. ಧಾರ್ಮಿಕ.

೧೧. ದೇ.ಜವರೇಗೌಡ: ಅವರು ಹೀಗೆ ವರ್ಗೀಕರಿಸಿದ್ದಾರೆ.

೧. ವಸತಿ ಸೂಚಿಸುವ ಘಟಕಗಳು ೨. ಬೆಟ್ಟ, ಗುಡ್ಡ, ಕಲ್ಲು ಸೂಚಕಗಳು ೩. ಜಲಸೂಚಕಗಳು ೪. ಭೌಗೋಳಿಕ ಲಕ್ಷಣ ಹೇಳುವಂತವು ೫. ಜಾತಿ-ಕುಲಧರ್ಮ ಸೂಚಕ ೬. ವ್ಯಾಪಾರಕೇಂದ್ರವನ್ನು ಹೇಳುವಂಥವು. ೭. ಸೈನಿಕರಿಗೆ ಸಂಬಂಧಿಸಿದಂತಹವು ೮. ಸಸ್ಯವಾಚಿ ೯. ಪ್ರಾಣಿವಾಚಿ ೧೦. ಸಂಕೀರ್ಣ ಘಟಕಗಳು.

೧೨. ಎಕ್ಬಾಲ್: ಅವರು ವಸತಿಸ್ಥಾನಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಮೂರು ಗುಂಪುಗಳನ್ನು ಸೂಚಿಸಿದ್ದಾರೆ.

೧. ಜನನಾಮ ಅಥವಾ ಬುಡಕಟ್ಟಿನ ಹೆಸರುಗಳು ೨. ಬಹುದಿನಗಳಿಂದ ಜನ ವಾಸಿಸುತ್ತಿದ್ದ ವಸತಿಗಳ ಹೆಸರು ೩. ಮೂಲತಃ ಪ್ರಾಕೃತಿಕನಾಮಗಳು.

೧೩. ಕೆ.ಬಿ. ಹೊಲ್ಕಾರ್: ಅವರು Systematic study of place names ಎಂಬ ಲೇಖನದಲ್ಲಿ ೧. ಹಳ್ಳಿ-ನಗರ ೨. ನದಿ-ನಾಲೆ ೩. ಬೆಟ್ಟ-ಗುಡ್ಡ ೪. ಬೀರಿ-ವೃತ್ತಗಳಿಗೆ ಸಂಬಂಧಿಸಿದಂತೆ ವರ್ಗೀಕರಿಸಿದ್ದಾರೆ.

೧೪. ವೈ.ಬಿ. ಗಂಗಾಧರರಾವ್ ಅವರು A note on place name study ಎಂಬ ಲೇಖನದಲ್ಲಿ ಏಳು ಬಗೆಯ ಸ್ಥಳನಾಮಗಳ ಗುಂಪುಗಳನ್ನು ಹೇಳಿದ್ದಾರೆ. ಇವರು ವರ್ಗೀಕರಣದ ವರ್ಣನೆ ಸಂಯೋಜನೆ, ಸಹಾಯಕ ಘಟನೆ ಸ್ವಾಧೀನಾನುಭವ, ಪ್ರಖ್ಯಾತ ಸ್ಮಾರಕೋತ್ಸವ, ಅರ್ಪಣಾತ್ಮಕ ಮತ್ತು ಜನಪದೀಯ ನಿಷ್ಪತ್ತಿಯ ಬಗೆಗೆ ಒತ್ತಿ ಹೇಳಿದ್ದಾರೆ. ಅವುಗಳು

1. Descriptive names 2. Associative names 3. Incident names 4. Possessive names 5. Commemorative names 6. Commendatory names 7. Folk etymology.

೧೫. ಎಂ.ಎಂ. ಕಲ್ಬುರ್ಗಿ: ಅವರು ನಾಮವಿಜ್ಞಾನದಲ್ಲಿ ಈ ಕೆಳಗಿನಂತೆ ವರ್ಗೀಕರಿಸಿದ್ದಾರೆ.

೧. ನಿಸರ್ಗವಾಚಿ ೨. ನಿರ್ಮಾಣವಾಚಿ ೩. ಜನಾಂಗವಾಚಿ ೪. ವ್ಯಕ್ತಿವಾಚಿ ೫. ಆದರ್ಶವಾಚಿ.

೧೬. ಜಾಜಿ ದೇವೇಂದ್ರಪ್ಪ ಅವರು ಆಂಧ್ರ-ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು ಎಂಬ ನಿಬಂಧದಲ್ಲಿ ಈ ಕೆಳಗಿನಂತೆ ವಿಂಗಡಿಸಿಕೊಟ್ಟಿದ್ದಾರೆ.



ಹೀಗೆ ಹಲವು ವಿದ್ವಾಂಸರು ವ್ಯಕ್ತಿನಾಮಗಳು ಮತ್ತು ಸ್ಥಳನಾಮಗಳ ವರ್ಗೀಕರಣ ಮಾದರಿಗಳನ್ನು ನೀಡಿದ್ದಾರೆ. ಪಾಶ್ಚಾತ್ಯ ವಿದ್ವಾಂಸರು ನೀಡಿದ ವರ್ಗೀಕರಣದ ಮಾದರಿಯು ನಮ್ಮ ದೇಶಕ್ಕೆ ಹೊಂದಬಹುದು, ಹೊಂದದಿರಬಹುದು. ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ ವೈವಿಧ್ಯತೆಯಿರುವುದರಿಂದ ಇಂತಹ ವರ್ಗೀಕರಣ ಪ್ರಕ್ರಿಯೆಗಳು ನಮಗೆ ಅಗತ್ಯವೆಂದು ತೋರಲಾರದು. ಅನೇಕರು ನೀಡಿದ ವರ್ಗೀಕರಣವನ್ನು ಒಪ್ಪುವುದು ಕಷ್ಟವಾಗುತ್ತದೆ. ದೇಶೀಯ ವಿದ್ವಾಂಸರು ನೀಡಿದ ವರ್ಗೀಕರಣದಲ್ಲಿಯೂ ಅನೇಕ ಭಿನ್ನರೀತಿಯ ಮಾದರಿಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಅಸಮರ್ಪಕವೂ, ಅವೈಜ್ಞಾನಿಕವೂ, ಅತಿವ್ಯಾಪ್ತಿಯೂ, ಸಂಕ್ಷಿಪ್ತವೂ ಆಗಿ ಕಂಡುಬರುತ್ತವೆ. ದೇಶೀಯ ನೆಲದಲ್ಲಿಯೂ ವಿವಿಧ ರೀತಿಯಲ್ಲಿ ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ಬದಲಾವಣೆಗಳು ಇರುವುದರಿಂದ ಇಂತಹ ವರ್ಗೀಕರಣ ಆಯಾ ಪ್ರಾದೇಶಿಕ ಪರಿಸರಕ್ಕೆ ಸರಿಹೊಂದುತ್ತದೆ. ಭಾರತದಲ್ಲಿಯೇಕೆ, ಒಂದೇ ಭಾಷೆಯನ್ನೊಳಗೊಂಡ ಕರ್ನಾಟಕದಲ್ಲಿಯೂ ಇಂತಹ ಭಿನ್ನತೆಯನ್ನು ಕಾಣಬಹುದು. ಮಂಗಳೂರು (ದಕ್ಷಿಣ ಕರ್ನಾಟಕದ) ಭಾಗದ ಭೌಗೋಳಿಕ ಹಾಗೂ ಸಾಂಸ್ಕೃತಿಕ ಪರಿಸರ ಉಳಿದ ಕರ್ನಾಟಕದ ಭಾಗಕ್ಕಿಂತ ಭಿನ್ನವಾಗಿರುವುದರಿಂದ ಅಲ್ಲಿನ ವರ್ಗೀಕರಣದ ಮಾದರಿಯು ಸರ್ವಮಾನ್ಯವಾಗಲಾರದು. ಈ ದೃಷ್ಟಿಯಿಂದ ಯಾವೊಂದು ಪ್ರದೇಶದ ವರ್ಗೀಕರಣವಂತೂ ಇದರಿಂದ ತುಂಬಾ ದೂರ ಉಳಿಯುತ್ತವೆ. ದ್ವಿಭಾಷಿಕ ವಲಯದಲ್ಲಿ ಇಂತಹ ಮಾದರಿಯು ವಿಶೇಷವಾಗಿ ಕಂಡುಬರುತ್ತದೆ.

**ಸ್ಥಳನಾಮಗಳ ವರ್ಗೀಕರಣ**

| ೧. ಪ್ರಾಕೃತಿಕ ಸ್ಥಳನಾಮಗಳು | ೨. ಸಾಂಸ್ಕೃತಿಕ ಸ್ಥಳನಾಮಗಳು |
|---|---|
| i. ಜಲವಾಚಿ ಸ್ಥಳನಾಮಗಳು | i. ಪುರುಷ ದೈವವಾಚಿ ಸ್ಥಳನಾಮಗಳು |
| ii. ಶಿಲಾವಾಚಿ ಸ್ಥಳನಾಮಗಳು | ii. ಸ್ತ್ರೀ ದೈವವಾಚಿ ಸ್ಥಳನಾಮಗಳು |
| iii. ಎತ್ತರದ ಭೂಪ್ರದೇಶದ,ಸ್ಥಳನಾಮಗಳು | iii.ದೈವತ್ವಕ್ಕೇರಿದ ದಾರ್ಶನಿಕರ ಸ್ಥಳನಾಮಗಳು |

### ೩.೪.೧. ಪ್ರಾಕೃತಿಕ ಸ್ಥಳನಾಮಗಳು

**i. ಜಲವಾಚಿ ಸ್ಥಳನಾಮಗಳು**

ಜಗತ್ತಿನ ನಾಗರಿಕತೆಗಳೆಲ್ಲವೂ ನದಿ ದಂಡೆಯ ಮೇಲೆ ಜೀವನವನ್ನು ಆರಂಭಿಸಿದವೆಂದು ಅಧ್ಯಯನದಿಂದ ನಮಗೆ ತಿಳಿಯುತ್ತದೆ. ನೀರು ಮನುಷ್ಯನಿಗೆ ಅತ್ಯವಶ್ಯಕವಾದ್ದರಿಂದ, ನೀರಿಗೆ ಅತ್ಯಂತ ಪ್ರಾಮುಖ್ಯತೆ ಇದೆ. ಸದಾ ಸಂಚಾರಿಯಾಗಿದ್ದ ಆದಿಮಾನವರು ಒಂದೆಡೆ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲಿಕ್ಕೆ 'ಜಲ' ಮುಖ್ಯವಾಗಿ ಬೇಕಿತ್ತು. ಈ ಕಾರಣಗಳಿಂದ ಕಾಡನ್ನು ತೊರೆದು ನೀರಿನ ಸಮೀಪ ತಮ್ಮ ನೆಲೆಗಳನ್ನು ಕಟ್ಟಿಕೊಂಡರು. ನೀರಿಗೆ ಕೆರೆ, ಕೊಳ್ಳ, ಕುಂಟೆಗಳಂತಹ ಕೃತಕ ಜಲ ಸಂಗ್ರಹಗಳನ್ನು ನಿರ್ಮಿಸಿಕೊಂಡರು. ಇಂದಿಗೂ ಗ್ರಾಮಗಳ ನಿರ್ಮಾಣವು ನೀರನ್ನು ಅವಲಂಬಿಸಿ ರಚನೆಯಾಗುತ್ತವೆ. ಹೀಗೆ ಜಲಮೂಲ ಸಂಸ್ಕೃತಿಯಿಂದ ಆರಂಭವಾದ ಸಂಸ್ಕೃತಿಯಲ್ಲಿ ಆ

ಜಲವನ್ನವಲಂಬಿಸಿಯೇ ಕೆಲವು ಗ್ರಾಮಗಳಿಗೆ ಹೆಸರು ಕರೆದುಕೊಳ್ಳುವ ರೂಢಿ ಆರಂಭವಾಗಿರಬೇಕು. ಅಂತಹ ಭೂಸ್ಥಿತಿಯನ್ನು ಹೇಳುವ ದೈವಮೂಲದ ಜಲವಾಚಿ ಸ್ಥಳನಾಮಗಳನ್ನು ಮಾತ್ರ ಇಲ್ಲಿ ಗುರುತಿಸಲಾಗಿದೆ.

ನಾರಾಯಣದೇವರ ಕೆರೆ, ದೇವಸಮುದ್ರ, ಅಮ್ಮನ ಕೆರೆ, ಧರ್ಮಸಾಗರ, ರಾಮಸಾಗರ, ಹಂಪಾಸಾಗರ, ಸೋಮಸಮುದ್ರ, ಗಂಗಮ್ಮನ ಹಳ್ಳಿ, ಕಂಪಸಾಗರ (ಕೊಪ್ಪಳ), ಬೊಮ್ಮಸಾಗರ (ಗಂಗಾವತಿ), ಸೋಮಸಾಗರ (ಗಂಗಾವತಿ), ನಂದಿಹಳ್ಳಿ, ಬೊಮ್ಮಕುಂಟ, ಹರಿಯಲ್ಲಮ್ಮನ ಬಾವಿ, ತಾಯಮ್ಮಕೊಳ್ಳ  ಬಳ್ಳಾರಿಯಂತಹ ಬಯಲು ಪರಿಸರದಲ್ಲಿ ಸಮುದ್ರ, ಸಾಗರ, ಕೆರೆಯಂತಹ ಜಲಮೂಲ, ಉತ್ತರ ಪದಗಳಾಗಿ ಸ್ಥಳನಾಮಗಳಲ್ಲಿ ಬಳಕೆಯಾಗಿರುವುದು ವಿಶೇಷವಾಗಿ ತೋರುತ್ತದೆ. ಕೆರೆ, ಕುಂಟೆಯಂತಹ ಜಲಸಂಗ್ರಹಗಳಿಗೆ ತಮ್ಮ ಕಲ್ಪನೆಯಲ್ಲಿ ಸಮುದ್ರ, ಸಾಗರ ಎಂದು ಕರೆದುಕೊಂಡಿರಬೇಕು.

ಹುಲಿಕುಂಟೆ, ಅಡವಿಮಲ್ಲನಕೆರೆ, ತುಂಬಿನಕೆರೆ, ಅಂಕಸಮುದ್ರ, ಗದ್ದಿಕೆರೆ, ಕೋಡಿಹಳ್ಳಿ, ಡಣಾಯಕನ ಕೆರೆ, ಬೇವಿನವಡ್ಡಿಗೆರೆ, ಲೋಕಿಕೆರೆ ಈ ಸ್ಥಳನಾಮಗಳು ಜಲವಾಚಿಗಳೇ. ಆದರೆ ದೈವವನ್ನು ಕುರಿತಾದ ಜಲವಾಚಿಗಳಲ್ಲ. ಈ ಮೇಲಿನ ಸ್ಥಳನಾಮಗಳು, ಕುಂಟೆ, ಕೆರೆ, ಗೆರೆ, ಸಮುದ್ರ ಎಂಬ ವಾರ್ಗಿಕಗಳನ್ನು ಹೊಂದಿವೆ. ಈ ಮೇಲಿನ ಜಲವಾಚಿ ಗ್ರಾಮಗಳು ಬಳ್ಳಾರಿ ಪರಿಸರದಲ್ಲಿ ಕಾಣಬಹುದು.

ಜಲವಾಚಿ ನಾಮಗಳಲ್ಲಿ ಬಳಕೆಯಾಗುವ ಕೆರೆ, ಹಾಗೂ ಕೇರಿ/ಗೇರಿ ಒಂದೇ ಎಂದು ಭಾವಿಸಲಾಗುತ್ತದೆ. (ಉತ್ತರಕರ್ನಾಟಕದಲ್ಲಿ) ಕೇರಿ ಎಂಬುದು ಓಣಿ, ಬೀದಿಯನ್ನು ನಿರ್ದೇಶಿಸುತ್ತದೆ. ಕೆರೆ ಜನಪದರ ನುಡಿಯಲ್ಲಿ 'ಕೇರಿ'ಯಾಗಿರಬಹುದು. ಉದಾಹರಣೆಗೆ ಹಳ್ಳಿಕೆರೆ–ಹಳ್ಳಿಕೇರಿಯಾಗಿದೆ. ಅಮ್ಮನಕೆರೆ – ಅಮ್ಮನಕೇರಿಯಾಗಿದೆ.

**ii. ಶಿಲಾವಾಚಿ ಸ್ಥಳನಾಮಗಳು**

ಕಾಡಿನಲ್ಲಿಯೇ ಜೀವಿಸಿದ ಆದಿಮಾನವರು, ಪ್ರಕೃತಿಯನ್ನೇ ದೇವರೆಂದು ನಂಬಿದವರಾಗಿದ್ದಾರೆ. ಪ್ರಾಚೀನರು ಕಲ್ಲು, ಗುಡ್ಡಗಳಲ್ಲಿ ವಾಸಮಾಡಿದವರಾದ್ದರಿಂದ ಕಲ್ಲು–ಗುಂಡುಗಳನ್ನೇ ಗಮನದಲ್ಲಿಟ್ಟುಕೊಂಡು ಸ್ಥಳನಾಮಗಳನ್ನು ನಿರ್ದೇಶಿಸಿದ್ದಾರೆ. ಅವುಗಳನ್ನು ಇಂದಿಗೂ ಕೂಡಾ ಕರ್ನಾಟಕದಾದ್ಯಂತ ಕಾಣಬಹುದು. ಬಳ್ಳಾರಿ ಪರಿಸರದಲ್ಲಿ ಅಂತಹ ಸ್ಥಳನಾಮಗಳನ್ನು ಈ ಕೆಳಗಿನಂತೆ ಗಮನಿಸಬಹುದು.

ನಂದಿಬಂಡೆ, ಶಂಕರಬಂಡೆ, ಪಾಂಡವ ಗಲ್ಲು, ಕೇಶವರಾಯನ ಬಂಡೆ, ಸಾಂಬಗಲ್ಲು, ಬನ್ನಿಕಲ್ಲು, ಕರೇಕಲ್ಲು, ಕಪ್ಪುಗಲ್ಲು, ಕಲ್ಲುಕುಟಿಗನ ಹಾಳು, ಬಣವಿಕಲ್ಲು, ಬೆಳಗಲ್ಲು, ಕೊಳಗಲ್ಲು, ನವಿಲುಕಲ್ಲು, ಕಗ್ಗಲ್ಲು, ಸಂಗನಕಲ್ಲು, ಹದ್ದಿನಗುಂಡು.

ಈ ಮೇಲೆ ತಿಳಿಸಿದ ಸ್ಥಳನಾಮಗಳಲ್ಲಿ ಮೊದಲ ಐದು ಸ್ಥಳನಾಮಗಳು ದೈವಮೂಲ ಶಿಲಾವಾಚಿ ಸ್ಥಳಗಳಾಗಿದ್ದು, ಇನ್ನುಳಿದವು ಪಕ್ಷಿ, ಕೊಳ ಮತ್ತು ಕಲ್ಲಿನ ಗುಣಗಳನ್ನು ತಿಳಿಸುವ ಸ್ಥಳನಾಮಗಳಾಗಿವೆ.

**iii. ಎತ್ತರದ ಭೂಪ್ರದೇಶಕ್ಕೆ ಸಂಬಂಧಿಸಿದ ಸ್ಥಳನಾಮಗಳು**

ಗುಡ್ಡ, ಬೆಟ್ಟ, ದುರ್ಗದಿಂದ ಕೊನೆಯಾಗುವ ಸ್ಥಳನಾಮಗಳೆಂದರೆ, ಅಮರದೇವರಗುಡ್ಡ, ತಿಮ್ಮಪ್ಪನಗುಡ್ಡ, ದೇವರುಗಡ್ಡ, ಸಿದ್ಧರಗುಡ್ಡ, ಅಂಜನಾದ್ರಿಬೆಟ್ಟ, ರಾಮನಮಲೆ ಬೆಟ್ಟ, ಕುಮಾರಸ್ವಾಮಿ ಗುಡ್ಡ, ಉಚ್ಚಂಗಿ ದುರ್ಗ, ರಾಮದುರ್ಗ. ಈ ಸ್ಥಳನಾಮಗಳಲ್ಲಿ ಗುಡ್ಡ, ಬೆಟ್ಟ, ದುರ್ಗ ಪದಗಳು ಸ್ಥಳನಾಮಗಳ ಉತ್ತರ ಪದಗಳಾಗಿದ್ದು, ಮೊದಲನೇ ಪದವು ದೈವೀ ಹೆಸರುಗಳನ್ನು ಹೇಳುತ್ತವೆ. ಹಾಗೆಯೇ ಹಳ್ಳಿ ಮತ್ತು ಪುರದಿಂದ ಕೊನೆಯಾಗುವ ಸ್ಥಳನಾಮಗಳನ್ನು ನೋಡುವುದಾದರೆ, ಮರಿಯಮ್ಮನಹಳ್ಳಿ, ಹನುಮನಹಳ್ಳಿ, ಭೈರದೇವನಹಳ್ಳಿ, ಪರಮದೇವನಹಳ್ಳಿ, ಲಿಂಗದಹಳ್ಳಿ, ನಾಗನಾಥನ ಹಳ್ಳಿ, ನಾಗೇನಹಳ್ಳಿ, ಆನಂದ ದೇವನಹಳ್ಳಿ, ಶಿವಪುರ, ನಾರಾಯಣಪುರ, ವರದಪುರ, ಮಣಿಕಂಠಪುರ, ರಂಗಾಪುರ, ಸಿದ್ದಾಪುರ, ಸಿದ್ದರಾಮಪುರ, ಅಮರಾಪುರ, ದೇವಲಾಪುರ ಇತ್ಯಾದಿಯಾಗಿ ನೋಡಬಹುದು.

**೩.೪.೨. ಸಾಂಸ್ಕೃತಿಕ ಸ್ಥಳನಾಮಗಳು**

**i. ಪುರುಷ ದೈವವಾಚಿ ಸ್ಥಳನಾಮಗಳು**

ಶ್ರೀರಾಮಶೆಟ್ಟಿ ಹಳ್ಳಿ, ಅನಂತಶಯನ ಗುಡಿ, ಅಮರದೇವರ ಗುಡ್ಡ, ನಾರಾಯಣ ದೇವರ ಕೆರೆ, ದೇವಲಾಪುರ, ಶಂಕರಬಂಡೆ, ಕೇಶವರಾಯನ ಬಂಡೆ, ಆನಂದ ದೇವನಹಳ್ಳಿ, ಜಂಬುನಾಥ ಗುಡ್ಡ, ರಾಮಘಡ, ಕುಮಾರಸ್ವಾಮಿ ಬೆಟ್ಟ, ಹರಿಶಂಕರ ತೀರ್ಥ, ರಾಮನಮಲೆ, ತಿಮ್ಮಪ್ಪನ ಗುಡ್ಡ, ರಾಮದುರ್ಗ, ದೇವಗಿರಿ, ನಾಗನಾಥನಹಳ್ಳಿ, ಬೊಮ್ಮಘಟ್ಟ, ಬೊಮ್ಮಲಾಪುರ, ಬೈರಾಪುರ, ಬೈರದೇವನಹಳ್ಳಿ, ಮಲ್ಲಿಕಾರ್ಜುನ ಹಳ್ಳಿ, ವಿರುಪಾಪುರ, ಶ್ರೀರಾಮನಗರ, ಕಾರ್ತೀಕೇಶ್ವರ, ಅನಂತನಹಳ್ಳಿ, ಎಲ್ಲಾಪುರ, ಈಶಾಪುರ, ಶಂಕರನಹಳ್ಳಿ, ಶ್ರೀನಿವಾಸಪುರ, ತಿಪ್ಪನಾಯಕನಹಳ್ಳಿ, ಜಂಬುಲಿಂಗನಹಳ್ಳಿ, ಲೋಲೇಶ್ವರ (ಹರಪನಹಳ್ಳಿ ತಾಲೂಕು) ಎಲ್ಲ ಸ್ಥಳನಾಮಗಳು ಪುರುಷ ದೈವವನ್ನು ಸೂಚಿಸುವ ಸ್ಥಳನಾಮಗಳಾಗಿವೆ. ಗುಡಿ, ಗುಡ್ಡ, ಬಂಡೆ, ಕೆರೆ, ಬೆಟ್ಟ, ಪುರ, ಹಳ್ಳಿ, ನಗರ ವಾರ್ಗಿಕಗಳಿಂದ ಕೊನೆಯಾದ ಊರುಗಳಾಗಿವೆ. ಶಿಷ್ಟದೇವತೆಗಳಲ್ಲಿ ಪುರುಷ ದೈವಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದ ಕಾರಣ ಪುರುಷ ದೈವಮೂಲದ ಹೆಸರುಗಳು ಹೆಚ್ಚಾಗಿವೆ. ಸ್ಥಳನಾಮಗಳಲ್ಲಿ ಆಯಾ ಊರ ಹೆಸರಿನ ದೈವದ ದೇವಾಲಯವನ್ನು ಕಾಣಬಹುದು. ಹೆಚ್ಚಾಗಿ ಶಿಷ್ಟದೇವರ ಹೆಸರುಗಳಲ್ಲಿ ದೇವಾಲಯಗಳಿರುವುದರಿಂದ ಪೂಜಾರಿಗಳು ಮೇಲ್ವರ್ಗದವರೇ ಆಗಿರುತ್ತಾರೆ.

**ii. ಸ್ತ್ರೀ ದೈವವಾಚಿ ಸ್ಥಳನಾಮಗಳು**

ಲಕ್ಷ್ಮೀಪುರ, ಹುಲಿಗಿ, ಅಂಜನಾದ್ರಿ, ಗಾಳೆಮ್ಮಗುಡಿ, ಅಮ್ಮನಕೆರೆ, ಮರಿಯಮ್ಮನಹಳ್ಳಿ, ಗಂಗಮ್ಮನಹಳ್ಳಿ, ಉಚ್ಚಂಗಿದುರ್ಗ, ಮಾರಮ್ಮನಹಳ್ಳಿ, ರಾಧಾನಗರ, ದುರ್ಗಕ್ಯಾಂಪ್, ಧನಲಕ್ಷ್ಮಿ ಕ್ಯಾಂಪ್, ಗೋದಾವರಿ ಕ್ಯಾಂಪ್, ಗಂಗಾಭವಾನಿ ಕ್ಯಾಂಪ್, ಅಂಬಾಮಠ. ಈ ಹೆಸರುಗಳು ಸ್ತ್ರೀದೇವತೆಗಳ ಸ್ಥಳನಾಮಗಳ ಹೆಸರುಗಳಾಗಿವೆ. ಇವು ಸಂಖ್ಯೆಯಲ್ಲಿ ಕಡಿಮೆ ಪ್ರಮಾಣದಲ್ಲಿವೆ. ಕಾರಣ ಪುರುಷ ಪ್ರಧಾನ

ಸಮಾಜವಿರಬಹುದು. ಪುರುಷರೇ ಊರಿನ ಹೆಸರುಗಳನ್ನು ನಿರ್ದೇಶನ ಮಾಡುವುದರಿಂದ ಹೆಚ್ಚು ಪುರುಷಮೂಲ ಸ್ಥಳನಾಮಗಳನ್ನು ನೋಡುತ್ತೇವೆ. ಇಂದಿನ ದಿನಗಳಲ್ಲಿ ಇಂದಿರಾಗಾಂಧಿ, ಸೋನಿಯಾ ಗಾಂಧಿಯರ ಹೆಸರುಗಳಲ್ಲಿ ನಗರಗಳನ್ನು ನೋಡುತ್ತಿದ್ದೇವೆ. ಉದಾಹರಣೆಗೆ ಇಂದಿರಾನಗರ, ಸೋನಿಯಾಗಾಂಧಿ ನಗರ. ಈ ಹಿಂದೆ ರಾಜರು ತಮ್ಮ ಹೆಂಡತಿಯರ ಹೆಸರುಗಳಲ್ಲಿ ಸ್ಥಳನಾಮಗಳನ್ನು ನಿರ್ದೇಶನ ಮಾಡುತ್ತಿದ್ದರು. ಉದಾಹರಣೆಗೆ ಶ್ರೀಕೃಷ್ಣದೇವರಾಯನ ಹೆಂಡತಿಯರಾದ ನಾಗಲಾಂಬಿಕೆ, ತಿರುಮಲಾಂಬಿಕೆಯರ ಹೆಸರುಗಳಲ್ಲಿ ಅನೇಕ ಊರ ಹೆಸರುಗಳನ್ನು ನಿರ್ದೇಶನ ಮಾಡಿದ್ದಾನೆ. ನಾಗಲಾಪುರ, ತಿಮ್ಮಲಾಪುರ, ನಾಗೇನಹಳ್ಳಿ.

**೩. ದೈವತ್ವಕ್ಕೇರಿದ ದಾರ್ಶನಿಕರ ಸ್ಥಳನಾಮಗಳು**

ಗಾದಿಗನೂರು, ಜಡೆತಾತ ಕ್ಯಾಂಪ್, ಎಂಕಪ್ಪತಾತ ಕ್ಯಾಂಪ್, ರಾಮನಮಲೆ, ರಾಮಗಡ, ರಾಮಸಾಗರ, ಶಿವರಾಮ ಅವಧೂತ ಮಠ, ಗಾದಿಲಿಂಗ ತಾತ, ಜಡೆತಾತ, ಎಂಕಪ್ಪತಾತ, ಶಿವರಾ ಅವಧೂತ ಇವರುಗಳು ತಮ್ಮ ಪವಾಡಗಳ ಮೂಲಕ, ದೈವಭಕ್ತಿಯನ್ನು ಮೆರೆದು ಜನಸಾಮಾನ್ಯರಿಂದ ಪೂಜಿಸಿಕೊಂಡವರು ಮತ್ತು ಜೀವಂತ ಸಮಾಧಿಯಾಗಿ ದೈವತ್ವಕ್ಕೇರಿದವರು. ಇವರಿಗೆ ಸಂಬಂಧಿಸಿದಂಹ ಸ್ಥಳನಾಮಗಳನ್ನು ಗಮನಿಸಬಹುದು. ಕುಮಾರರಾಮ ತನ್ನ ಸಚ್ಚಾರಿತ್ರ್ಯದಿಂದಾಗಿ ಉತ್ತರ ಕರ್ನಾಟಕದ ಜನಪದರಲ್ಲಿ ಇಂದಿಗೂ ಪೂಜೆಗೊಳ್ಳುತ್ತಿದ್ದಾನೆ. ಆತನನ್ನು ದೈವವೆಂದು ಬಗೆದು ಆತನ ಮೂರ್ತಿಯನ್ನು ಮಾಡಿ ದೇವಾಲಯ ನಿರ್ಮಿಸಿ ಪೂಜೆ ಮಾಡುತ್ತಿದ್ದಾರೆ. ಈತನ ಹೆಸರಿನಲ್ಲಿಯೂ ಅನೇಕ ಊರುಗಳಲ್ಲಿ ದೇವಾಲಯಗಳಿರುವುದನ್ನು ನೋಡಬಹುದಾಗಿದೆ. ರಾಮಾಯಣದಲ್ಲಿ ಬರುವ ರಾಮನ ಬೇರೆ ಜನಪದರಲ್ಲಿ ಪೂಜೆಗೊಳ್ಳುವ ಕುಮಾರರಾಮನೇ ಬೇರೆಯಾಗಿದ್ದಾನೆ. ಬಳ್ಳಾರಿ ಪರಿಸರದಲ್ಲಿ ಕುಮಾರರಾಮನಿಗೆ ಸಂಬಂಧಿಸಿದಂತಹ ಸ್ಥಳಗಳು ಹೆಚ್ಚಿರುವುದನ್ನು ಗಮನಿಸಲಾಗಿದೆ.

ಹೀಗೆ ಬಳ್ಳಾರಿ ಪರಿಸರದಲ್ಲಿ ವ್ಯಕ್ತಿನಾಮಗಳನ್ನು ಮತ್ತು ಸ್ಥಳನಾಮಗಳನ್ನು ಗಮನದಲ್ಲಿರಿಸಿಕೊಂಡು, ಈ ಪರಿಸರದಲ್ಲಿರುವ ಭೌಗೋಳಿಕ, ಸಾಂಸ್ಕೃತಿಕ ಸ್ವರೂಪಕ್ಕನುಗುಣವಾಗಿ ಅವುಗಳನ್ನು ವರ್ಗೀಕರಿಸ ಲಾಗಿದೆ.



## ಅಧ್ಯಾಯ : ನಾಲ್ಕು

# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳ ರಚನೆ

೪.೧. ವ್ಯಕ್ತಿನಾಮಗಳ ರಚನೆ

೪.೧.೧. ಸ್ಥಳವಾಚಿ

೪.೧.೨. ವೃತ್ತಿವಾಚಿ

೪.೧.೩. ಜಾತಿವಾಚಿ

೪.೧.೪. ವ್ಯಕ್ತಿವಾಚಿ

೪.೧.೫. ವಸ್ತುವಾಚಿ

೪.೧.೬. ಬಂಧುವಾಚಿ

೪.೧.೭. ಶಿಲಾವಾಚಿ

೪.೧.೮. ಶರೀರ ಅವಯವಸೂಚಿ

೪.೨. ಸ್ಥಳನಾಮಗಳ ರಚನೆ

೪.೩. ಜನವಾಸ ಮತ್ತು ಸ್ಥಳನಾಮಗಳು

೪.೪. ಸ್ಥಳನಾಮ ಘಟಕಗಳು

೪.೫. ದೈವಮೂಲ ಸ್ಥಳನಾಮಗಳ ರಚನೆ

# ಅಧ್ಯಾಯ: ನಾಲ್ಕು

# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳ ರಚನೆ

ಮಾನವ ಬದುಕಿನ ಜೀವನಾವರ್ತನ ಹಾಗೂ ವಾರ್ಷಿಕಾವರ್ತನದ ಆಚರಣೆಗಳಲ್ಲಿ ದೈವತ್ವವು ಮಹತ್ವದ್ದಾಗಿ ಕಂಡುಬರುತ್ತದೆ. ಹೆಸರುಗಳನ್ನು ಇಡುವಾಗ, ಜವಳ ತೆಗೆಯುವಾಗ, ಮದುವೆ ಸಂದರ್ಭದಲ್ಲಿ, ಬಿತ್ತನೆ ಮಾಡುವಾಗ, ಫಸಲು ಬಂದಾಗ, ರಾಶಿ ಮಾಡುವಾಗ, ಹಂತಿ ಕಟ್ಟುವಾಗ ಇನ್ನು ಅನೇಕ ಕಾರ್ಯಗಳಲ್ಲಿ ದೇವರನ್ನು ಆರಾಧಿಸಲಾಗುತ್ತದೆ. ಹುಟ್ಟಿದ ಮಕ್ಕಳಿಗೆ ಆರೋಗ್ಯ ಸಮಸ್ಯೆ ಕಾಣಿಸಿಕೊಂಡಾಗ, ದನಕರುಗಳಿಗೆ ಬೇನೆ ಬಂದಾಗ, ಮಳೆಬರುವುದು ತಡವಾದಾಗ, ದೈವದ ಹೆಸರಿನಲ್ಲಿ ವಿಶೇಷ ಪೂಜೆಯನ್ನು ಮಾಡಲಾಗುತ್ತದೆ. ಒಟ್ಟಾರೆ ಭಾರತದಲ್ಲಿ ದೈವಪೂಜೆಗೆ ಇರುವಷ್ಟು ಮಾನ್ಯತೆ ಬೇರಾವ ದೇಶದಲ್ಲಿ ಇಲ್ಲ ಎನ್ನಬಹುದು. ನಾಮಾಧ್ಯಯನದಲ್ಲಿ 'ದೈವ'ದ ಪಾತ್ರ ಪ್ರಮುಖವಾದುದಾಗಿದೆ. ಚರಿತ್ರೆಯನ್ನು ನಾವು ಗಮನಿಸಿದಾಗ, ವ್ಯಕ್ತಿಗಳ ಹೆಸರುಗಳ ಮೇಲೆ ಮತ್ತು ಗ್ರಾಮನಾಮಗಳ ಮೇಲೆ ದೈವದ ಪ್ರಭಾವವು ಎಷ್ಟಿದೆ ಎಂಬುದನ್ನು ನಾವು ಕಾಣಬಹುದಾಗಿದೆ. ಕಾಲಾಂತರದಲ್ಲಿ ದೇವರ ಹೆಸರನ್ನು ಇಡುವ ಸ್ವರೂಪದಲ್ಲಿ ಬದಲಾವಣೆಯಾಗಿದೆ.

ಜನಪದ ದೈವಗಳು ದ್ರಾವಿಡ ಸಂಸ್ಕೃತಿಯ ಪ್ರತೀಕವಾಗಿದ್ದರೆ, ಶಿಷ್ಟದೈವಗಳು ಆರ್ಯ ಸಂಸ್ಕೃತಿಯ ಪ್ರತಿಬಿಂಬವಾಗಿವೆ. ದ್ರಾವಿಡ ಸಂಸ್ಕೃತಿಯ ಮೇಲೆ ಆರ್ಯ ಸಂಸ್ಕೃತಿಯ ಪ್ರಭಾವ, ಆರ್ಯ ಸಂಸ್ಕೃತಿಯ ಮೇಲೆ ದ್ರಾವಿಡ ಸಂಸ್ಕೃತಿಯ ಪ್ರಭಾವ ಆಗುತ್ತಲೇ ಬಂದಿದೆ. ಹಾಗೆಯೇ ಜನಪದ ದೈವಗಳ ಮೇಲೆ ಶಿಷ್ಟ ದೈವಗಳ ಪ್ರಭಾವ, ಶಿಷ್ಟ ದೈವಗಳ ಮೇಲೆ ಜನಪದ ದೈವಗಳ ಪ್ರಭಾವ ಉಂಟಾಗಿದೆ. "ಇವುಗಳು ಸಂಸ್ಕೃತಿ–ಸಂಸ್ಕೃತಿಗಳ ನಡುವೆ ನಡೆಯುವ ಸಂಘರ್ಷ ಅಥವಾ ಸಮನ್ವಯದ ಮೂಲಕ ಏರ್ಪಡುವಂತಹುಗಳಾಗಿವೆ. ಹೀಗೆ ಮನುಷ್ಯ ಮನುಷ್ಯರ ನಡುವೆ ಸಂಘರ್ಷ ಏರ್ಪಟ್ಟಾಗ, ಒಂದು ಸಮುದಾಯದೊಳಗೆ ಬೇರೆ ಬೇರೆ ಪಂಗಡಗಳು ಮೇಲುಗೈ ಸಾಧಿಸಲು, ನಡೆಸುವ ಪ್ರಯತ್ನದೊಂದಿಗೆ ಧರ್ಮ–ಉಗಮವಾಯಿತೆಂದು ದಿ. ದೇವಿಪ್ರಸಾದ್ ಚಟ್ಟೋಪಾಧ್ಯಾಯರು ಅಭಿಪ್ರಾಯಪಡುತ್ತಾರೆ.

### ೪.೧. ವ್ಯಕ್ತಿನಾಮಗಳ ರಚನೆ

ಮಗು ಹುಟ್ಟುವುದಕ್ಕಿಂತ ಮುಂಚಿತವಾಗಿಯೇ ಯಾವ ಹೆಸರಿಡಬೇಕೆಂಬ ಚರ್ಚೆ ಪ್ರತಿಯೊಂದು ಮನೆಯಲ್ಲಿ ಇಂದು ಕಾಣುತ್ತೇವೆ. ಮಗ/ಮಗಳ ಹೆಸರು ಆಕರ್ಷಕವಾಗಿರಬೇಕು, ಚಿಕ್ಕದಾಗಿರಬೇಕು,

ಅದರಲ್ಲಿ ಹೊಸತನವಿರಬೇಕು. ಆ ಹೆಸರನ್ನು ಯಾರೂ ಇಟ್ಟಿರಬಾರದು ಎನ್ನುವ ದಂಪತಿಗಳು ಹಲವರಿದ್ದಾರೆ. ಹೆಸರು ಹೇಗಿರಬೇಕು ಎಂಬುದರ ಬಗೆಗೆ ಬಹಳ ಹಿಂದಿನಿಂದಲೂ ಚಿಂತನೆಗಳು ನಡೆದಿವೆ. ಏಕೆಂದರೆ ಧರ್ಮಸೂತ್ರಗಳು ಹೇಳುವ ಹದಿನಾರು ಸಂಸ್ಕಾರಗಳಲ್ಲಿ 'ನಾಮಕರಣ'ವೂ ಒಂದು ಬೌದ್ಧಾಯನ ಗೃಹಸೂತ್ರದಲ್ಲಿ ಯಾವ ವರ್ಗದವರಿಗೆ ಯಾವ ರೀತಿಯ ಹೆಸರು ಇಟ್ಟುಕೊಳ್ಳಬೇಕು ಎಂಬ ವಿವರಗಳು ದೊರೆಯುತ್ತವೆ. ಮಾನವ ಗೃಹ್ಯಸೂತ್ರದಲ್ಲೂ ಇದರ ಬಗ್ಗೆ ವಿವರಣೆಗಳು ದೊರೆಯುತ್ತದೆ. ಹೆಸರಿನಲ್ಲಿ ಎಷ್ಟು ಅಕ್ಷರಗಳಿರಬೇಕು, ಹುಟ್ಟಿದ ಮಗು ಗಂಡಾದರೆ ಯಾವ ಹೆಸರು, ಹೆಣ್ಣಾದರೆ ಯಾವ ಹೆಸರು, ಯಾವುದು ಸೂಕ್ತ, ಯಾವುದು ನಿಷಿದ್ಧ, ನಿಷಿದ್ಧಗಳಾದರೆ ಅಪವಾದಗಳಿರುತ್ತವೆ. ಹೀಗೆ ಅನೇಕ ಮಾಹಿತಿಗಳು ದೊರೆಯುತ್ತವೆ. ಜನ್ಮ ನಕ್ಷತ್ರಕ್ಕನುಗುಣವಾಗಿ ಹೆಸರನ್ನಿಡುವುದು ಸರ್ವೇಸಾಮಾನ್ಯವಾಗಿ ಕಾಣಬಹುದಾಗಿದೆ.

"ಯಾವುದೇ ಭಾಷೆಯ ಆರಂಭದ ಘಟಕಗಳು ನಾಮ"ಗಳೇ ಆಗಿವೆಯೆಂದು ವಿದ್ವಾಂಸರು ಹೇಳುತ್ತಾರೆ. (ಕಲಬುರ್ಗಿ ಎಂ.ಎಂ., ೧೯೮೯, ಪುಟ-೪) ಹೆಸರುಗಳು ಸಂಸ್ಕೃತಿಯ ಅಧ್ಯಯನದಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತವೆ. ಒಂದು ಹೆಸರಿನಲ್ಲಿ ಒಂದು ಸಂಸ್ಕೃತಿಯ ಹಲವಾರು ಅಂಶಗಳು ಅಡಗಿರುತ್ತವೆಂಬುದನ್ನು ಗಮನಿಸಬಹುದು. ವ್ಯಕ್ತಿನಾಮಗಳ ರಚನೆಯಲ್ಲಿ ಆಯಾ ಕಾಲದ ಭಾಷಿಕ ಚಹರೆಗಳನ್ನು ಕಂಡುಕೊಳ್ಳಲು ಸಾಧ್ಯವಿದೆ. ಹೆಸರುಗಳ ಪೂರ್ವ ಮತ್ತು ಉತ್ತರ ಪದಗಳಲ್ಲಿ ಕೆಲವು ರೀತಿಯ ಭಾಷೆಯ ಅವಸ್ಥಾಂತರಗಳನ್ನು ಹಾಗೆಯೇ ಭಾಷೆಯ ಮೂಲಭೂತ ಕೆಲವು ತತ್ವಗಳನ್ನು ಗುರುತಿಸಲು ಸಾಧ್ಯವಿದೆ. ಕಾರಣ ವ್ಯಕ್ತಿನಾಮಗಳ ಅಧ್ಯಯನ ಒಂದರ್ಥದಲ್ಲಿ ಭಾಷೆಯ ಶಾಸ್ತ್ರೀಯ ಅಧ್ಯಯನವೂ ಆಗಿರುತ್ತದೆ ಎನ್ನಬಹುದು.

ಜನ್ನ, ಅತ್ತಿಮಬ್ಬೆ, ಅಬ್ಬಣಬ್ಬೆ, ದಿವ್ಯಗಾವುಂಡ, ಏಚ, ಮಾವುಂಡರಸ, ಕೇತಲಾದೇವಿ, ಸಾವಿಯಬ್ಬೆ ಈ ರೀತಿಯ ಹೆಸರುಗಳನ್ನು ಗಮನಿಸಿದಾಗ, ಹತ್ತನೇ ಶತಮಾನದ ಭಾಷಿಕ ಸ್ವರೂಪವನ್ನು ತಿಳಿಯಬಹುದು. ಈ ರಚನೆಗಳ ಮೂಲಕ ಸಮಕಾಲೀನ ಭಾಷಿಕ ಬಂಧ ಹಾಗೂ ಅವುಗಳ ನಿರ್ದೇಶನದ ಸಂಗತಿಗಳನ್ನು ತಿಳಿದುಕೊಳ್ಳಬಹುದು. ಹಾಗೆಯೇ ಶರಣರ ಹೆಸರುಗಳನ್ನು ಗಮನಿಸಿದಾಗ, ನಡುಗನ್ನಡದ ಭಾಷಿಕ ಸಂರಚನೆಯನ್ನು ಕಾಣಬಹುದು. ಹೀಗೆ ಆಯಾ ಕಾಲದ ಸಾಮಾಜಿಕ ಪರಿಸರಕ್ಕನುಗುಣವಾಗಿ ಭಾಷಿಕ ಅಂಶಗಳೂ ಹೆಸರಿನ ಮೇಲೆ ಪ್ರಭಾವ ಬೀರಿವೆ ಎಂಬುದನ್ನು ಗಮನಿಸಬಹುದು. ಕಾಲಾಂತರದಲ್ಲಿ ಅವುಗಳು ಬದಲಾವಣೆಗೆ ಒಳಗಾಗುವುದು ಸಹಜವಾಗಿದೆ. ಈ ಸಹಜತೆಯೊಂದಿಗೆ ಸಮಕಾಲೀನ ಭಾಷೆಯೂ ವ್ಯಕ್ತಿ ಹೆಸರುಗಳ ಮೇಲೆ ಪ್ರಭಾವಿಸುತ್ತಿರುತ್ತದೆ. ಈ ದೃಷ್ಟಿಯಿಂದ ಭಾಷಿಕ ಅವಸ್ಥಾಂತರಗಳ ಅಧ್ಯಯನಕ್ಕೆ ವ್ಯಕ್ತಿನಾಮಗಳೂ ಆಕರಗಳಾಗಬಲ್ಲವು.

"ಬಾಹ್ಯದಲ್ಲಿ ಕೇವಲ ಶಬ್ದಗಳಾಗಿ ಕಂಡರೂ ಅವುಗಳಲ್ಲಿ 'ಆಕೃತಿ' ದೃಷ್ಟಿಯಿಂದ ಒಂದು ವೈಜ್ಞಾನಿಕ ರಚನೆ ಕಂಡುಬರುತ್ತದೆ; 'ಆಶಯ' ದೃಷ್ಟಿಯಿಂದ ಅವುಗಳಲ್ಲಿ ಸಾಂಸ್ಕೃತಿಕ ದ್ರವ್ಯ ತುಂಬಿಕೊಂಡಿರುತ್ತದೆ. ಪರಸ್ಪರ ಕೊಂಡಿ ಕಳಚಿಕೊಂಡಿದ್ದರೂ ಆಳವಾದ ಅಧ್ಯಯನದಿಂದ ಅವುಗಳ

ರಾಚನಿಕ, ಸಾಂಸ್ಕೃತಿಕ ಕೊಂಡಿಯನ್ನು ಮತ್ತೆ ಜೋಡಿಸಬಹುದಾಗಿದೆ." (ಕಲಬುರ್ಗಿ ಎಂ.ಎಂ., ೨೦೧೨, ಪುಟ-೪) ಆದ್ದರಿಂದ ಭಾಷಿಕ ಘಟಕಗಳಾದ ವ್ಯಕ್ತಿನಾಮಗಳಿಂದ ಭೌಗೋಳಿಕ ಪರಿಸರದಲ್ಲಿ ಪ್ರಾದೇಶಿಕ ವೈಶಿಷ್ಟ್ಯಗಳನ್ನು ಸೂಕ್ಷ್ಮವಾಗಿ ತಿಳಿಯಲು ಅವಕಾಶವಿದೆ.

ಈ ಮೇಲಿನ ಸಂಗತಿಗಳನ್ನು ಗಮನಿಸಿದಾಗ ವ್ಯಕ್ತಿನಾಮಗಳ ರಚನೆಯು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ನಾಮಾಧ್ಯಯನದಲ್ಲಿ ವರ್ಣನಾತ್ಮಕ ಮಾದರಿಯನ್ನು ಇದು ಅವಲಂಬಿಸಿದೆ. ಬಳ್ಳಾರಿ ಪರಿಸರದಲ್ಲಿ ಪ್ರಸ್ತುತ ಚಲಾವಣೆಯಲ್ಲಿರುವ ವ್ಯಕ್ತಿನಾಮಗಳೊಂದಿಗೆ ವಿವಿಧ ಆಯಾಮಗಳಲ್ಲಿ ರಚನೆಯ ಸ್ವರೂಪವನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಮುಖ್ಯವಾಗಿ ವ್ಯಕ್ತಿನಾಮಗಳ ನಿರ್ದಿಷ್ಟ ಮತ್ತು ವಾರ್ಗಿಕಗಳು, ಕುಲನಾಮಗಳ ರಚನೆಯನ್ನು ಗಮನಿಸಲಾಗಿದೆ.

**ನಿರ್ದಿಷ್ಟ-ವಾರ್ಗಿಕ**

ವ್ಯಕ್ತಿನಾಮವನ್ನು ವಿದ್ವಾಂಸರು ಎರಡು ಭಾಗಗಳಾಗಿ ವಿಭಜನೆ ಮಾಡಿದ್ದಾರೆ. ಮೊದಲನೆಯ ಭಾಗವನ್ನು 'ನಿರ್ದಿಷ್ಟ' ಎಂದು ಎರಡನೆಯ ಭಾಗವನ್ನು 'ವಾರ್ಗಿಕ' ಎಂದು ಹೇಳಿದ್ದಾರೆ. ನಿರ್ದಿಷ್ಟ ಹಾಗೂ ವಾರ್ಗಿಕಗಳ ಸಂಕೀರ್ಣ ರೂಪವೇ ವ್ಯಕ್ತಿನಾಮ. ಇವರೆಡರಲ್ಲಿ ನಿರ್ದಿಷ್ಟ ಘಟಕವು ವ್ಯಕ್ತಿನಾಮದ ಪ್ರಧಾನ ಅಂಗವಾಗಿರುತ್ತದೆ. ಜೊತೆಗೆ ಅದು ವ್ಯಕ್ತಿಯ ನಿಜನಾಮವಾಗಿರುತ್ತದೆ. ಇದು ಮನೆತನದ ಧರ್ಮ, ಹೆಸರಿಟ್ಟವರ ಆಶಯ ಅವರ ಸಂಸ್ಕೃತಿಯ ಬಿಂಬವನ್ನು ಗುರುತಿಸುತ್ತದೆ. ಈ ಘಟಕದಿಂದ ವ್ಯಕ್ತಿಯನ್ನು ಇತರರಿಂದ ಪ್ರತ್ಯೇಕಿಸಿ ಗುರುತಿಸಲಾಗುತ್ತದೆ. ಸಂಬೋಧನೆಯಲ್ಲಿ ನಿರ್ದಿಷ್ಟ ಭಾಗವನ್ನು, ಹೆಸರನ್ನು, ಸಣ್ಣದಾಗಿ ಕರೆಯಲು ಮತ್ತು ವಿರೂಪಗೊಳಿಸಲು ಬಳಸುತ್ತಾರೆ. ಆ ತರಹದ ಉದಾಹರಣೆಗಳನ್ನು ಈ ಕೆಳಗಿನ ಹೆಸರುಗಳಲ್ಲಿ ಕಾಣಬಹುದು.

| **ಪೂರ್ಣ ಹೆಸರು** | **ಸಂಕ್ಷಿಪ್ತ ರೂಪ** | **ವಿರೂಪ** |
|---|---|---|
| ಮಾರ್ಗದಪ್ಪ | ಮಾರ್ಗ | ಮಾರ್ಗಿ, ಮಾರ್ಗ್ಯ |
| ಮಾರಯ್ಯ | ಮಾರು, ಮಾರ | ಮಾರಿ |
| ರಾಮಣ್ಣ | ರಾಮು, ರಾಮ | ರಾಮಿ |
| ಕೊಟ್ರೇಗೌಡ | ಕೊಟ್ರು, ಕೊಟ್ರ | ಕೊಟ್ರ್ಯಾ, ಕೊಟ್ರಿ |
| ಮಲ್ಲಯ್ಯಸ್ವಾಮಿ | ಮಲ್ಲು | ಮಲ್ಯಾ |
| ಸೋಮಕ್ಕ | ಸೋಮು | ಸೋಮಿ |
| ಕಾಳಮ್ಮ | ಕಾಳು | ಕಾಳಿ |
| ಗಂಗಮ್ಮ | ಗಂಗು, ಗಂಗ | ಗಂಗಿ |
| ದುರುಗಮ್ಮ | ದುರು | ದುರುಗಿ |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ, ವ್ಯಕ್ತಿಯ ಹೆಸರಿನ ನಿರ್ದಿಷ್ಟ ಭಾಗವನ್ನು ಸಂಕ್ಷಿಪ್ತಗೊಳಿಸಿ ಮತ್ತು ವಿರೂಪಗೊಳಿಸಿ ಬಳಸಲಾಗಿದೆ. ನಿರ್ದಿಷ್ಟ ಭಾಗವನ್ನು ಬಳಸಿದಂತೆ, ವ್ಯಕ್ತಿನಾಮದ ವಾರ್ಗಿಕ ಭಾಗವನ್ನು ಬಳಸಲಿಕ್ಕೆ ಬರುವುದಿಲ್ಲ. ಹೆಸರನ್ನು ಸಂಕ್ಷಿಪ್ತಗೊಳಿಸುವಾಗ ಪುರುಷ ಮತ್ತು ಸ್ತ್ರೀಯರ ಹೆಸರುಗಳು ಬಳಸಲಿಕ್ಕೆ 'ಉ'ಕಾರದಿಂದ ಸ್ವರಾಂತ್ಯವಾಗುತ್ತವೆ (ರಾಮು, ಕಾಳು) ಹಾಗೆಯೇ ಪುರುಷ ಮತ್ತು ಸ್ತ್ರೀಯರ ಹೆಸರುಗಳನ್ನು ಗಮನಿಸಿದಾಗ, ಪುರುಷರ ನಿರ್ದಿಷ್ಟ ಭಾಗವನ್ನು 'ಯ್ಯ' (ರಾಮ್ಯಾ, ದುರುಗ್ಯಾ) ಕಾರಂತದಿಂದಲೂ, ಸ್ತ್ರೀಯರ ಹೆಸರಿನ ನಿರ್ದಿಷ್ಟ ಭಾಗವನ್ನು 'ಇ' (ಸೋಮಿ, ಪಾರಿ) ಕಾರಂತದಿಂದಲೂ ವಿರೂಪ ಮಾಡಿ ಬಳಸುವುದುಂಟು. ಎಲ್ಲಾ ಸಂದರ್ಭಗಳಲ್ಲಿ ಅವುಗಳನ್ನು 'ವಿರೂಪ' ರೂಪಗಳೆಂದು ಕರೆಯಲಾಗುವುದಿಲ್ಲ. ಕೆಲವೊಮ್ಮೆ ಪ್ರೀತಿಯಿಂದಲೂ ಹಾಗೆ ಕರೆಯಲೂಬಹುದು. ಹೀಗೆ ವ್ಯಕ್ತಿನಾಮದ ಪೂರ್ವಪದವಾದ ನಿರ್ದಿಷ್ಟ ಭಾಗದ ಹೆಸರು ಒಂದು ಸಂಸ್ಕೃತಿಯೊಳಗಣ ದೈವ, ಸಮಾಜ, ಆಚರಣೆ, ನಂಬಿಕೆ, ಭೌಗೋಳಿಕ ಚಹರೆ, ಭಾಷೆ ಮುಂತಾದವುಗಳನ್ನು ತಿಳಿಯಬಹುದಾಗಿದೆ.

ಭಾಷೆಯ ಒಂದು ಪದ ಘಟಕವೇ ವ್ಯಕ್ತಿನಾಮ ಆಗುವುದುಂಟು. ಉದಾಹರಣೆಗೆ ಮಾರೇಶ್, ಮಹೇಶ್, ಪಾರ್ವತಿ, ಸಾವಿತ್ರಿ, ಶಂಕರ್, ಮಂಜು, ರಾಧಾ, ಧರಣೀ, ತಾಯಶ್ರೀ ಮೊದಲಾದವು. ವ್ಯಕ್ತಿನಾಮದ ಈ ಘಟಕಗಳಿಗೆ ನಾಮಶಾಸ್ತ್ರದ ಪರಿಭಾಷೆಯಲ್ಲಿ 'ನಿರ್ದಿಷ್ಟ'ವೆಂದು ಕರೆಯಲಾಗುತ್ತದೆ. ನಿರ್ದಿಷ್ಟಗಳೇ ವ್ಯಕ್ತಿನಾಮದ ಕೇಂದ್ರ ಭಾಗವಾಗಿರುವುದರಿಂದ ಅವು ಪ್ರಮುಖವಾದ ಸ್ಥಾನವನ್ನು ಪಡೆದುಕೊಳ್ಳುತ್ತವೆ. ವ್ಯಕ್ತಿನಾಮಗಳಿಗೆ ವೃತ್ತಿ, ಜಾತಿ, ಹುದ್ದೆ, ಗೌರವಸೂಚಕ ಪದಗಳು ಮೊದಲಾದವುಗಳು ಸೇರುತ್ತವೆ ಇವುಗಳನ್ನೇ 'ವಾರ್ಗಿಕ'ಗಳೆಂದು ಕರೆಯಲಾಗುತ್ತದೆ. 'ನಿರ್ದಿಷ್ಟದಂತೆ ವಾರ್ಗಿಕಗಳಿಗೂ ಕೂಡ ಅದರದೇ ಆದ ಮಹತ್ವವಿದೆ. ವಾರ್ಗಿಕಗಳು ನಿರ್ದಿಷ್ಟದ ಜತೆ ಬಳಕೆಯಾಗುವಾಗ, ಕೆಲವು ಸಂದರ್ಭಗಳಲ್ಲಿ ನಿರ್ದಿಷ್ಟದ ಪೂರ್ವ ಪದಗಳಾಗಿಯೂ, ಕೆಲವು ಸಂದರ್ಭಗಳಲ್ಲಿ ನಿರ್ದಿಷ್ಟ ಉತ್ತರ ಪದಗಳಾಗಿಯೂ ಬಳಕೆಯಾಗುವುದನ್ನು ಕಾಣುತ್ತೇವೆ. ಹೀಗೆ ಆದಾಗ ವ್ಯಕ್ತಿನಾಮದ ಸ್ವರೂಪದಲ್ಲಿ ವ್ಯತ್ಯಾಸಗಳಾಗುತ್ತವೆ ಕೆಲವು ಉದಾಹರಣೆಗಳಿಂದ ಅವುಗಳನ್ನು ಗಮನಿಸಬಹುದು.

ನಿರ್ದಿಷ್ಟದ ಪೂರ್ವ ಪದವಾಗಿ 'ವಾರ್ಗಿಕ'ವು ಬಳಕೆಯಾದಾಗ

| **ವಾರ್ಗಿಕ** | + | **ನಿರ್ದಿಷ್ಟ** | = | **ವ್ಯಕ್ತಿನಾಮ** |
|---|---|---|---|---|
| ಕೊರಚರ | + | ನಾಗಪ್ಪ | = | ಕೊರಚರ ನಾಗಪ್ಪ |
| ಗೌಡರ | + | ಕೊಟ್ರೇಶ | = | ಗೌಡರ ಕೊಟ್ರೇಶ |
| ಡಂಬರ | + | ರೇಣುಕಮ್ಮ | = | ಡಂಬರ ರೇಣುಕಮ್ಮ |
| ಕಂಡಕ್ಟರ್ | + | ಮಾರಪ್ಪ | = | ಕಂಡಕ್ಟರ್ ಮಾರಪ್ಪ |
| ಹರಿಜನ | + | ದುರುಗಪ್ಪ | = | ಹರಿಜನ ದುರುಗಪ್ಪ |

| | | | | |
|---|---|---|---|---|
| ಪಟೇಲರ | + | ಮಲ್ಲಿಕಾರ್ಜುನ | = | ಪಟೇಲರ ಮಲ್ಲಿಕಾಜುನ |
| ಕುಂಬಾರ | + | ಬಸಪ್ಪ | = | ಕುಂಬಾರ ಬಸಪ್ಪ |
| ಮೇದರ | + | ಗೋಣಿಬಸಪ್ಪ | = | ಮೇದರ ಗೋಣಿಬಸಪ್ಪ |
| ವಡ್ಡರ | + | ಹುಲಿಗೆಮ್ಮ | = | ವಡ್ಡರ ಹುಲಿಗೆಮ್ಮ |
| ಲಿಂಗಾಯತರ | + | ಬಸಮ್ಮ | = | ಲಿಂಗಾಯತರ ಬಸಮ್ಮ |

ಮೇಲಿನ ಪಟ್ಟಿಗಳನ್ನು ಗಮನಿಸಿದಾಗ ಹೆಸರುಗಳಲ್ಲಿ ಜಾತಿ, ಹುದ್ದೆ, ವೃತ್ತಿ ಸೂಚಕ ಪದಗಳನ್ನು ವ್ಯಕ್ತಿನಾಮದ ಪೂರ್ವದಲ್ಲಿ ನಾವು ಗಮನಿಸಬಹುದಾಗಿದೆ. ಸಮೂಹದಿಂದ ವ್ಯಕ್ತಿಯನ್ನು ಗುರುತಿಸುವಾಗ, ಮೇಲಿನ ಪೂರ್ವ ಪದಗಳು ಪ್ರಧಾನ ಪಾತ್ರ ವಹಿಸುತ್ತಿದ್ದು ಮತ್ತು ವ್ಯಕ್ತಿಯ ಒಂದು ವರ್ಗವನ್ನು ಸೂಚಿಸುವುದರಿಂದ ಇವುಗಳನ್ನು ವಾರ್ಗಿಕಗಳೆಂದು ಪರಿಗಣಿಸಲಾಗಿದೆ. ಅಲ್ಲದೆ ನಿರ್ದಿಷ್ಟದ ಜೊತೆಗೆ, ಗೌರವವಾಚಿ (ಬಂಧುಸೂಚಕ) ಜಾತಿ, (ನಾಯ್ಕ, ನಾಯಕ) ಸೂಚಕ ಪದಗಳು ಬಳಕೆಯಾಗಿದ್ದರೂ, ಅವು ಕ್ರಿಯಾತ್ಮಕತೆಯನ್ನು ಕಳೆದುಕೊಂಡು, ನಿರ್ದಿಷ್ಟದ ಭಾಗವಾಗಿ ಸೇರಿಹೋಗಿವೆ. ಈ ಹಿನ್ನೆಲೆಯಲ್ಲಿ ಇವುಗಳನ್ನು 'ವಾರ್ಗಿಕ'ಗಳೆಂದು ಪರಿಗಣಿಸಲಾಗಿಲ್ಲ. 'ಜಾತಿ', 'ಹುದ್ದೆ', 'ವೃತ್ತಿ' ಸೂಚಕ ಪದಗಳು ನಿರ್ದಿಷ್ಟದ ಪೂರ್ವದಲ್ಲಿ ವಾರ್ಗಿಕಗಳಾಗಿ ಬಳಕೆಯಾಗುವಂತೆ, ಗೌರವವಾಚಿ (ಅಪ್ಪ, ಅಮ್ಮ, ಅಣ್ಣ, ಅಕ್ಕ, ಅಯ್ಯ, ಅವ್ವ) ಪದಗಳು ಬಳಕೆಯಾವುದಿಲ್ಲ.

ನಿರ್ದಿಷ್ಟದ ಉತ್ತರ ಪದಗಳಾಗಿ 'ವಾರ್ಗಿಕ'ವು ಬಳಕೆಯಾಗುವುದಿಲ್ಲ.

| **ವಾರ್ಗಿಕ** | + | **ನಿರ್ದಿಷ್ಟ** | = | **ವ್ಯಕ್ತಿನಾಮ** |
|---|---|---|---|---|
| ಹಂಪ | + | ನಾಯಕ | = | ಹಂಪನಾಯಕ |
| ರವಿ | + | ನಾಯ್ಕ | = | ರವಿನಾಯ್ಕ |
| ಕೃಷ್ಣ | + | ಶೆಟ್ಟಿ | = | ಕೃಷ್ಣ ಶೆಟ್ಟಿ |
| ಕರಿಬಸವ | + | ಅಣ್ಣ + ಗೌಡ | = | ಕರಿಬಸವನ ಗೌಡ |
| ಸಿದ್ದ | + | ಅಣ್ಣ + ಗೌಡ | = | ಸಿದ್ದನಗೌಡ |

ಮೇಲಿನ ಪಟ್ಟಿಯಲ್ಲಿ ಕೊನೆಯ ಎರಡು ಉದಾಹರಣೆಗಳನ್ನು ಗಮನಿಸಿದರೆ, ನಿರ್ದಿಷ್ಟ ಘಟಕದ ನಂತರ 'ಅಣ್ಣ' ಎಂಬ ಗೌರವಸೂಚಕ ವಾರ್ಗಿಕ ಬಂದಿದ್ದು, ಕೊನೆಯಲ್ಲಿ ಹುದ್ದೆ ಸೂಚಕ ವಾರ್ಗಿಕವಿದೆ. ಒಟ್ಟು ರಚನೆಯಲ್ಲಿ 'ಅಣ್ಣ' ಎಂಬುದು ನಿರ್ದಿಷ್ಟದೊಡನೆ ಬೆರೆತು ಹೋಗುವುದರಿಂದ, ಅದು ನಿರ್ದಿಷ್ಟದ ಭಾಗವಾಗಿ ಬಳಕೆಯಾಗುತ್ತದೆ. ಆದುದರಿಂದ ಇಲ್ಲಿ ಅಣ್ಣ ಎಂಬುದನ್ನು 'ವಾರ್ಗಿಕ' ಎಂದು ಕರೆಯಲಾಗುವುದಿಲ್ಲ. ಒಂದು ಹೆಸರಿನ ಲಿಂಗವನ್ನು ಸೂಚಿಸುವುದರೊಂದಿಗೆ ಜಾತಿ, ವೃತ್ತಿ, ವಯಸ್ಸು ಮುಂತಾದ ಕೆಲವು ವಿವರಗಳನ್ನು ವಾರ್ಗಿಕ ಭಾಗವು

ತಿಳಿಸುತ್ತದೆ. ವಾರ್ಗಿಕ ಭಾಗಗಳೊಂದಿಗೆ ಭೌಗೋಳಿಕ ಪರಿಸರ ಹಾಗೂ ಕಾಲದ ದೃಷ್ಟಿಯೂ ಮುಖ್ಯವಾಗುತ್ತದೆ. ಸ್ಥಳವಾಚಿ, ವೃತ್ತಿವಾಚಿ, ಜಾತಿವಾಚಿ, ವ್ಯಕ್ತಿವಾಚಿ, ವಸ್ತುವಾಚಿ, ಬಂಧುವಾಚಿ, ಶಿಲಾವಾಚಿ, ಶರೀರ ಆವಯವ ಸೂಚಿ, ವ್ಯಕ್ತಿನಾಮಗಳ ಕುರಿತಾಗಿ ಹೀಗೆ ಮುಂದಿನಂತೆ ವ್ಯಕ್ತಿನಾಮಗಳಲ್ಲಿ ಹಲವಾರು ವೈವಿಧ್ಯತೆಗಳಿರುವುದನ್ನು ಬಳ್ಳಾರಿ ಪರಿಸರದಲ್ಲಿ ಕಾಣಬಹುದಾಗಿದೆ. ವ್ಯಕ್ತಿನಾಮಗಳ ಸ್ವರೂಪವನ್ನು ಅನುಲಕ್ಷಿಸಿ ದೈವಮೂಲ ವ್ಯಕ್ತಿನಾಮಗಳನ್ನು ಅಧ್ಯಯನ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಭಾಗಿಸಿಕೊಳ್ಳಲಾಗಿದೆ.

**೪.೧.೧. ಸ್ಥಳವಾಚಿ**

ಪೂರ್ವಜರ ಹೆಸರುಗಳಲ್ಲಿಯೂ ಕೂಡ ಗ್ರಾಮನಾಮಗಳು ಸೇರಿಕೊಂಡಿರುವುದನ್ನು ನಾವು ಕಾಣುತ್ತೇವೆ. ಉದಾಹರಣೆಗೆ ಮಂಡಿಗೆಯ ಮಾದಿರಾಜ, ಹಾವಿನಾಳ ಕಲ್ಲಯ್ಯ ಇಂತಹ ಪ್ರಾಚೀನ ನಾಮಗಳಲ್ಲಿ ಗ್ರಾಮಗಳ ಸೂಚನೆ ಇರುವುದರಿಂದ, ಈ ಪದ್ಧತಿ ತಕ್ಕಮಟ್ಟಿಗೆ ಹಳೆಯದೇ ಇರಬೇಕು. ತಮ್ಮ ಹೆಸರಿನ ಪೂರ್ವದಲ್ಲಿ ಅಥವಾ ಹೆಸರಿನ ಉತ್ತರ ಭಾಗದಲ್ಲಿ ಊರಿನ ಹೆಸರುಗಳನ್ನು ಸೇರಿಸಿಕೊಂಡಿರುವುದನ್ನು ನಾವಿಂದು ಹಲವು ಹೆಸರುಗಳಲ್ಲಿ ಕಾಣುತ್ತೇವೆ. ಹೆಸರಿನೊಂದಿಗೆ ಗ್ರಾಮನಾಮಗಳನ್ನು ಸೇರಿಸಿಕೊಳ್ಳುವುದರ ಉದ್ದೇಶ, ತಮ್ಮ ಹೆಸರಿನೊಂದಿಗೆ ಊರ ಹೆಸರೂ ಚಿರಪರಿಚಿತವಾಗಬೇಕೆಂಬುದು. ತಾವು ಮೊದಲಿದ್ದ ಊರನ್ನು ಬಿಟ್ಟು ಬೇರೆ ಸ್ಥಳದಲ್ಲಿ ನೆಲೆಸಿದಾಗ, ಆ ಊರಿನ ನೆನಪಿಗೋಸ್ಕರ ಊರ ಹೆಸರನ್ನು ತಮ್ಮ ಹೆಸರಿನಲ್ಲಿ ಸೇರಿಸಿಕೊಂಡಿರುವ ಉದ್ದೇಶಗಳಿರಬೇಕು ಎಂದೆನಿಸುತ್ತದೆ. ಅಂತಹ ಹಲವಾರು ಹೆಸರುಗಳಿರುವುದನ್ನು ಕನ್ನಡ ಕವಿ ಮತ್ತು ವಿಮರ್ಶಕರ ಹೆಸರುಗಳಲ್ಲಿ ಈ ಕೆಳಗಿನಂತೆ ನೋಡಬಹುದು. ಉದಾಹರಣೆಗೆ ಮುದೆನೂರು ಸಂಗಣ್ಣ, ಬೆಸಗರ ಹಳ್ಳಿ ರಾಮಣ್ಣ, ಮಾವಿನ ಕೆರೆ ರಂಗನಾಥನ್, ಕರೀಗೌಡ ಬೀಚನಹಳ್ಳಿ, ಮೊಗಳ್ಳಿ ಗಣೇಶ್, ರಹಮತ್ ತರೀಕೆರೆ, ಪ್ರಹ್ಲಾದ ಅಗಸನಕಟ್ಟೆ, ಅಮರೇಶ ನುಗಡೋಣಿ, ನಟರಾಜ್ ಹುಳಿಯಾರ್

ಹೀಗೆ ಅನೇಕರು ತಮ್ಮ ಹೆಸರುಗಳ ಮುಂದೆ ಅಥವಾ ಹಿಂದೆ ಸ್ಥಳವಾಚಿ ಹೆಸರುಗಳು ಸೇರಿಸಿಕೊಂಡಿರುವುದನ್ನು ಗಮನಿಸುತ್ತೇವೆ. ಹಾಗೆಯೇ ಬಳ್ಳಾರಿ ಪರಿಸರದಲ್ಲಿಯೂ ವ್ಯಕ್ತಿಗಳು ತಮ್ಮ ಹೆಸರುಗಳೊಂದಿಗೆ ಊರ ಹೆಸರುಗಳನ್ನು, ಸ್ಥಳಗಳ ಹೆಸರುಗಳನ್ನು ಸೇರಿಸಿಕೊಂಡಿರುವ ಉದಾಹರಣೆಗಳನ್ನು ಈ ಕೆಳಗಿನಂತೆ ನೋಡಬಹುದು. ಇಲ್ಲಿ ಸ್ಥಳವಾಚಿ ಎಂದರೆ ಕೇವಲ ಗ್ರಾಮನಾಮಗಳಷ್ಟೇ ಅಲ್ಲ ಕೆರೆ, ಗುಡ್ಡ, ಹಳ್ಳ-ಕೊಳ್ಳ ಇನ್ನು ಮುಂತಾದವುಗಳು ಸೇರಿಕೊಳ್ಳುತ್ತವೆ. ಬಳ್ಳಾರಿ ಜಿಲ್ಲೆಯಲ್ಲಿರುವ ವ್ಯಕ್ತಿನಾಮಗಳನ್ನು ಗಮನಿಸಿದಾಗ, ಹೆಚ್ಚಾಗಿ ವ್ಯಕ್ತಿ ಹೆಸರುಗಳ ಪೂರ್ವದಲ್ಲಿ ಸ್ಥಳಗಳು ದಾಖಲಾಗಿರುವುದನ್ನು ಕ್ಷೇತ್ರಕಾರ್ಯದಿಂದ ಕಂಡುಕೊಳ್ಳಲಾಗಿದೆ.

| **ಸ್ಥಳನಾಮ** | + **ನಿರ್ದಿಷ್ಟ** | = | **ವ್ಯಕ್ತಿನಾಮ** |
|---|---|---|---|
| ಮೋಕ | + ಮಲ್ಲಿಕಾರ್ಜುನ | = | ಮೋಕಾ ಮಲ್ಲಿಕಾರ್ಜುನ |
| ಬಳ್ಳಾರಿ | + ರಾಮಪ್ಪ | = | ಬಳ್ಳಾರಿ ರಾಮಪ್ಪ |

| | | | | |
|---|---|---|---|---|
| ಹೆಗ್ಡಾಳ್ | + | ಕನಕಪ್ಪ | = | ಹೆಗ್ಡಾಳ್ ಕನಕಪ್ಪ |
| ಹಡಗಲಿ | + | ದುರುಗಮ್ಮ | = | ಹಡಗಲಿ ದುರುಗಮ್ಮ |
| ಕೂಡ್ಲಿಗಿ | + | ಕೊತ್ಲಯ್ಯ | = | ಕೂಡ್ಲಿಗಿ ಕೊತ್ಲಯ್ಯ |
| ಸಂಡೂರು | + | ಗಂಡಿಬಸವೇಶ್ವರ | = | ಸಂಡೂರು ಗಂಡಿಬಸವೇಶ್ವರ |
| ರಾಮಗಡ | + | ಮಸ್ತಾನಪ್ಪ | = | ರಾಮಗಡ ಮಸ್ತಾನಪ್ಪ |
| ಕೊಟ್ಟೂರು | + | ಬಸಕ್ಕ | = | ಕೊಟ್ಟೂರು ಬಸಕ್ಕ |

ಮೇಲಿನ ಪಟ್ಟಿಯಿಂದ ವಿವಿಧ ಸಮುದಾಯದ ವ್ಯಕ್ತಿನಾಮಗಳು ತಮ್ಮ ಹೆಸರಿನ ಪೂರ್ವದಲ್ಲಿ ಸ್ಥಳವಾಚಿ ಇರುವುದನ್ನು ನೋಡಬಹುದು. ಗುಡ್ಡದ ತಿಮ್ಮಪ್ಪ, ಗೋರೆಕಲ್ಲು ರಾಮಾಂಜಿನಿ, ಕೆಂಗುಂಟಿ ವೀರಭದ್ರೇಶ್ವರ ಇಂತಹ ಹೆಸರುಗಳಲ್ಲಿ ಗುಡ್ಡ, ಗೋರೆಕಲ್ಲು, ಕೆಂಗುಂಟಿ ಈ ಸ್ಥಳಗಳಲ್ಲಿ ಜನರ ವಾಸ ಇರುವುದಿಲ್ಲ ಇವುಗಳು ಕೂಡಾ ಸ್ಥಳವಾಚಿಯಲ್ಲಿ ಸ್ಥಾನವನ್ನು ಪಡೆದುಕೊಳ್ಳುತ್ತವೆ. ಹೀಗೆ ಬಳ್ಳಾರಿ ಪರಿಸರದಲ್ಲಿರುವ ಹೆಸರುಗಳನ್ನು ಗಮನಿಸಬಹುದಾಗಿದೆ.

### ೪.೧.೨. ವೃತ್ತಿವಾಚಿ

ವ್ಯಕ್ತಿನಾಮಗಳ ಉತ್ತರ ಪದದಲ್ಲಿ ಕೆಲವು ವೃತ್ತಿಗಳನ್ನು ಸೂಚಿಸುವ ಪದಗಳಿವೆ. ಇವುಗಳನ್ನು ನಾವು ಹೆಚ್ಚಾಗಿ ಆರಂಭದಲ್ಲಿ ಇದ್ದ ಹೆಸರುಗಳಲ್ಲಿ ನಾವು ಕಾಣಬಹುದಾಗಿತ್ತು. ಇಂದು ನಾವು ವೃತ್ತಿವಾಚಿಯನ್ನು ಸೇರಿಸಿಕೊಂಡ ಹೆಸರುಗಳು ಮೊದಲು ಇದ್ದುದ್ದಕ್ಕಿಂತ ಕಡಿಮೆಯೆಂದೇ ಹೇಳಬಹುದು. ಆರಂಭದಲ್ಲಿ ಈ ಬಗೆಯ ವೃತ್ತಿವಾಚಿಗಳಿರುವ ಹೆಸರುಗಳನ್ನು ಹೊಂದಿದವರು ಹೆಮ್ಮೆಯಿಂದ ನಾವು ಮಾಡುವ ವೃತ್ತಿಯ ಹೆಸರು ನಮ್ಮ ಹೆಸರುಗಳಲ್ಲಿವೆ ಎಂದು ಹೇಳಿಕೊಡುತ್ತಿದ್ದರು. ಆದರೆ ಇತ್ತೀಚಿಗೆ ಅದು ಕಡಿಮೆಯಾಗುತ್ತಿದೆ. ಇದಕ್ಕೆ ಕಾರಣ ಬದಲಾಗುತ್ತಿರುವ ಆಧುನಿಕ ಮನೋಭಾವವೆಂದೇ ಹೇಳಬಹುದು. ಈ ಹಿಂದೆ ಬಳಕೆಯಾಗುತ್ತಿದ್ದ ವಾರ್ಗಿಕದಲ್ಲಿ ಇಂದಿನ ಹೆಸರಿನೊಂದಿಗೆ ಬಳಕೆಯಾಗುವ ವಾರ್ಗಿಕಕ್ಕೂ ಯಾವುದೇ ನೇರ ಸಂಬಂಧ ಇಲ್ಲದಿರಬಹುದು. ಆದರೆ ಅವು ಪರಸ್ಪರ ವೃತ್ತಿ ಮತ್ತು ವ್ಯಕ್ತಿಗೆ ಅವಿನಾಭಾವ ಸಂಬಂಧವನ್ನು ಬೆಸೆದಿದೆ ಎನ್ನಬಹುದು. ತಾವು ಕೈಗೊಳ್ಳುವ ವೃತ್ತಿಗಳಿಂದ ಗುರುತಿಸಿಕೊಳ್ಳುವುದು ಮದ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ವ್ಯಾಪಕವಾಗಿ ಬೆಳೆದುಬಂದಿರುವುದನ್ನು ನಾವು ಗಮನಿಸಬಹುದಾಗಿದೆ. ಉದಾಹರಣೆಗೆ ಮಾದಾರ ಚೆನ್ನಯ್ಯ, ಜೇಡರ ದಾಸಿಮಯ್ಯ, ಅಂಬಿಗರ ಚೌಡಯ್ಯ, ಆಯ್ದಕ್ಕಿ ಲಕ್ಕಮ್ಮ. ಈ 'ವೃತ್ತಿವಾಚಿ' 'ವಾರ್ಗಿಕ'ಗಳು ಪುರುಷ ಪ್ರಧಾನವಾಗಿದ್ದು, ಹೆಚ್ಚಾಗಿ ಪುರುಷ ವ್ಯಕ್ತಿನಾಮಗಳಿಗೆ ಹೊಂದಿಕೊಂಡೇ ಬಂದಿರುವುದು ತಿಳಿಯುತ್ತದೆ. (ನಾರಾಯಣ ಕೆ.ವಿ., ಸಂ., ೨೦೦೦, ಪುಟ–೪೪)

ಸಾಂಪ್ರದಾಯಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರು ಹೆಚ್ಚಾಗಿ ಮನೆಯ ಆವರಣಕ್ಕಿಂತ ಮನೆಯ ಒಳಾವರಣ ಕಾರ್ಯಗಳಲ್ಲಿಯೇ ನಿರತರಾಗಿದ್ದರು. ಮನೆಯ ಹೊರಗಿನ ಕಾರ್ಯಗಳನ್ನು

ಪುರುಷನೇ ನಿರ್ವಹಿಸುತ್ತಿದ್ದನು. ಈ ಹಿನ್ನೆಲೆಯಲ್ಲಿ ಹೆಚ್ಚಾಗಿ ಸ್ತ್ರೀ ವ್ಯಕ್ತಿನಾಮಗಳಲ್ಲಿ 'ವೃತ್ತಿವಾಚಿ' ವಾರ್ಗಿಕಗಳು ಬಳಕೆಯಾಗಿರುವುದು ವಿರಳ.

ಬಳ್ಳಾರಿ ಪರಿಸರದಲ್ಲಿ ಕಾಣಬರುವ ವೃತ್ತಿವಾಚಿ ವಾರ್ಗಿಕಗಳನ್ನು ಈ ರೀತಿಯಾಗಿ ನೋಡಬಹುದು.

**೧. ಪುರುಷ ವೃತ್ತಿವಾಚಿ ವಾರ್ಗಿಕಗಳು**

ದೊರೆ – ಬೈಯಪ್ಪಣ್ಣ ದೊರೆ

ಗೌಡ – ಹನುಮಗೌಡ, ಮಲ್ಲನಗೌಡ

ನಾಯಕ – ಹುಲುಗಪ್ಪ ನಾಯಕ, ಬೋರನಾಯಕ

ಶಾಸ್ತ್ರಿ – ರಾಮಾಶಾಸ್ತ್ರಿ, ವೆಂಕಟಶಾಸ್ತ್ರಿ

ದೇಸಾಯಿ – ದೇಸಾಯಿ ನರಸಿಂಹ

ಚಮ್ಮಾರ – ಚಮ್ಮಾರ ಬಸವರಾಜ

ಮೇದಾರ – ಮೇದರ ಗೋಣಿಬಸಪ್ಪ

ರೆಡ್ಡಿ – ಬಸವರೆಡ್ಡಿ, ಗೋವಿಂದರೆಡ್ಡಿ

ಇಲ್ಲಿ ವೃತ್ತಿವಾಚಿ ಪದಗಳು ಕೆಲವು ಹೆಸರುಗಳ ನಂತರ ಬರುವುದನ್ನು ಈ ಮೇಲೆ ಗಮನಿಸಬಹುದು. ಹಾಗೂ ಹೆಸರುಗಳ ಮುಂಚಿತವಾಗಿಯೇ ವೃತ್ತಿವಾಚಿಗಳನ್ನು ಗಮನಿಸಬಹುದು. 'ದೊರೆ' ಎಂಬ ವಾರ್ಗಿಕವು ಇತ್ತೀಚೆಗೆ ಕಡಿಮೆಯಾಗಿದೆ. ಇದು ಹೆಚ್ಚಾಗಿ ಸುರಪುರ ಪರಿಸರದಲ್ಲಿ ಕಾಣಬಹುದಾದರು ಕೂಡ್ಲಿಗಿ ಪರಿಸರದಲ್ಲಿ ಅಲ್ಲಲ್ಲಿ ಕಾಣಸಿಗುತ್ತವೆ.

**೨. ಸ್ತ್ರೀ ವೃತ್ತಿವಾಚಿ ವಾರ್ಗಿಕಗಳು**

ರಾಣಿ, ಅರಸಿ, ನಾಯಕಿ, ಇವು ವೃತ್ತಿ ಮತ್ತು ಅಧಿಕಾರಿ ಸೂಚಿಗಳಾಗಿದ್ದು, ಸ್ತ್ರೀಯರು ಮಾಡುತ್ತಿದ್ದ ಕೆಲಸ ಇಲ್ಲವೇ ತನ್ನ ಪತಿ, ತಂದೆ ಮುಂತಾದವರು ಹೊಂದಿದ್ದ ವೃತ್ತಿಯೊಂದಿಗೂ ಇವುಗಳು ಅಂಟಿಕೊಂಡಿರಬಹುದು. ಈ ಪರಿಸರದ ರಾಜಾಡಳಿತದ ಪಳೆಯುಳಿಕೆಗಳಾಗಿ ಈ ಮೇಲೆ ತಿಳಿಸಿದ ವೃತ್ತಿವಾಚಿಗಳು ಕೆಲವು ಸ್ತ್ರೀಯರ ಹೆಸರುಗಳಲ್ಲಿ ಕಾಣಬಹುದಾಗಿದೆ.

ನಾಗತಿ (ಚನ್ನಮ್ಮ ನಾಗತಿ, ಶ್ವೇತಾನಾಗತಿ)

ನಾಯಕಿ (ಓಬವ್ವ ನಾಯಕಿ)

**೪.೧.೩. ಜಾತಿವಾಚಿ**

ಸಾಮಾಜಿಕ ವರ್ಗಗಳು ಕುಲನಾಮಗಳಂತೆ ಬಳಕೆಯಾಗುತ್ತವೆ. ತಳವಾರ, ದೇಶಪಾಂಡೆ, ವಡ್ಡರ, ಪುರೋಹಿತ, ದೇಸಾಯಿ ಹೆಸರಿನ ನಿರ್ದಿಷ್ಟ ಭಾಗದಿಂದ ಅಂದರೆ ಮೊದಲ ಜಾಗದಿಂದ

ಧರ್ಮ, ಲಿಂಗ, ಜಾತಿಯಂತಹ ವಿಷಯಗಳು ಕಂಡುಬಂದರೆ ಹೆಸರಿನ ವಾರ್ಗಿಕ ಭಾಗದಿಂದ ಅಂದರೆ ಎರಡನೇ ಭಾಗದಿಂದ ವ್ಯಕ್ತಿಯ ಜಾತಿ ಸಾಮಾಜಿಕ ಸ್ತರಗಳನ್ನು ಕಂಡುಕೊಳ್ಳಲು ಸಾಧ್ಯವಿದೆ. ಇದನ್ನು ಕಲ್ಬುರ್ಗಿ ಎಂ.ಎಂ. ಅವರು 'ನಾಮವಿಜ್ಞಾನ' ಪುಸ್ತಕದಲ್ಲಿ ಸಿದ್ಧನಗೌಡ ಪಾಟೀಲರ ಒಂದು ಪದ್ಯ ಭಾಗದಿಂದ ಸ್ಪಷ್ಟಪಡಿಸಿದ್ದಾರೆ. ಆ ಪದ್ಯ ಹೀಗಿದೆ.

ಅಯ್ಯನಾರ ಹುಡುಗ ಬಸಯ್ಯ ಅಂತ, ಗೌಡರ ಹುಡುಗ ಬಸವನಗೌಡ ಅಂತ ಬಣಜಗೇರು (ಉಳಿದ ಲಿಂಗಾಯತ ಹುಡುಗ್ರು) ಬಸವರಾಜ ಅಂತ ಆ ಕುರುಬರ ಹುಡುಗ ಬಸಪ್ಪ ಅಂತ, ನಾ ಬಸ್ಯಾ ಅಂತ ಯಾಕಂದ್ರ ನಾ ಹೊಲ್ಯಾ ಅಂತ, ಮೇಲಿನ ಪದ್ಯಭಾಗದಲ್ಲಿ 'ಬಸವ' ಎನ್ನುವ 'ನಿರ್ದಿಷ್ಟ' ಒಂದು ಹೆಸರಿನಿಂದ ಒಂದೇ ಸಮಾಜದ ವಿವಿಧ ಜಾತಿ ವರ್ಗಗಳು 'ಅಯ್ಯ', 'ಗೌಡ', 'ಅಪ್ಪ', 'ರಾಜ'ಗಳನ್ನು ಸೇರಿಸಿ ತಮ್ಮಲ್ಲಿರುವ ಭಿನ್ನತೆಯನ್ನು ತಿಳಿಸುತ್ತವೆ.

ವೃತ್ತಿಯು ಕ್ರಮೇಣ ಜಾತಿಯಾಗಿ ಮಾರ್ಪಟ್ಟಿದೆ. ಆರಂಭದಲ್ಲಿ ವೃತ್ತಿವಾಚಿಯೊಂದಿಗೆ ಬಳಕೆಯಾಗುತ್ತಿದ್ದ ವ್ಯಕ್ತಿನಾಮ ವಾರ್ಗಿಕಗಳು ಕಾಲಾಂತರದಲ್ಲಿ ಜಾತಿಯನ್ನು ನಿರ್ದೇಶಿಸುವ ಹಂತಕ್ಕೆ ಬಂದಿವೆ ಎನ್ನಬಹುದು. ವೃತ್ತಿಯನ್ನು ಸೂಚಿಸುವ ಗೌಡ, ರೆಡ್ಡಿ, ನಾಯಕ ಇತ್ಯಾದಿ ಕೆಲವು ವಾರ್ಗಿಕಗಳಿಂದ ಜಾತಿಯನ್ನು ನಿರ್ದಿಷ್ಟವಾಗಿ ಗುರುತಿಸಲಾಗುವುದಿಲ್ಲ. ಇವುಗಳು ಯಾವುದೇ ಒಂದು ಸಮುದಾಯದ ಪ್ರತಿನಿಧಿಗಳಾಗಿ ಕಾಣಬರುವುದಿಲ್ಲ. ಬದಲಾಗಿ ಭೌಗೋಳಿಕವಾಗಿ ಮತ್ತು ಸಾಮಾಜಿಕ ಭಿನ್ನ ಸಂಸ್ಕೃತಿಗಳಲ್ಲಿ ಕಾಣಬರುತ್ತವೆ. ಆದರೂ ಈ ಬಗೆಯ ಪದಗಳನ್ನು ಇಂದು ನಿರ್ದಿಷ್ಟ ಜಾತಿಯೊಳಗೆ ಸೀಮಿತಗೊಳಿಸಿ ಬಳಸಲಾಗುತ್ತಿದೆ ಅಂತಹ ಕೆಲವು ಹೆಸರುಗಳ ವಾರ್ಗಿಕಗಳನ್ನು ಈ ಕೆಳಗಿನಂತೆ ನೋಡಬಹುದು.

**೧. ಪುರುಷ ವಾರ್ಗಿಕಗಳು**

ಅಯ್ಯಂಗಾರ್ (ತಿರುಮಲ ಅಯ್ಯಂಗಾರ್, ಶ್ರೀನಿವಾಸ ಅಯ್ಯಂಗಾರ್)

ಕುರುಬರ (ಕುರುಬರ ಹೊಸೂರಪ್ಪ, ಕುರುಬರ ಬಸಪ್ಪ)

ಕುಂಬಾರ (ಕುಂಬಾರ ಪಕ್ಕೀರಪ್ಪ, ಕುಂಬಾರ ಗುಂಡಪ್ಪ)

ಮಾದಿಗರ (ಮಾದಿಗರ ದುರುಗಪ್ಪ, ಮಾದಿಗರ ಎಲ್ಲಪ್ಪ)

ತಳವಾರ (ತಳವಾರ ಸುಡುಗಾಡಪ್ಪ, ತಳವಾರ ಮಾರಪ್ಪ)

ಉಪ್ಪಾರ (ಉಪ್ಪಾರ ಹನುಮಪ್ಪ, ಉಪ್ಪಾರ ಯಮುನಪ್ಪ)

ರೆಡ್ಡಿ (ತಿಪ್ಪಾರೆಡ್ಡಿ, ವೆಂಕಟರೆಡ್ಡಿ)

ಶೆಟ್ಟಿ (ವೆಂಕಟೇಶಶೆಟ್ಟಿ, ಗೋಪಾಲಶೆಟ್ಟಿ)

ಜಂಗಮ (ಜಂಗಮರ ಸಿದ್ಧಯ್ಯಸ್ವಾಮಿ, ಜಂಗಮರ ಮಹಾಲಿಂಗಸ್ವಾಮಿ)

ಲಂಬಾಣಿ (ಸೇವಾಲಾಲ್‌ನಾಯ್ಕ, ಮಂಜುನಾಯ್ಕ)

ಆಚಾರ್ಯ (ಹುಲಿಕುಂಟಾಚಾರ್ಯ, ಅನಂತಪದ್ಮಾಚಾರಿ)

ವಾಲ್ಮೀಕಿ (ಶಿವಪ್ಪ ವಾಲ್ಮಿಕಿ, ವಾಲ್ಮಿಕಿ ಕುಮಾರಸ್ವಾಮಿ

ಅಯ್ನೋರ್ (ಅಯ್ನೋರ್ ಈರೇಶ್, ಅಯ್ನೋರ್ ವೆಂಕಟೇಶ)

ಗೊಲ್ಲರ (ಗೊಲ್ಲರ ಯರ್‍ರಿಸ್ವಾಮಿ, ಗೊಲ್ಲರ ವೆಂಕಟೇಶ)

ನಾಯಕರ (ನಾಯಕರ ಚಿತ್ತಪ್ಪ, ನಾಯಕರ ಪಾಲಯ್ಯ)

ಕಿಳ್ಳೇಕ್ಯಾತರ (ಕಿಳ್ಳೇಕ್ಯಾತರ ಭರಮಪ್ಪ, ಕಿಳ್ಳೇಕ್ಯಾತರ ಉಡುಸಪ್ಪ)

**೨. ಸ್ತ್ರೀ ವಾರ್ಗಿಕಗಳು**

ಲಿಂಗಾಯತ (ಲಿಂಗಾಯತರ ಮಂಜುಳ, ಲಿಂಗಾಯತರ ಪತ್ತೀರಮ್ಮ)

ವಡ್ಡರ (ವಡ್ಡರ ತಿಪ್ಪಮ್ಮ, ವಡ್ಡರ ಮರಿಯಮ್ಮ)

ನಾಯಕ (ನಾಯಕರ ಶ್ವೇತ, ನಾಯಕರ ಕರಿಯಮ್ಮ)

ರೆಡ್ಡಿ (ರಡ್ಡೇರ ಪಾರ್ವತಿ, ರಡ್ಡೇರ ಸರಸ್ವತಿ)

ಶೆಟ್ಟಿ (ಪಲ್ಲವಿಶೆಟ್ಟಿ, ಚಂದ್ರಿಕಾಶೆಟ್ಟಿ)

ಕುರುಬ (ಕುರುಬರ ಹನುಮಕ್ಕ, ಕುರುಬರ ಈರಕ್ಕ)

**೪.೧.೪. ವ್ಯಕ್ತಿವಾಚಿ**

ಈಗಾಗಲೇ ಹಲವು ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವ ಮಹಾನುಭಾವರ ಹೆಸರುಗಳನ್ನು ಜನರು ತಮ್ಮ ಮಕ್ಕಳಿಗೆ ಇಡುವುದಕ್ಕೆ ಇಷ್ಟಪಡುತ್ತಾರೆ. ಕಾರಣ ಅವರಂತೆಯೇ ತಮ್ಮ ಮಕ್ಕಳೂ ಕೂಡಾ ಸಾಧನೆ ಮಾಡಬೇಕೆಂಬ ಹಂಬಲವಿರುತ್ತದೆ. ಉದಾಹರಣೆಗೆ 'ಗಾಂಧಿ'ಯ ಹೆಸರನ್ನು ಹಲವು ಊರುಗಳಲ್ಲಿ ಇರುವುದನ್ನು ಗಮನಿಸಬಹುದು. ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಕೂಡ್ಲಿಗಿ ತಾಲೂಕಿನ ನಾಗಲಾಪುರ ಗ್ರಾಮದಲ್ಲಿ ಹರಿಜನ ಸಮುದಾಯದ ಒಬ್ಬ ಹುಡುಗನ ಹೆಸರನ್ನು ಗಮನಿಸಿದಾಗ 'ಗಾಂಧಿ' ಎಂಬುದುದಾಗಿ ಇತ್ತು. ಅವರ ತಂದೆ ತಾಯಿಯರನ್ನು ಕೇಳಿದಾಗ ಅವರು ಹೀಗೆ ಹೇಳಿದರು– 'ಗಾಂಧೀಜಿ' ಒಬ್ಬ ಅಸಾಧಾರಣ ವ್ಯಕ್ತಿತ್ವವುಳ್ಳ ಮಹಾನ್ ಪುರುಷ. ಆತನ ಶ್ರಮ, ತ್ಯಾಗ, ಭಕ್ತಿ, ಕೆಳಸಮುದಾಯಗಳ ಮೇಲಿರುವ ಪ್ರೀತಿ, ಅವರ ಹೋರಾಟ ಮನೋಭಾವ ಇವೆಲ್ಲವುಗಳನ್ನು ನೋಡಿ ನನ್ನ ಮಗನಿಗೆ 'ಗಾಂಧಿ' ಎಂದು ಹೆಸರಿಟ್ಟಿದ್ದೇವೆ. ಹಾಗೆಯೇ ಅವರಲ್ಲಿರುವ ಸದ್ಗುಣಗಳು ನನ್ನ ಮಗನಿಗೆ ಬರಲಿ ಎಂಬುದಕ್ಕಾಗಿ ನನ್ನ ಮಗನಿಗೆ 'ಗಾಂಧಿ' ಎಂಬುದಾಗಿ ಇಟ್ಟಿದ್ದೇವೆ ಎಂದು ವಿವರಿಸಿದರು. ಹೀಗೆ ವಿವಿಧ ವಲಯಗಳಾದ ಸಿನೆಮಾ, ಅಧ್ಯಾತ್ಮ, ರಾಜಕೀಯ, ಕ್ರೀಡೆ ಇನ್ನು ಮುಂತಾದ ಕ್ಷೇತ್ರಗಳಲ್ಲಿ ಸಾಧನೆ ಮಾಡಿರುವವರ ಹೆಸರುಗಳನ್ನು

ತಮ್ಮ ಮಕ್ಕಳಿಗೆ ಇಡುತ್ತಾ ಬಂದಿರುವುದನ್ನು ಬಳ್ಳಾರಿ ಪರಿಸರದಲ್ಲಿ ನಾವು ಈ ಕೆಳಗಿನಂತೆ ಕಾಣಬಹುದು.

ಶಿವರಾಜಕುಮಾರ, ವಿಷ್ಣುವರ್ಧನ, ದೇವರಾಜ, ವಿವೇಕಾನಂದ, ಗಾಂಧಿ, ಕುಮಾರರಾಮ, ಕೃಷ್ಣದೇವ, ತಿರುಮಲ, ಕುಮಾರಸ್ವಾಮಿ, ಎರ್ರಿಸ್ವಾಮಿ, ಚಿದಾನಂದ, ವೆಂಕಣ್ಣ, ತಿಪ್ಪೇಸ್ವಾಮಿ, ಗಾದಿಲಿಂಗ, ಸುಡುಗಾಡಪ್ಪ, ಉಜ್ಜೀನಪ್ಪ, ಕೊಟ್ಟೂರೇಶ್ವರ, ಹುಲಿಕುಂಟೇಶ್ವರ.

**೪.೧.೫. ವಸ್ತುವಾಚಿ**

ಒಂದು ಮನೆತನಕ್ಕೆ ಸಂಬಂಧಿಸಿದ ವಸ್ತುಗಳಲ್ಲಿ ಪ್ರಧಾನವಾಗಿ ಜನರ ಗಮನ ಸೆಳೆಯುವುದೇ ಅದು ಅವರ ಮನೆತನದ ಹೆಸರಾಗುತ್ತದೆ. ಕೆಲವು ವಸ್ತುಗಳ ಸಂಬಂಧ ಮತ್ತು ಬಳಕೆಯಿಂದಲೂ ಅವು ವ್ಯಕ್ತಿಗೆ ಮನೆತನದ ಹೆಸರುಗಳಂತೆ ಅಂಟಿಕೊಂಡಿರುತ್ತವೆ. ಪ್ರತಿಯೊಂದು ಊರುಗಳಲ್ಲಿಯೂ ನಾವು ವಸ್ತುವಾಚಿ ವ್ಯಕ್ತಿನಾಮಗಳಿರುವುದನ್ನು ಗಮನಿಸುತ್ತೇವೆ. ಅಂತೆಯೇ ಬಳ್ಳಾರಿ ಪರಿಸರದಲ್ಲಿಯೂ ವಸ್ತುವಾಚಿ ಹೆಸರುಗಳನ್ನು ಈ ಕೆಳಗಿನಂತೆ ನೋಡಬಹುದು.

| ವಾರ್ಗಿಕ | + | ನಿರ್ದಿಷ್ಟ | = | ವ್ಯಕ್ತಿನಾಮ |
|---|---|---|---|---|
| ಕೊಡ್ಲಿ | + | ಮಾಯಮ್ಮ | = | ಕೊಡ್ಲಿ ಮಾಯಮ್ಮ |
| ಕಡ್ಲೆಕಾಯಿ | + | ಹುಸೇನಮ್ಮ | = | ಕಡ್ಲೆಕಾಯಿ ಹುಸೇನಮ್ಮ |
| ತಗಡಿನ | + | ಮೀನಾಕ್ಷಿ | = | ತಗಡಿನ ಮೀನಾಕ್ಷಿ |
| ಮೋಟಾರ | + | ರಾಮಣ್ಣ | = | ಮೋಟಾರ್ ರಾಮಣ್ಣ |
| ಉರಕಡ್ಲಿ | + | ಮಾರೆಮ್ಮ | = | ಉರಕಡ್ಲಿ ಮಾರೆಮ್ಮ |
| ಚಲಕಿ | + | ಭೀಮಣ್ಣ | = | ಚಲಕಿ ಭೀಮಣ್ಣ |
| ನೆರಕಿ | + | ಭರಮಕ್ಕ | = | ನೆರಕಿ ಭರಮಕ್ಕ |
| ಕಾಯ್‌ಗಡ್ಡಿ | + | ಬಸಕ್ಕ | = | ಕಾಯ್‌ಗಡ್ಡಿ ಬಸಕ್ಕ |
| ಗಡಗಿ | + | ಪಕ್ಕೀರಪ್ಪ | = | ಗಡಿಗಿ ಪಕ್ಕೀರಪ್ಪ |
| ನವಣಕ್ಕಿ | + | ಗುಂಡಪ್ಪ | = | ನವಣಕ್ಕಿ ಗುಂಡಪ್ಪ |
| ವೈರಿಂಗ್ | + | ಸುಭಾನ್ | = | ವೈರಿಂಗ್ ಸುಭಾನ್ |
| ಬೊಳ್ಳೊಳ್ಳಿ | + | ಸಾಕಮ್ಮ | = | ಬೊಳ್ಳೊಳ್ಳಿ ಸಾಕಮ್ಮ |
| ಮೊಸರಿನ | + | ಗಂಗಮ್ಮ | = | ಮೊಸರಿನ ಗಂಗಮ್ಮ |

### ೪.೧.೬. ಬಂಧುವಾಚಿ

ಬಂಧುಸೂಚಕ ವಾರ್ಗಿಕಗಳು ವಿಶಿಷ್ಟವಾಗಿ ಬಳಕೆಯಾಗುವುದು ಕನ್ನಡ ವ್ಯಕ್ತಿನಾಮಗಳಲ್ಲಿ ಕಾಣಬಹುದು. ಈ ಬಂಧುವಾಚಕ ಪದಗಳು ಮೂಲತಃ ವ್ಯಕ್ತಿನಾಮಗಳಲ್ಲಿ ಗೌರವ ಸೂಚಕಗಳಾಗಿ ಇದ್ದಿರಬಹುದು. ಆದರೆ ಇಂದು ಇವುಗಳ ಅರ್ಥವ್ಯಾಪ್ತಿ ಬದಲಾವಣೆಗೊಂಡು ಒಂದು ವರ್ಗದ ವ್ಯಕ್ತಿನಾಮಗಳಿಗೆ ಮಾತ್ರ ಸೀಮಿತವಾಗುತ್ತವೆ ಎಂಬ ಭಾವನೆ ಮಾಡುತ್ತಿದೆ. ಅಪ್ಪ, ಅಯ್ಯ, ಅಣ್ಣ, ಅಜ್ಜ, ಅವ್ವ, ಅತ್ತೆ, ಅಕ್ಕ, ಅಜ್ಜಿ, ಬಾಯಿ ಎಂಬ ಬಂಧುವಾಚಿ ಪದಗಳಿರುವ ವ್ಯಕ್ತಿನಾಮಗಳು ಈ ಕೆಳಗಿನಂತೆ ನೋಡಬಹುದು.

ಅಪ್ಪ – ಭರಮಪ್ಪ, ಕರಿಯಪ್ಪ

ಅಯ್ಯ – ಮಲ್ಲಯ್ಯ, ಕಾಟಯ್ಯ, ಬೋರಯ್ಯ

ಅಣ್ಣ – ಚಿತ್ತಣ್ಣ, ದುರುಗಣ್ಣ

ಅಜ್ಜ – ಹುಲುಗಜ್ಜ, ಹನುಮಜ್ಜ

ಅವ್ವ – ಹನುಮವ್ವ, ಮಾರವ್ವ

ಅಕ್ಕ – ಸೋಮಕ್ಕ, ಶಾರದಕ್ಕ

ಅಜ್ಜಿ – ಗೌರಜ್ಜಿ, ಪಾಲಜ್ಜಿ

ಬಾಯಿ – ರುಕ್ಕುಬಾಯಿ, ರಾಧಾಬಾಯಿ

ಮುಖ್ಯವಾಗಿ ಬಳ್ಳಾರಿ ಪರಿಸರದ ಉಪಲಬ್ಧ ವ್ಯಕ್ತಿನಾಮಗಳ ರಚನೆಯನ್ನು ಇಲ್ಲಿ ನೋಡಲಾಗಿದೆ. ಕೆಲವು ಅಂಶಗಳ ಮುಖೇನ ಹೀಗೆ ವಿವರಿಸಬಹುದು.

ಅಯ್ಯ ಬಂಧುವಾಚಿ ಲೋಪ 'ಏ' ದೀರ್ಘಸ್ವರವಾಗುವುದು.

| | | | |
|---|---|---|---|
| ರಂಗ | + ಅಯ್ಯ ಗೌಡ | = | ರಂಗೇಗೌಡ |
| ಚಂದ್ರ | + ಅಯ್ಯ ಗೌಡ | = | ಚಂದ್ರೇಗೌಡ |
| ರಾಮ | + ಅಯ್ಯ ಗೌಡ | = | ರಾಮೇಗೌಡ |
| ತಿಮ್ಮ | + ಅಯ್ಯ ಗೌಡ | = | ತಿಮ್ಮೇಗೌಡ |
| ಲಕ್ಕ | + ಅಯ್ಯ ಗೌಡ | = | ಲಕ್ಕೇಗೌಡ |

ಈ ಮೇಲಿನ ವ್ಯಕ್ತಿನಾಮ ರಚನೆಗಳಲ್ಲಿ ಒಂದು ನಿರ್ದಿಷ್ಟ ಘಟಕಕ್ಕೆ ಎರಡು ವಾರ್ಗಿಕಗಳು ಸೇರಿರುವುದನ್ನು ಗಮನಿಸಬಹುದಾಗಿದೆ. ಇದರ ರಚನೆಯ ಸ್ವರೂಪವನ್ನು ಹೀಗೆ ನೋಡಬಹುದು.

ನಿರ್ದಿಷ್ಟ + ಸಂಬಂಧವಾಚಿ + ಜಾತಿ (ವೃತ್ತಿ) ವಾಚಿ. ಮೇಲಿನ ಉದಾಹರಣೆಗಳಲ್ಲಿ ನಿರ್ದಿಷ್ಟದೊಂದಿಗೆ 'ಅಯ್ಯ' ಪ್ರತ್ಯಯವಿದ್ದಡೆ, ಗೌಡ ಬಂದಲ್ಲಿ 'ಏ' ದೀರ್ಘಸ್ವರ ಆಗಿರುವುದು ತಿಳಿಯುತ್ತದೆ. ಅಯ್ಯ ಪದದ ಮುಂದೆ ಗೌಡ ಇದ್ದಾಗ ಮಾತ್ರ ಈ ಪ್ರಕ್ರಿಯೆ ನಡೆಯುತ್ತದೆಂಬುದು ವಿಶೇಷವಾದ ಸಂಗತಿ. ಅಲ್ಲದೆ ನಿರ್ದಿಷ್ಟದಲ್ಲಿ ಎರಡು ವರ್ಣಗಳು ಇದ್ದಾಗ ಈ ಕ್ರಿಯೆ ಕಡ್ಡಾಯವಾಗಿ ನಡೆಯುತ್ತದೆ. ಎರಡಕ್ಕಿಂತ ಹೆಚ್ಚು ಅಕ್ಷರಗಳು ಬಂದಾಗ ಈ ಕ್ರಿಯೆ ನಡೆಯುತ್ತದೆಂಬುದಕ್ಕೆ ಕೆಲವು ಉದಾಹರಣೆಗಳು ಮಾತ್ರ ಇವೆ. ಹೆಸರಿನ ರಚನೆಯ ಸಂದರ್ಭದಲ್ಲಿ 'ಅಯ್ಯ' ಎಂಬುದು ವಾರ್ಗಿಕದ ಸ್ಥಾನವನ್ನು ಕಳೆದುಕೊಂಡು, ನಿರ್ದಿಷ್ಟದ ಭಾಗವಾಗಿ ಬಳಕೆಯಾಗುತ್ತದೆ. ಆ ಕಾರಣಕ್ಕಾಗಿ 'ಅಯ್ಯ' ಎಂಬುದನ್ನು 'ವಾರ್ಗಿಕ' ಎಂದು ಪರಿಗಣಿಸಲಾಗುವುದಿಲ್ಲ. ರಾಚನಿಕ ಸ್ವರೂಪದ ಸ್ಪಷ್ಟ ತಿಳಿವಳಿಕೆಗಾಗಿ ಈ ರೀತಿ ವಿಂಗಡಿಸಲಾಗಿದೆ.

ಹನುಮ + ಅಯ್ಯ ಗೌಡ = ಹನುಮೇಗೌಡ

ವೆಂಕಟ + ಅಯ್ಯ ಗೌಡ = ವೆಂಕಟೇಗೌಡ

ಈ ಮೇಲಿನಂತೆ ನಿರ್ದಿಷ್ಟ ಜೊತೆ 'ಅಯ್ಯ' ಇದ್ದು, ಅದರೊಂದಿಗೆ ಶೆಟ್ಟಿ, ಸ್ವಾಮಿ ಎಂಬ ಪದಗಳಿದ್ದರೆ 'ಏ' ದೀರ್ಘವಾಗುವುದಿಲ್ಲ. ಅಂತಹ ಕೆಲವು ರಚನೆಗಳು ಈ ಕೆಳಗಿನಂತಿವೆ.

ಜಂಭ + ಅಯ್ಯ + ಸ್ವಾಮಿ = ಜಂಭಯ್ಯಸ್ವಾಮಿ

ಮಲ್ಲ + ಅಯ್ಯ + ಸ್ವಾಮಿ = ಮಲ್ಲಯ್ಯಸ್ವಾಮಿ

ರಾಮ + ಅಯ್ಯ + ಶೆಟ್ಟಿ = ರಾಮಯ್ಯಶೆಟ್ಟಿ

ಲಕ್ಷ್ಮಿ + ಅಯ್ಯ + ಶೆಟ್ಟಿ = ಲಕ್ಷ್ಮಯ್ಯಶೆಟ್ಟಿ

ಈ ಮೇಲಿನ ರಚನೆಗಳಲ್ಲಿ 'ಅಯ್ಯ' ಬಂಧುವಾಚಕ ಪದವು ಸವೆಯದೇ ಹಾಗೆಯೇ ಉಳಿದಿದೆ. ಗೌಡ ಪದವಿದ್ದಾಗ 'ವ' ದೀರ್ಘವಾಗಿ ಮಾರ್ಪಟ್ಟಿರುವುದನ್ನು ಗಮನಿಸಲಾಗಿದೆ. 'ವ' ಕಾರಂತ್ಯ ನಿರ್ದಿಷ್ಟ ಪದಕ್ಕೆ ಬಂಧುವಾಚಕ ಪ್ರತ್ಯಯ ಸೇರಿದಾಗ 'ವ'ಕಾರ ಲೋಪವಾಗುವುದು.

ಬಸವ + ಅಪ್ಪ – ಬಸವಪ್ಪ> ಬಸಪ್ಪ

ಬಸವ + ಅಮ್ಮ –ಬಸವಮ್ಮ> ಬಸಮ್ಮ

ನಂದಿ + ಬಸವ + ಅಮ್ಮ – ನಂದಿಬಸವಮ್ಮ> ನಂದಿಬಸಮ್ಮ

ಗೋಣಿ + ಬಸವ + ಅಪ್ಪ – ಗೋಣಿಬಸವಪ್ಪ> ಗೋಣಿಬಸಪ್ಪ

ಮೇಲಿನ ರಚನೆಗಳ ವಿಗ್ರಹವಾಕ್ಯ ರಚನೆಯಲ್ಲಿ ನಿರ್ದಿಷ್ಟದ ಕೊನೆಯ ಅಕ್ಷರ 'ವ' ಇದೆ. ಸಮಸ್ತ ಪದರೂಪದಲ್ಲಿ ಅದು ಲೋಪಗೊಂಡಿದೆ 'ಬಸವ' ಎಂಬ ನಾಮರೂಪದಲ್ಲಿ ಮಾತ್ರ ಈ ವ್ಯತ್ಯಾಸ ಉಂಟಾಗುತ್ತಿದೆ.

ಇದರಂತೆ ಮಾದವಯ್ಯ, ಗುರುವಯ್ಯ, ಕೇಶವಯ್ಯ ರಚನೆಗಳಲ್ಲಿ 'ವ' ಕಾರಾಂತ ನಿರ್ದಿಷ್ಟಗಳ ಪದರಚನೆಯಲ್ಲಿ 'ವ'ಕಾರ ಲೋಪಕಾಣದು. ಕಾರಣ 'ಬಸವ' ಎಂಬ ಒಂದು ಮಾದರಿಯಿಂದ ವಿಶೇಷವಾಗಿ ನಿಯಮವನ್ನು ರೂಪಿಸಬಹುದು. ಇದೊಂದು ಉದಾಹರಣೆ ವಿಕಲ್ಪವೆಂಬಂತೆ ದೊರೆಯುತ್ತದೆ ಎನ್ನಬಹುದು.

**೪.೧.೭. ಶಿಲಾವಾಚಿ**

ಶಿಲಾಸೂಚಕವು ಕಲ್ಲು, ಬೆಟ್ಟ, ಗುಡ್ಡ, ಬಂಡೆ ಮುಂತಾದವುಗಳನ್ನು ಸೂಚಿಸುವ ಸ್ಥಳನಾಮಗಳೊಂದಿಗೆ ಹೆಸರುಗಳು ಬಳಕೆಯಲ್ಲಿರುವುದನ್ನು ನಾವು ಗಮನಿಸಬಹುದು. ಅವರು ಮಾಡುವ ಕೆಲಸದಿಂದಾಗಲಿ ಅಥವಾ ಹಿಂದೆ ಅವರಿಗೆ ಕರೆಯುತ್ತಿದ್ದ ಮನೆತನದ ಹೆಸರುಗಳಿಂದ ಶಿಲಾವಾಚಿ ಹೆಸರುಗಳನ್ನು ಬಳ್ಳಾರಿ ಪರಿಸರದಲ್ಲಿ ಕಾಣಬಹುದು.

ಗುಡ್ಡದ ತಿಮ್ಮಪ್ಪ

ಸೈಜ್‌ಗಲ್ ವೆಂಕಟೇಶ

ಬಂಡೆ ಬಸಪ್ಪ

ಗೋರಿಕಲ್ಲು ಮಸಣಪ್ಪ

ಗುಂಡಕಲ್ಲು ಭರಮಪ್ಪ

ಬೆಟ್ಟದ ಮಾರಪ್ಪ

ಈ ಮೇಲಿನ ಹೆಸರುಗಳಲ್ಲಿ ಗುಡ್ಡ, ಸೈಜ್‌ಗಾಲ್, ಬಂಡೆ, ಗೋರಿಕಲ್ಲು, ಗುಂಡಕಲ್ಲು, ಬೆಟ್ಟ ಈ ಎಲ್ಲಾ ವಾರ್ಗಿಕ ಪದಗಳು ಶಿಲಾವಾಚಿಗಳಾಗಿದ್ದು, ಇವುಗಳೊಂದಿಗೆ ಇರುವ ಹೆಸರುಗಳನ್ನು ಬಳ್ಳಾರಿ ಪರಿಸರದಲ್ಲಿ ಕಾಣಬಹುದಾಗಿದೆ.

**೪.೧.೮. ಶರೀರ ಅವಯವಸೂಚಿ**

ಶರೀರದ ಅಂಗಗಳನ್ನು ಬಳಸಿಕೊಂಡಿರುವ ಅನೇಕ ವ್ಯಕ್ತಿನಾಮಗಳನ್ನು ನಾವು ಬಳ್ಳಾರಿ ಪರಿಸರದಲ್ಲಿ ಕಾಣಬಹುದಾಗಿದೆ. ಇವುಗಳು ಕೇವಲ ಅಡ್ಡ ಹೆಸರುಗಳಲ್ಲದೆ, ದಾಖಲೆಗಳಲ್ಲಿ ಕೂಡಾ ಹಾಗೆಯೇ ಹೆಸರುಗಳು ಬರೆಯಲ್ಪಟ್ಟಿರುತ್ತವೆ. ಉದಾಹರಣೆಗೆ ಪಂಚೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವುಗಳ ಜೊತೆಗೆ ಕಾಲು, ಕೈ, ಹೊಟ್ಟೆ ಒಟ್ಟಾರೆ ದೇಹದಲ್ಲಿರುವ ಅಂಗಗಳನ್ನು ಬಳಸಿಕೊಂಡು ಹೆಸರುಗಳಿರುವುದನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

| **ವಾರ್ಗಿಕ** | **+ ನಿರ್ದಿಷ್ಟ** | = | **ವ್ಯಕ್ತಿನಾಮ** |
|---|---|---|---|
| ಕುಲ್ಡ್‌ಗಣ್ | + ಭರಮಪ್ಪ | = | ಕುಲ್ಡ್‌ಗಣ್ ಭರಮಪ್ಪ |
| ಸೊಟ್ಟಗಾಲ್ | + ಅಂಜಿನಪ್ಪ | = | ಸೊಟ್ಟಗಾಲ್ ಅಂಜಿನಪ್ಪ |

| | | | | |
|---|---|---|---|---|
| ರೊಡ್‌ಗೈ | + | ಪಕ್ಕೀರಪ್ಪ | = | ರೊಡ್‌ಗೈ ಪಕ್ಕೀರಪ್ಪ |
| ಮೆಳ್‌ಗಣ್ | + | ಹುಲಿಗೆವ್ವ | = | ಮೆಳಗಣ್ ಹುಲಿಗೆವ್ವ |
| ಕಪ್ಪೆಮೂಗ್ | + | ಬಸಕ್ಕ | = | ಕಪ್ಪೆಮೂಗ್ ಬಸಕ್ಕ |
| ಚೊಂಚ್‌ಕೈ | + | ಯರಿಯಪ್ಪ | = | ಚೊಂಚ್‌ಕೈ ಯರಿಯಪ್ಪ |
| ಗಿಡ್ಡ | + | ಮಾರಪ್ಪ | = | ಗಿಡ್‌ಮಾರಪ್ಪ |
| ಹೊಟ್ಟೆ | + | ರಾಮಪ್ಪ | = | ಹೊಟ್ಟೆರಾಮಪ್ಪ |

ಹೀಗೆ ಶರೀರದ ಅಂಗಾಂಗಳನ್ನು ಬಳಸಿಕೊಂಡು ವ್ಯಕ್ತಿನಾಮಗಳಿರುವುದನ್ನು ಗಮನಿಸ ಬಹುದಾಗಿದೆ.

**೪.೨. ಸ್ಥಳನಾಮಗಳ ರಚನೆ**

ಭಾಷಿಕ ಸಾಮಾಗ್ರಿಗಳನ್ನು ಬಳಸಿಕೊಂಡು ಸಾಮಾಜಿಕವಾದ ಅರ್ಥ ಪಡೆಯುವ ಶಬ್ಧಗಳು ಗ್ರಾಮನಾಮಗಳಾಗುವವು. ಬಳ್ಳಾರಿ ಪರಿಸರದ ಸ್ಥಳನಾಮಗಳ ರಾಚನಿಕ ಅಧ್ಯಯನದಿಂದ ಇಂದು ನಾವು ಕಾಣುವ ಅಲ್ಲಿಯ ಸಂಸ್ಕೃತಿ ಹಾಗೂ ಭಾಷಾ ಸ್ವರೂಪಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಅಲ್ಲದೇ ತನ್ಮೂಲಕ ಪ್ರಾಚೀನ ಕಾಲದ ಭಾಷೆಯ ಸ್ವರೂಪವನ್ನು ಸಹ ಅರಿಯಲು ಸಾಧ್ಯವಾಗುವುದು. ಈ ಪರಿಸರದ ಸ್ಥಳನಾಮಗಳು ಮಧ್ಯ ಮತ್ತು ದಕ್ಷಿಣ ದ್ರಾವಿಡ ಗುಂಪುಗಳಿಗೆ ಸಂಬಂಧಪಟ್ಟವುಗಳಾಗಿದ್ದು, ಕೆಲವು ದ್ರಾವಿಡ ಸ್ಥಳನಾಮ ಘಟಕಗಳು ತೆಲುಗು ಭಾಷೆಗೆ ನಿಕಟತೆ ಹೊಂದಿರುವುದನ್ನು ನೋಡುತ್ತೇವೆ. ಇದಕ್ಕೆ ಮೂಲ ಕಾರಣ ತೆಲುಗು ನೆಲೆಯ ಸಂಪರ್ಕ ಭಾಷೆಯಾಗಿರುವುದೇ ಆಗಿದೆ. ಇಲ್ಲಿನ ಘಟಕಗಳು ತೆಲುಗಿಗೆ ಹತ್ತಿರವಾಗಿರುವಂತೆ ತೋರುತ್ತದೆ. ತೆಲುಗು ಭಾಷೆಯು ಕ್ರಿ.ಪೂ. ೧೨೦೦ ಕ್ಕಿಂತಲೂ ಮೊದಲು ಮೂಲದ್ರಾವಿಡದಿಂದ ಬೇರ್ಪಟ್ಟಿತೆಂದು ಭಾಷಾತಜ್ಞರ ಅಭಿಪ್ರಾಯವಾಗಿದೆ. ಹಟ್ಟಿಕಾರರಾದ ಕನ್ನಡಿಗರೇ ಆಂಧ್ರರೆನಿಸಿಕೊಂಡರೆಂದು ಶಂಬಾ ಜೋಷಿಯವರು ಅಭಿಪ್ರಾಯ ಪಟ್ಟಿದ್ದಾರೆ.

ಶಾತವಾಹನರು ಮೂಲತಃ ಬಳ್ಳಾರಿ ಪ್ರದೇಶದವರೆಂದು ಕೆಲ ವಿದ್ವಾಂಸರು ಅಭಿಪ್ರಾಯಪಟ್ಟರೆ, ಇನ್ನೂ ಕೆಲವರು ಇವರ ಮೂಲ ಆಂಧ್ರನಾಡು ಎಂದೂ ಸೂಚಿಸಿರುತ್ತಾರೆ. 'ಸಾತವಾಹಿದಾರ' ಎಂದು ಬಳ್ಳಾರಿ ಸುತ್ತಣ ಪ್ರದೇಶಕ್ಕೆ ಕರೆಯಲಾಗುತ್ತಿತ್ತೆಂದು ಹೇಳಲಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಮತ್ತು ತೆಲುಗು ಭಾಷೆಗಳು ಬಳ್ಳಾರಿಯ ಪರಿಸರದಲ್ಲಿ ಹಿಂದೆ ನಿಕಟ ಸಂಪರ್ಕ ಪಡೆದಿದ್ದವೆಂದು ಹೇಳಬಹುದಾಗಿದೆ. ವಿಜಯನಗರ ಕಾಲದ ಅರಸ ಕೃಷ್ಣದೇವರಾಯನ ಆಳ್ವಿಕೆಯು ಬಳ್ಳಾರಿ ಜಿಲ್ಲೆಯಲ್ಲಾಗಿದ್ದರೂ ಅವನನ್ನು ಕರ್ನಾಟಕಾಂಧ್ರ ಸಾರ್ವಭೌಮನೆಂದು ಕೊಂಡಾಡಲಾಗಿದೆ. ಇವನ ಕಾಲದಲ್ಲೂ ಸಹಾ ಈ ಭಾಗದಲ್ಲಿ ತೆಲುಗು ಭಾಷೆ ಹೆಚ್ಚು ಪ್ರಚಲಿತದಲ್ಲಿದ್ದಿರಬೇಕೆಂದು ತೋರುತ್ತದೆ. ಕನ್ನಡ ಮತ್ತು ತೆಲುಗು ಭಾಷೆಗಳ ಲಿಪಿಯು ಕೆಲ ಶತಮಾನಗಳ ಹಿಂದೆ ಒಂದೇ ಆಗಿತ್ತು ಎಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ. ಕನ್ನಡ ಭಾಷೆಯು ಇತ್ತೀಚಿಗೆ ದಕ್ಷಿಣ ದ್ರಾವಿಡ ಗುಂಪಿನೆಡೆಗೆ

ಭಿನ್ನವಾಗಿ ನಿಂತಿರುವಂತೆನಿಸುವುದು. ಬಳ್ಳಾರಿ ಜಿಲ್ಲೆಯ ಬಲಕುಂದೆ, ಚಳ್ಳಗುರ್ಕಿ, ಗಜ್ಜಿಗಿನಹಾಳ, ಚಿಂತಪಲ್ಲಿ, ಜಿನಿಕುಂಟ, ಪೋತಲಘಟ್ಟ, ಬ್ಯಾಲಚಿಂತ, ಬೊಬ್ಬಕುಂಟ, ಯರ್ರಗುಡಿ, ರಾರಾವಿ, ಶಂಕರಬಂಡ ಮೊದಲಾದ ಸ್ಥಳನಾಮಗಳಲ್ಲಿ ಪ್ರಾಚೀನ ಕನ್ನಡ ಮತ್ತು ತೆಲುಗು ಭಾಷೆಗಳು ನಿಕಟ ಸಂಪರ್ಕವನ್ನು ಹೊಂದಿದ್ದವೆಂದು ತೋರುತ್ತದೆ.

ಬಳ್ಳಾರಿ ಜಿಲ್ಲೆಯ ಕೆಲವು ಸ್ಥಳನಾಮಗಳಲ್ಲಿ ಕಂಡುಬರುವ ಕೆಲವು ವಾರ್ಗಿಕಗಳಿಂದ ಇಲ್ಲಿನ ಕನ್ನಡವು ಕೆಲ ಶತಮಾನಗಳವರೆಗಾದರೂ ತುಳುಭಾಷೆಯೊಂದಿಗೆ ಸಂಪರ್ಕ ಹೊಂದಿರುವುದನ್ನು ಹೇಳುತ್ತವೆ. ಉದಾಹರಣೆಗೆ ತುಳುವಿನ 'ಕುಂಜಿ'ಗೆ ಸಮಾನವಾಗಿರುವ 'ಕುಂದ' 'ಅಂಜೆ'ಗೆ ಸಮಾನವಾದ 'ಅಂಜ' (ನಿಲುವಂಜಿ) ಕುದುರೆ (ನೆಲ್ಲುಕುದುರೆ) ಕುರುವ (ಕುರುವಳ್ಳಿ) ವಾರ್ಗಿಕಗಳನ್ನು ನೋಡಬಹುದು. ತುಳು, ತೆಲುಗು ಭಾಷೆಯ ನಂತರದಲ್ಲಿ ಮೂಲದ್ರಾವಿಡ ಭಾಷೆಯಿಂದ ಸಿಡಿದ (ಕ್ರಿ.ಪೂ. ೧೦೦೦) ಪ್ರಥಮ ದಕ್ಷಿಣ ದ್ರಾವಿಡ ಭಾಷೆಯಾಗಿದೆ. ಸದ್ಯ ಈ ಭಾಷೆಯಲ್ಲಿ ಅರಬ್ಬೀಸಮುದ್ರದ ಕರಾವಳಿ ಪ್ರದೇಶದಲ್ಲಿ ಕಾಣಬಹುದಾದರೂ, ಯಾವುದೋ ಒಂದು ಹಂತದಲ್ಲಿ ಇದು ಬಳ್ಳಾರಿ ಪ್ರದೇಶದ ಕನ್ನಡದೊಂದಿಗೆ ಬೆರೆತು, ಬಳಕೆಯಾಗುತ್ತಿದ್ದಿರಬೇಕು. ಕರಾವಳಿ ಜಿಲ್ಲೆಯಾದ ಮಂಗಳೂರು ಬ್ರಿಟೀಷರ ಆಡಳಿತಾವಧಿಯಲ್ಲಿ ಮದ್ರಾಸ್ ಪ್ರಾಂತ್ಯಕ್ಕೆ ಒಳಪಟ್ಟಿದ್ದಿತು. ಬಳ್ಳಾರಿಯು ಸದಾ ಆ ಅವಧಿಯಲ್ಲಿ ಮದ್ರಾಸ್ ಪ್ರಾಂತ್ಯದಲ್ಲಿತ್ತು ಎಂಬ ಸಂಗತಿಯನ್ನು ನೆನೆಪಿಸಿಕೊಳ್ಳಬಹುದು. ಒಂದೇ ಆಡಳಿತದ ಅಡಿಯಲ್ಲಿನ ಈ ಪ್ರದೇಶಗಳ ಭಾಷೆ ಪರಸ್ಪರ ಸಂಪರ್ಕಕ್ಕೆ ಬಂದಿರುವ ಸಾಧ್ಯತೆಗಳು ಇತ್ತೀಚಿನ ಕಾಲಾವಧಿಯಲ್ಲಿ ಹೆಚ್ಚುಗೊಂಡಿತೆಂದು ಭಾವಿಸಲು ಅವಕಾಶವಿದೆ.

ದ್ರಾವಿಡ ವರ್ಗದ ಭಾಷಾ ಸಾಹಿತ್ಯದಲ್ಲಿ ಉನ್ನತಿಯನ್ನು ಪಡೆದಿರುವ ತಮಿಳು ಭಾಷೆ, ಇಲ್ಲಿಯ ಸ್ಥಳನಾಮಗಳೊಡನೆ ಕಿಂಚಿತ್ ಸಂಬಂಧವನ್ನು ನಿರ್ದೇಶಿಸುತ್ತವೆ.

ಮೈಲಾರ < ಮಯೂರ

ಕೂಡ್ಲಿಗಿ < ಕೂಡಲಗಿ

ಅಣಜಿ < ಅಣಜಗೇರಿ

ಈ ಮೊದಲಾದ ಸ್ಥಳನಾಮಗಳು ಬಳ್ಳಾರಿ ಪರಿಸರದ ಸ್ವಲ್ಪ ಕಾಲಾವಧಿವರೆಗಾದರೂ, ತಮಿಳು ಭಾಷೆಯೊಡನೆ ಸಂಬಂಧ ಪಡೆದಿರಬೇಕೆಂಬುದನ್ನು ತೋರಿಸುತ್ತವೆ. ಕನ್ನಡ ಭಾಷೆಯು ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಕ್ರಿಪೂ. ೩೦೦ಕ್ಕಿಂತ ಮುಂಚೆ ಬೇರ್ಪಟ್ಟಿತೆಂದು ಭಾಷಾತಜ್ಞರು ನಿರ್ಧರಿಸಿದ್ದಾರೆ. ಈ ಅವಧಿಯ ಭಾಷೆಯ ಬಗೆಗೆ ವಿವರ ತಿಳಿದುಬಂದಿಲ್ಲ. ದ್ರಾವಿಡ ವರ್ಗದ ಭಾಷೆಗಳ ಸಂಪರ್ಕವನ್ನು ಕಳಚಿ ಕನ್ನಡ ಪ್ರಾಕೃತ ಭಾಷೆಯ ಪ್ರಭಾವಕ್ಕೆ ಒಳಪಟ್ಟಿರಬೇಕೆಂದು ತೋರುತ್ತದೆ. ಉದಾ. ಇಟ್ಟಗಿ, ಇಟಗಿನಾಳ, ಇಟ್ಟಗುಡಿ, ಬೊಮ್ಮಗಟ್ಟ, ಬೊಮ್ಮಲಾಪುರ, ಯಕ್ಕೆಗುಡಿ (ಯಕ್ಷ) ಈ ಸ್ಥಳನಾಮಗಳು ಮೇಲಿನ ಸಂಗತಿಯ ಸ್ಪಷ್ಟನೆ ನೀಡುತ್ತವೆ. ಹತ್ತನೇ ಶತಮಾನದ ಆದಿಕವಿ ಪಂಪನ 'ವಿಕ್ರಮಾರ್ಜುನ ವಿಜಯಂ' ಸದ್ಯ ಉಪಲಬ್ಧ ಆದಿಕಾವ್ಯ. ಕ್ರಿ.ಶ. ೪೫೦ರ

ಹಲ್ಮಿಡಿ ಶಾಸನವೇ ಪ್ರಾಚೀನ ಉಪಲಬ್ಧ ಶಾಸನ. ಕನ್ನಡವು ಕ್ರಿಸ್ತಪೂರ್ವ ಕಾಲದಲ್ಲಿಯೇ ಪ್ರಭಾವಶಾಲಿ ಸಮೃದ್ಧ ಭಾಷೆಯಾಗಿತ್ತೆಂಬುದು ವಿದ್ವಾಂಸರ ಅಭಿಮತವಾಗಿದೆ. ರಾಮಾಯಣ, ಮಹಾಭಾರತ, ಪಾಣಿನಿಯ ಅಷ್ಟಧ್ಯಾಯ ಮತ್ತು ಆಕ್ಸೆರಿಂಕಸ್‌ನಲ್ಲಿ ದೊರೆತ ಪೈಪರಸ್ ಪ್ರಹಸನಗಳು ಕನ್ನಡದ ಪ್ರಾಚೀನತೆಗೆ ಬಲವಾದ ಆಧಾರಗಳಾಗಿವೆ.

### ೪.೩. ಜನವಾಸ ಮತ್ತು ಸ್ಥಳನಾಮಗಳು

ಬಳ್ಳಾರಿ ಪರಿಸರದಲ್ಲಿ ಕುರುಬರು, ಗೊಲ್ಲರು, ವಡ್ಡರು, ಕಲ್ಲುಕುಟಿಗರು, ನಾಯಕರು, ದಾಸರು, ಉಪ್ಪಾರರು, ದೊಂಬರು, ಕಮ್ಮಾರರು, ಅಗಸರು ಮುಂತಾದ ಹಲವು ಜಾತಿ ಜನಾಂಗ ಕುಲಕಸುಬಿನ ಜನರು ವಾಸವಾಗಿದ್ದು, ಇವರಿಗೆ ಸಂಬಂಧಿಸಿದ ವೃತ್ತಿಸೂಚಕ ಸ್ಥಳನಾಮಗಳು ಇಲ್ಲಿ ಕಂಡುಬರುತ್ತವೆ. ಅಲೆಮಾರಿಯಾಗಿ ಒಂದು ಸ್ಥಳದಿಂದ ಮತ್ತೊಂದೆಡೆಗೆ ಸಂಚರಿಸುತ್ತಿದ್ದ ಪ್ರಾಚೀನ ಮಾನವನು ಕ್ರಮೇಣ ಕಾಲ ಗತಿಸಿದಂತೆ, ಒಂದೆಡೆಯಲ್ಲಿ ನೆಲೆಸಿ, ಒಂದೊಂದು ವೃತ್ತಿಯನ್ನು ಕೈಗೊಂಡು ಜೀವಿಸಲು ಆರಂಭಿಸಿದ್ದನ್ನು ಈ ಸ್ಥಳನಾಮಗಳು ತಿಳಿಸುತ್ತವೆ. ಈ ವರ್ಗಗಳ ಜನರು ಕರ್ನಾಟಕದ ಬೇರೆಡೆಗಳಲ್ಲೂ, ಕರ್ನಾಟಕದ ಹೊರಭಾಗದಲ್ಲೂ ಕಂಡುಬರುತ್ತಾರೆ. ದ್ರಾವಿಡ ಜನಾಂಗದ ಕುರುಂಬನ್ ವರ್ಗವು ನೀಲಗಿರಿ ಬೆಟ್ಟಗಳಲ್ಲಿ ಮತ್ತು ಕೊಡಗು ಜಿಲ್ಲೆಯಲ್ಲಿ ಕಂಡುಬರುವರು. ಇವರಲ್ಲೇ ಕೆಲವರು ತಮ್ಮ ಮೂಲ ನೆಲೆಗಳಿಂದ ಕರ್ನಾಟಕದೊಳಕ್ಕೆ ಪ್ರವೇಶ ಮಾಡಿದರು. ಕರ್ನಾಟಕದಲ್ಲಿ ಇವರನ್ನು ಕುರುಬರು ಎಂದು ಕರೆಯುತ್ತೇವೆ. ಕುರುಬರು ಒಂದು ಗುಂಪು ಆಂಧ್ರ ಮತ್ತು ಕರ್ನಾಟಕದ ಗಡಿ ಭಾಗಗಳಲ್ಲಿ ಸಂಚರಿಸುತ್ತಿದ್ದು, ಬಳ್ಳಾರಿ ಜಿಲ್ಲೆಯನ್ನು ಪ್ರವೇಶ ಮಾಡಿದೆ. ಇಂದಿಗೂ ಬಳ್ಳಾರಿ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಕುರುಬರ ಸಂಖ್ಯೆಯು ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತದೆ. ಈ ಜನರ ಸಂಚಾರ ಮಾರ್ಗವನ್ನು ನಿರ್ದೇಶಿಸುವ ಸ್ಥಳನಾಮಗಳು ಬಳ್ಳಾರಿ ಜಿಲ್ಲೆಯಲ್ಲಿ ಉಪಲಬ್ಧವಿಲ್ಲ. ಗೊಲ್ಲರಹಳ್ಳಿ, ಗೊಲ್ಲ ನಾಗೇನಹಳ್ಳಿ, ಗೊಲ್ಲರಹಟ್ಟಿ ಎಂಬ ಸ್ಥಳನಾಮಗಳು ಬಳ್ಳಾರಿ ಜಿಲ್ಲೆಯಲ್ಲಿವೆ. ಈ ಸ್ಥಳನಾಮಗಳು ಗೊಲ್ಲರ, ಕಾಡುಗೊಲ್ಲರ ಮೂಲನೆಲೆಗಳನ್ನು ಕುರಿತು ನಿರ್ದೇಶಿಸುತ್ತವೆ. ಜಿಲ್ಲೆಯಲ್ಲಿನ ಈ ಜನಗಳ ಪ್ರಮುಖ ವೃತ್ತಿ ದನಕರುಗಳ ಸಾಕಾಣಿಕೆ, ಈ ಜನರಲ್ಲಿ ಬಹುಪಾಲಿನವರು ತೆಲುಗು ಭಾಷಿಕರಾಗಿರುವುದು ವಿಶೇಷ. ಇವರು ಆಂಧ್ರ ಪ್ರದೇಶದ ಭಾಗದಿಂದ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸಿದ್ದಾರೆ. ಇವರ ದೈವ ಗೋಪಾಲಕನಾದ ಕೃಷ್ಣ ಉತ್ತರ ಭಾರತದ ಕಡೆಯಿಂದ ಸಂಚರಿಸುತ್ತಾ ಒರಿಸ್ಸಾ, ಆಂಧ್ರ ಭಾಗಕ್ಕೆ ಬಂದು ಕರ್ನಾಟಕದ ವಿವಿಧ ಭಾಗಗಳಲ್ಲಿ ಪ್ರವೇಶ ಪಡೆದಿದ್ದಾರೆ.

ವಡ್ಡರು, ಉಪ್ಪಾರರು ಬಳ್ಳಾರಿ ಪರಿಸರದಲ್ಲಿದ್ದು, ಅವರಿಗೆ ತಮ್ಮದೇ ಆದ ಪ್ರತ್ಯೇಕ ನೆಲೆಗಳಿವೆ. ಇವರ ವೃತ್ತಿಸೂಚಕ ಶಬ್ದಗಳಿಂದಲೇ ಇವರ ನೆಲೆಗಳು ಸ್ಥಾಪಿತವಾಗಿವೆ. ವಡ್ಡರು ಮತ್ತು ಕಲ್ಲುಕುಟಿಗರದು ಶೇಕಡಾ ೯೯ರಷ್ಟು ತೆಲುಗು ಭಾಷೆಯಾಗಿದೆ. ಇವರು ಆಂಧ್ರ ಪ್ರದೇಶದಿಂದ ಬಳ್ಳಾರಿಗೆ ಬಂದವರಾಗಿದ್ದಾರೆ. ಇಲ್ಲಿನ ಜನರು ಇಂದೂ ಕೂಡಾ ಇವರನ್ನು ಆಂಧ್ರ ವಡ್ಡರು ಎಂತಲೇ ಸಂಬೋಧಿಸುತ್ತಾರೆ. ಇದು ಪರಂಪರಾಗತವಾಗಿ ಶತಮಾನಗಳಿಂದಲೂ ನಡೆದುಕೊಂಡು ಬಂದಿರುವ ಸಾಮಾಜಿಕ ವ್ಯವಹಾರಿಕವಾಗಿ ಇಲ್ಲಿ ಕಂಡುಬರುತ್ತದೆ. ಕಮ್ಮಾರರಲ್ಲಿ ಕನ್ನಡ ನಾಡಿನ ಮೂಲದವರು ಮತ್ತು ಆಂಧ್ರ ಮೂಲದವರೆಂದು

ಎರಡು ಬಗೆಗಳನ್ನು ಕಾಣಬಹುದು. ಉಪ್ಪಾರ ಜನಾಂಗವು ಕೂಡಾ ಆಂಧ್ರದ ಕರಾವಳಿ ಪ್ರದೇಶದಿಂದ ಜಿಲ್ಲೆಯೊಳಗೆ ಪ್ರವೇಶ ಪಡೆದಿರಬೇಕೆಂದು ತೋರುತ್ತದೆ. ಬಹುಶಃ ಉಪ್ಪಾರರಿಗೇ ವಿಶಿಷ್ಟವಾದ ಪ್ರತ್ಯೇಕ ವಾಸದ ನೆಲೆಗಳು ಕರ್ನಾಟಕದಲ್ಲಿ ಕಂಡುಬಂದಿರುವುದು ಅಪರೂಪವಾಗಿದೆ. ಆದರೆ, ಬಳ್ಳಾರಿ ಜಿಲ್ಲೆಯಲ್ಲಿ ಉಪ್ಪಾರ ವೃತ್ತಿವಾಚಕ ಸ್ಥಳನಾಮಗಳು ಕಂಡುಬರುತ್ತವೆ.

ಪುರಾಣಗಳ ರೀತ್ಯ ಮೊದಲು ವಿಂಧ್ಯಾಪರ್ವತವನ್ನು ಅತಿಕ್ರಮಿಸಿ ದಕ್ಷಿಣದೆಡೆಗೆ ಆರ್ಯ ವ್ಯಕ್ತಿಯಾದ ಅಗಸ್ತ್ಯ ಮಹರ್ಷಿಯು ಪ್ರವೇಶಿಸಿದನೆಂದು ಭಾವಿಸಲಾಗಿದೆ. ಈತನು ತನ್ನ ಅಸಂಖ್ಯ ಶಿಷ್ಯರ ಸಮೂಹದೊಂದಿಗೆ ಇತ್ತ ಬಂದು ನೆಲೆಸಿದನೆಂದು ಹೇಳಲಾಗುತ್ತದೆ. ಅಗಸ್ತ್ಯಮುನಿಗೆ ಸಂಬಂಧಿಸಿದ ಸ್ಥಳಗಳು ತಮಿಳುನಾಡು ಮತ್ತು ಇತರ ಕಡೆಗಳಲ್ಲಿ ಕಂಡುಬರುತ್ತವೆ. ಬಳ್ಳಾರಿ ಜಿಲ್ಲೆಯ ತುಂಗಭದ್ರಾ ನದಿ ತೀರದ ನಿಟ್ಟೂರು ಮುಂತಾದ ಪ್ರದೇಶದಲ್ಲಿನ ಪ್ರಾಚ್ಯವಸ್ತು ಸಂಶೋಧನಾ ಕಾರ್ಯದಲ್ಲಿ ಕಂಡುಬಂದಿರುವ ಯಕ್ಷಕುಂಡ, ಹವಿಸ್ಸಿನ ಪಾತ್ರೆ ಮುಂತಾದವುಗಳಿಂದ ಆರ್ಯರು ಉತ್ತರದಿಂದ ದಕ್ಷಿಣದ ಈ ಪ್ರದೇಶಕ್ಕೆ ಬಂದು ನೆಲೆಸಿರಬಹುದೆಂದು ಹೇಳಲು ಸಾಧ್ಯವಿದೆ. ಅನಂತರದಲ್ಲಿ ಸಂಸ್ಕೃತ, ಪ್ರಾಕೃತ ಭಾಷೆಯನ್ನು ಬಳಸುತ್ತಿದ್ದ ಬೌದ್ಧರು, ಪ್ರಾಯಶಃ ಆಂಧ್ರಪ್ರದೇಶದ ಕಡೆಯಿಂದ ಇಲ್ಲಿಗೆ ಬಂದಿರಬಹುದೆಂದು ತೋರುತ್ತದೆ. ಕೊನೆಯಲ್ಲಿ ಹಂತವಾಗಿ ಪ್ರಾಕೃತ ಭಾಷಿಕ ಜನರಾದ ಜೈನರು ಉಜ್ಜೈನಿಯಿಂದ ಶ್ರವಣಬೆಳಗೊಳ, ಮೂಡಬಿದಿರೆ, ಕೋಗಳಿ, ಮೋರಿಗೆರೆ, ಉಜ್ಜನಿಯ ಕಡೆಗೆ ಬಂದು ನೆಲೆಸಿರಬಹುದೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ. ಬೌದ್ಧರಿಗೆ ಸಂಬಂಧಿಸಿದಂತಿರುವ ಬುಧನೂರು<ಬುದ್ಧನೂರು ಮತ್ತು ದಮ್ಮೂರು<ದಮ್ಮರ, ಅಲ್ಲದೆ ಜೈನರಿಗೆ ಸಂಬಂಧಿಸಿದ ಕವಗಳಿ>ಕೋಗಳಿ, ಉಜ್ಜನಿ ಎಂಬ ಸ್ಥಳನಾಮಗಳು ಬಳ್ಳಾರಿ ಪರಿಸರದಲ್ಲಿ ಕಾಣಬರುತ್ತವೆ.

### ೪.೪. ಸ್ಥಳನಾಮ ಘಟಕಗಳು

ಸ್ಥಳನಾಮಗಳು ಸಾಮಾನ್ಯವಾಗಿ ಸಂಯುಕ್ತ ಪದಗಳಾಗಿರುತ್ತವೆ (Compund) ಭಾಷಾಶಾಸ್ತ್ರಜ್ಞರು ನಾಮಗಳ ರಚನೆಯನ್ನಾಧರಿಸಿ ಪೂರ್ವಪದವನ್ನು (prefix) ಎಂದೂ ಉತ್ತರ ಪದವನ್ನು (Suftix) ಎಂದೂ ಕರೆಯುತ್ತಾರೆ. ಪೂರ್ವಪದ ವಿಶಿಷ್ಟಾರ್ಥಕವಾಗಿದ್ದು, ಉತ್ತರ ಪದ ಸಾಮಾನ್ಯವಾಗಿರುತ್ತದೆ. ಆಯಾ ಸ್ಥಳಕ್ಕೆ ವಿಶಿಷ್ಟವಾದ ಪೂರ್ವಪದವನ್ನು ಹೆಚ್ಚು ಖಚಿತ ಅರ್ಥವನ್ನು ಕೊಡುವ (Specific) ಶಬ್ದದಿಂದ ಕರೆಯಲಾಗುತ್ತದೆ. ಉತ್ತರ ಪದವು ಅನೇಕ ಸ್ಥಳನಾಮಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಇದನ್ನು (Suffix) ಎಂಬ ಸ್ಥೂಲ ಅರ್ಥಕ್ಕೆ ಪ್ರತಿಯಾಗಿ (Generic) ಎಂಬ ಶಬ್ದದಿಂದ ಕರೆಯಲಾಗುತ್ತದೆ. ಕನ್ನಡದಲ್ಲಿ Specific ಎಂಬುದಕ್ಕೆ 'ವಿಶಿಷ್ಟ' ಅಥವಾ 'ನಿರ್ದಿಷ್ಟ' ಎಂಬ ಪದವು, Generic ಎಂಬುದಕ್ಕೆ 'ಸಾಮಾನ್ಯ' ಅಥವಾ 'ವಾರ್ಗಿಕ' ಎಂಬ ಪಾರಿಭಾಷಿಕ ಪದಗಳು ರೂಢಿಯಲ್ಲಿರುವುದು ಕಂಡುಬರುತ್ತದೆ.

ಸ್ಥಳನಾಮ ಪದಗಳು ತಮ್ಮ ಬೆಳವಣಿಗೆಯ ಮೂಲದಲ್ಲಿ ಸಾಮಾನ್ಯವಾಗಿ ಹಳ್ಳಿ, ಪುರ,

ಊರು ಮುಂತಾದವುಗಳ ರೂಪದಲ್ಲಿದ್ದು, ಇವುಗಳ ಸಂಖ್ಯೆ ಮತ್ತು ಆವರ್ತಿಗಳು ಹೆಚ್ಚಾದಂತೆ ಒಂದು ಸ್ಥಳನಾಮವನ್ನು ಇನ್ನೊಂದರಿಂದ ಪ್ರತ್ಯೇಕಿಸಿ ಹೇಳುವ ಅವಶ್ಯಕತೆ ಕಂಡುಬಂದು ಸಹಜವಾಗಿಯೇ ಈ ಪದಗಳ ಪೂರ್ವದಲ್ಲಿ ವಿಶಿಷ್ಟಾರ್ಥಕವಾದ ಇನ್ನೊಂದು ಪದವು ಸೇರಿಕೊಂಡು ಪ್ರತ್ಯೇಕ ಅಂಕಿತಗಳು ಪ್ರಾಪ್ತವಾಗಿವೆ. ಪ್ರಸಾರ ಕ್ರಮದಲ್ಲಿ ವಿಶಿಷ್ಟ ಘಟಕಗಳು ಮುಕ್ತ ಶ್ರೇಣಿಗೆ (Open set categary)ಗೆ ಸೇರಿದವುಗಳಾಗಿವೆ. ಆಯಾ ಪ್ರದೇಶದ ಪ್ರಾದೇಶಿಕ ಪರಿಸರ ಮತ್ತು ಸಂಸ್ಕೃತಿಯನ್ನವಲಂಬಿಸಿ ಅಲ್ಲಿಯ ಸ್ಥಳನಾಮಗಳಲ್ಲಿ ಇವು ಅನೇಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಕೆಲವು ಸ್ಥಳನಾಮಗಳಲ್ಲಿ ಒಂದಕ್ಕಿಂತ ಹೆಚ್ಚು ವಿಶಿಷ್ಟ ಘಟಕಗಳಿರಬಹುದು. ಅಂಥ ಸಂದರ್ಭದಲ್ಲಿ ಆಯಾ ಸ್ಥಳನಾಮದ ಆಂತರಿಕ ರಚನೆಯಲ್ಲಿ ವಾರ್ಗಿಕ ಘಟಕಕ್ಕೆ ಅತಿ ನಿಕಟವಾಗಿರುವ (Immidiate constituent) ಘಟಕವನ್ನು ಪ್ರಾಥಮಿಕ ಘಟಕ (Primary specific) ಎಂದೂ ನಂತರದ ಘಟಕವನ್ನು ದ್ವಿತೀಯ ವಿಶಿಷ್ಟ ಘಟಕ (Secondary specific) ಎಂದು ಕರೆಯುತ್ತಾರೆ (K.M. George place names of southern India-DLA-Trivendram 1986) ಎರಡಕ್ಕಿಂತ ಹೆಚ್ಚು ವಿಶಿಷ್ಟಗಳಿದ್ದ ಸಂದರ್ಭದಲ್ಲಿ ಇದೇ ಕ್ರಮವನ್ನು ಅನ್ವಯಿಸಬಹುದು. ಒಟ್ಟಾರೆ ವಿಶಿಷ್ಟ ಘಟಕಗಳು ಎಷ್ಟೇ ಇದ್ದರೂ ಅವುಗಳ ಮುಖ್ಯ ಉದ್ದೇಶ ಕೇವಲ ವಿಶೇಷಣದ ಮೂಲಕ ಮುಂದಿನ ಘಟಕವನ್ನು ಇತರ ಸಮಾನ ಘಟಕಗಳಿಂದ ಪ್ರತ್ಯೇಕಿಸುವುದಾಗಿರುತ್ತದೆ.

**೪.೫. ದೈವಮೂಲ ಸ್ಥಳನಾಮಗಳ ರಚನೆ**

ಗ್ರಾಮನಾಮಗಳು ಅನೇಕ ಪದಪ್ರತ್ಯಗಳಿಂದ ಕೂಡಿದ ಒಂದು ಕಟ್ಟಡ. ಅದರ ರಚನೆಯಲ್ಲಿ ಒಂದು ಸಕ್ರಮತೆಯಿರುತ್ತದೆ. ಅದನ್ನು ಶಾಸ್ತ್ರಶುದ್ಧವಾಗಿ ಬಿಚ್ಚಿ ನೋಡುವ ಸಾಧ್ಯತೆಯಿದೆ. ಆದುದರಿಂದ ಗ್ರಾಮನಾಮದ ಅರ್ಥ ತಿಳಿವಳಿಕೆಗೆ ರಚನೆಯ ತಿಳಿವಳಿಕೆ ಅಗತ್ಯವೆಂದು ಬೇರೆ ಹೇಳಬೇಕಿಲ್ಲ. ಸಾಮಾನ್ಯವಾಗಿ ಗ್ರಾಮನಾಮಗಳು ಈಗಾಗಲೇ ತಿಳಿಸಿರುವಂತೆ ಪೂರ್ವ ಮತ್ತು ಉತ್ತರವೆಂಬ ಉಭಯ ಘಟಕಗಳನ್ನೊಳಗೊಂಡಿರುತ್ತವೆ. ಉದಾಹರಣೆಗೆ (ಶಿವ+ಪುರ) ಉತ್ತರ ಘಟಕವು ಗ್ರಾಮವನ್ನು ಸೂಚಿಸುವ ಒಂದು ಸಾಧನವೆಂಬಂತೆ ಹಲವಾರು ಗ್ರಾಮನಾಮಗಳಿಗೆ ಅಂಟಿಕೊಂಡಿರುತ್ತದೆ. ಉದಾ. ಶಿವ+ಪುರ, ನಂದಿ+ಪುರ, ರಾಮ+ಪುರ, ಚೌಡ+ಪುರ

ಈ ಮೇಲಿನ ಗ್ರಾಮನಾಮಗಳಿಗೆ 'ಪುರ' ಎಂಬ ಉತ್ತರ ಘಟಕ ವಿಶೇಷತೆಯಿಲ್ಲದೆ ಅಂಟಿಕೊಂಡಿದೆ. ಹೀಗೆ ಗ್ರಾಮನಾಮಗಳಲ್ಲಿ ವರ್ಗಗೊಳಿಸುವ ಇದನ್ನು ವಾರ್ಗಿಕವೆಂದು ಕರೆಯುತ್ತಾರೆ. ಇಲ್ಲಿ ಪೂರ್ವಘಟಕ ಮಾತ್ರ ಆ ಊರನ್ನು ನಿರ್ದಿಷ್ಟವಾಗಿ ಸೂಚಿಸುತ್ತದೆ. ಬಳ್ಳಾರಿ ಪರಿಸರದಲ್ಲಿ ಪುರ, ಹಳ್ಳಿ, ಗುಡ್ಡ, ಕೊಂಟೆ, ಕೋಟೆ, ಸಾಗರ, ದುರ್ಗ, ನಗರ, ಹಟ್ಟಿ, ಕ್ಯಾಂಪ್ ಮುಂತಾದ ವಾರ್ಗಿಕಗಳಿಂದ ಕೊನೆಯಾಗುವ ಹಲವಾರು ದೈವಮೂಲ ಸ್ಥಳನಾಮಗಳಿವೆ ಅವುಗಳನ್ನು ಈ ಕೆಳಗಿನಂತೆ ನೋಡಲಾಗಿದೆ.

**'ಪುರ' ವಾರ್ಗಿಕದಿಂದ ಕೊನೆಯಾಗುವ ದೈವಮೂಲ ಸ್ಥಳನಾಮಗಳು**

| ನಿರ್ದಿಷ್ಟ | ವಾರ್ಗಿಕ | |
|---|---|---|
| ಲಕ್ಷ್ಮಿ | + ಪುರ | = ಲಕ್ಷ್ಮೀಪುರ |
| ಚೌಡ | + ಪುರ | = ಚೌಡಾಪುರ |
| ಹಂಪ | + ಪುರ | = ಹಂಪಾಪುರ |
| ಭೈರ | + ಪುರ | = ಭೈರಾಪುರ |
| ಓಬಳ | + ಪುರ | = ಓಬಳಾಪುರ |
| ವರದ | + ಪುರ | = ವರದಾಪುರ |
| ಏಣಿಗಿ | + ಬಸ + ಪುರ | = ಏಣಿಗಿ ಬಸಾಪುರ |
| ನಾರಾಯಣ | + ಪುರ | = ನಾರಾಯಣಪುರ |
| ಸೋಮಲ | + ಪುರ | = ಸೋಮಲಾಪುರ |
| ಕಣಿವಿ | + ತಿಮ್ಮ + ಪುರ | = ಕಣಿವಿ ತಿಮ್ಮಲಾಪುರ |

ಈ ಮೇಲಿನ ದೈವಮೂಲ ಸ್ಥಳನಾಮಗಳಲ್ಲಿ ಕೆಲವು ದೈವಮೂಲದ ವ್ಯಕ್ತಿನಾಮಗಳಿಂದ ಊರ ಹೆಸರುಗಳು ಇವೆ. ಉದಾಹರಣೆಗೆ ಚೌಡ, ಹಂಪ, ಲಕ್ಷ್ಮಿ, ಓಬಳ, ನಾರಾಯಣ, ಸೋಮ ಎಂಬ ಹೆಸರುಗಳಿವೆ. ವಾರ್ಗಿಕವಾದ ಪುರ ಸೇರ್ಪಡೆಯಾಗಿ ಇದು ಸ್ಥಳನಾಮವಾಗಿದೆ.

**'ಕ್ಯಾಂಪ್' ವಾರ್ಗಿಕದಿಂದ ಕೊನೆಯಾಗುವ ಸ್ಥಳನಾಮಗಳು**

'ಕ್ಯಾಂಪ್' ಎಂಬುದು ಇಂಗ್ಲಿಷ್ ಪದ. ನೆಲೆಯೂರಿಕೆ ಒಂದು ಕಡೆ ಗುಂಪಾಗಿ ನೆಲೆಸುವುದು. ಆಂಧ್ರದಿಂದ ವಲಸೆ ಬಂದ ಅನೇಕ ಸಮುದಾಯಗಳು ಕರ್ನಾಟಕದ ಗಡಿಭಾಗಗಳಲ್ಲಿ ಕ್ಯಾಂಪ್‌ಗಳನ್ನು ನಿರ್ಮಿಸಿಕೊಂಡು ಅವುಗಳಿಗೆ ವ್ಯಕ್ತಿ ಮತ್ತು ದೈವಕ್ಕೆ ಸಂಬಂಧಿಸಿದ ಹೆಸರುಗಳನ್ನು ಕೊಟ್ಟಿದ್ದಾರೆ. ಕೆಲವೊಂದು ದೈವಮೂಲ 'ಕ್ಯಾಂಪ್'ಗಳನ್ನು ಈ ಕೆಳಗಿನಂತೆ ನೋಡಬಹುದು.

| **ನಿರ್ದಿಷ್ಟ –** | **ವಾರ್ಗಿಕ** | |
|---|---|---|
| ದುರ್ಗ | + ಕ್ಯಾಂಪ್ | = ದುರ್ಗಕ್ಯಾಂಪ್ |
| ಜಡೆ | + ತಾತ + ಕ್ಯಾಂಪ್ | = ಜಡೆತಾತ ಕ್ಯಾಂಪ್ |
| ಮಾರುತಿ | + ಕ್ಯಾಂಪ್ | = ಮಾರುತಿ ಕ್ಯಾಂಪ್ |
| ಗಂಗ | + ಭವಾನಿ + ಕ್ಯಾಂಪ್ | = ಗಂಗಭವಾನಿ ಕ್ಯಾಂಪ್ |
| ಕೃಷ್ಣ | + ನಗರ + ಕ್ಯಾಂಪ್ | = ಕೃಷ್ಣನಗರ ಕ್ಯಾಂಪ್ |
| ಎಂಕ | + ಅಪ್ಪ + ತಾತ + ಕ್ಯಾಂಪ್ | = ಎಂಕಪ್ಪತಾತ ಕ್ಯಾಂಪ್ |

| | | | | | | |
|---|---|---|---|---|---|---|
| ಧನ | + | ಲಕ್ಷ್ಮಿ | + | ಕ್ಯಾಂಪ್ | = | ಧನಲಕ್ಷ್ಮಿ ಕ್ಯಾಂಪ್ |
| ಗೋಪಾಲ | + | ಪುರ | + | ಕ್ಯಾಂಪ್ | = | ಗೋಪಾಲಪುರ ಕ್ಯಾಂಪ್ |
| ರಂಗ | + | ಅವ್ವ | + | ಕ್ಯಾಂಪ್ | = | ರಂಗವ್ವ ಕ್ಯಾಂಪ್ |
| ಲಕ್ಷ್ಮೀ | + | ಪುರ | + | ಕ್ಯಾಂಪ್ | = | ಲಕ್ಷ್ಮೀಪುರ ಕ್ಯಾಂಪ್ |
| ಬಸವ | + | ಅಣ್ಣ | + | ಕ್ಯಾಂಪ್ | = | ಬಸವಣ್ಣ ಕ್ಯಾಂಪ್ |
| ಸತ್ಯ | + | ನಾರಾಯಣ | + | ಕ್ಯಾಂಪ್ | = | ಸತ್ಯನಾರಾಯಣ ಕ್ಯಾಂಪ್ |

ಬಳ್ಳಾರಿ ಪರಿಸರದ ಸಿರುಗುಪ್ಪ, ಬಳ್ಳಾರಿ, ಗಂಗಾವತಿ, ಸಿಂಧನೂರು ಸುತ್ತಮುತ್ತಲಲ್ಲಿ ಈ ಕ್ಯಾಂಪ್‌ಗಳು ಹೆಚ್ಚು ಇರುವುದನ್ನು ನೋಡಬಹುದು. ಆಂಧ್ರದಿಂದ ಬಂದ ದೊಡ್ಡ ಕುಳಗಳು ತಮ್ಮ ಹೆಸರುಗಳನ್ನು ಈ ಸ್ಥಳಗಳಿಗೆ ನೀಡಿದ್ದಾರೆ. ಹಾಗೆಯೇ ದೇವರ ಹೆಸರಿನ ಕ್ಯಾಂಪ್‌ಗಳು ಇವೆ. ಇದಕ್ಕೆ ಕಾರಣವನ್ನು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಕೇಳಿದಾಗ, ದೇವರು ನಾವಿರುವ ಸ್ಥಳವನ್ನು ರಕ್ಷಿಸುತ್ತಾನೆ ಎಂಬ ನಂಬಿಕೆಯಿಂದ ನಮ್ಮ ಕ್ಯಾಂಪ್‌ಗೆ ದೇವರ ಹೆಸರನ್ನು ನಾಮಕರಣ ಮಾಡಿದ್ದೇವೆ ಎಂದು ಹೇಳುತ್ತಾರೆ.

ಕೇವಲ ದೈವಮೂಲ ಹೆಸರಿನ ಕ್ಯಾಂಪ್‌ಗಳೊಂದೇ ಅಲ್ಲದೆ, ಈಗಾಗಲೇ ವಸತಿಯಿರುವ ಗ್ರಾಮದ ಪಕ್ಕದಲ್ಲಿಯೇ ವಲಸೆ ಬಂದವರು ನೆಲೆಯೂರಿದರೆ ಆ ಊರಿನ ಹೆಸರಿನ ಮುಂದೆ 'ಕ್ಯಾಂಪ್' ಎಂದು ನಿರ್ದೇಶಿಸಿಕೊಂಡಿರುವ ಹಲವಾರು ಕ್ಯಾಂಪ್‌ಗಳನ್ನು ನಾವಿಂದು ನೋಡುತ್ತೇವೆ. ಉದಾಹರಣೆಗೆ ಬಸರಳ್ಳಿ ಕ್ಯಾಂಪ್, ಬೂದಗುಪ್ಪಾ ಕ್ಯಾಂಪ್, ರೆಗುಲೇಟರ್ ಕ್ಯಾಂಪ್, ಸಾಲಿಗನೂರು ಕ್ಯಾಂಪ್, ವಡ್ಡರಹಟ್ಟಿ ಕ್ಯಾಂಪ್, ಯರಂಗಿಳಿಗಿ ಕ್ಯಾಂಪ್, ಹಿರೇಹಡಗಲಿ ಕ್ಯಾಂಪ್, ಸಿದ್ದಮ್ಮನ ಹಳ್ಳಿ ಕ್ಯಾಂಪ್‌ಗಳನ್ನು ನೋಡಬಹುದಾಗಿದೆ.

ಈ ಮೊದಲು ತಿಳಿಸಿರುವ ದೈವಮೂಲ ಕ್ಯಾಂಪ್‌ಗಳಲ್ಲಿ ಮೊದಲನೆ ಭಾಗವಾದ ನಿರ್ದಿಷ್ಟದಲ್ಲಿ ಹೆಸರುಗಳನ್ನು ನಿರ್ದೇಶಿಸುತ್ತವೆ. ಇದರಲ್ಲಿ ಜಡೆತಾತ ಕ್ಯಾಂಪ್ ಮತ್ತು ಎಂಕಪ್ಪ ತಾತ ಕ್ಯಾಂಪ್ ಎನ್ನುವ ಸ್ಥಳಗಳ ಹೆಸರುಗಳಲ್ಲಿ ಜಡೆತಾತ ಮತ್ತು ಎಂಕಪ್ಪ ತಾತ ಬಳ್ಳಾರಿ ಜಿಲ್ಲೆಯ ಪವಾಡ ಪುರುಷರಾಗಿ, ದೈವತ್ವದ ಸ್ಥಾನವನ್ನು ಪಡೆದವರಾಗಿದ್ದಾರೆ. ಜೊತೆಗೆ ಸ್ಥಳನಾಮಗಳಲ್ಲಿ ಸಂಬಂಧವಾಚಕ ಪದಗಳನ್ನು ಗುರುತಿಸಬಹುದು. ಉದಾಹರಣೆಗೆ 'ತಾತ' ಎಂಬುದು ಸಂಬಂಧವಾಚಕವಾಗಿದ್ದು, ಅವ್ವ, ಅಪ್ಪ, ಅಣ್ಣ ಸಂಬಂಧವಾಚಕಗಳನ್ನು ಬಳಸಿಕೊಂಡಿರುವ ಕ್ಯಾಂಪ್‌ಗಳನ್ನು ಈ ಮೇಲೆ ಗಮನಿಸಬಹುದಾಗಿದೆ. ಹೀಗೆ ಕ್ಯಾಂಪ್‌ಗಳು ವಿವಿಧ ಸ್ವರೂಪಗಳನ್ನು ಪಡೆದುಕೊಂಡು ವೈಶಿಷ್ಟ್ಯದಿಂದ ಕೂಡಿವೆ.

**'ಹಳ್ಳಿ' ವಾರ್ಗಿಕದಿಂದ ಕೊನೆಯಾಗುವ ದೈವಮೂಲ ಸ್ಥಳನಾಮಗಳು**

ನಿರ್ದಿಷ್ಟ – ವಾರ್ಗಿಕ

ಹಂಪ+ದೇವನ ಹಳ್ಳಿ = ಹಂಪಾದೇವನಹಳ್ಳಿ

ಪರಮ+ದೇವನ+ಹಳ್ಳಿ = ಪರಮದೇವನಹಳ್ಳಿ

ಮರಿ+ಅಮ್ಮನ+ಹಳ್ಳಿ = ಮರಿಯಮ್ಮನಹಳ್ಳಿ

ಶ್ರೀರಾಮ+ಶೆಟ್ಟಿ+ಹಳ್ಳಿ = ಶ್ರೀರಾಮಶೆಟ್ಟಿ ಹಳ್ಳಿ

ಲಿಂಗ+ದೇವನ+ಹಳ್ಳಿ = ಲಿಂಗದೇವನಹಳ್ಳಿ

ಭೈರ+ದೇವನ+ಹಳ್ಳಿ = ಭೈರದೇವನಹಳ್ಳಿ

ಮಲ್ಲಿ = ಮಲ್ಲಿಕಾರ್ಜುನ ಹಳ್ಳಿ

ನಾಗ+ನಾಥನ+ಹಳ್ಳಿ = ನಾಗನಾಥನಹಳ್ಳಿ

ಇಡೀ ಬಳ್ಳಾರಿ ಜಿಲ್ಲೆಯ ಹೆಸರುಗಳನ್ನು ಗಮನಿಸಿದಾಗ 'ಹಳ್ಳಿ' ವಾರ್ಗಿಕದಿಂದ ಕೊನೆಯಾಗುವ ಗ್ರಾಮನಾಮಗಳನ್ನು ಗಮನಿಸಬಹುದು. ಈ ಮೇಲೆ ತಿಳಿಸಿದ ದೈವಮೂಲ ಗ್ರಾಮಗಳನ್ನು ಹೊರತುಪಡಿಸಿ 'ಹಳ್ಳಿ'ಯಿಂದ ಕೊನೆಯಾಗುವ ಇನ್ನೂ ಅನೇಕ ಹೆಸರುಗಳು ನಮಗೆ ಸಿಗುತ್ತವೆ.

ಉದಾಹರಣೆಗೆ 'ಜಾತಿ'ಯನ್ನು ಪ್ರತಿನಿಧಿಸುವ ಗ್ರಾಮನಾಮಗಳಿವೆ. ಗೊಲ್ಲರಹಳ್ಳಿ, ದಾಸರ ಹಳ್ಳಿ, ಕೊರಚರ ಹಳ್ಳಿ/ಹಟ್ಟಿ, ಉಪ್ಪಾರಹಳ್ಳಿ.

ಈ ಮೇಲೆ ತಿಳಿಸಿದ ಗ್ರಾಮನಾಮಗಳು ಜಾತಿಯನ್ನು ಸೂಚಿಸುವ ಹಳ್ಳಿಗಳಾಗಿವೆ. ಇವುಗಳನ್ನು ಆಡುಮಾತಿನಲ್ಲಿ ಗೊಲ್ರಳ್ಳಿ, ದಾಸ್ರಳ್ಳಿ, ಕೊರಚ್ರಟ್ಟಿ, ಉಪ್ಪಾರಳ್ಳಿ ಎಂದು ಕರೆಯಲ್ಪಡುತ್ತವೆ. ಸೌಲಭ್ಯಕಾಂಕ್ಷೆಗಾಗಿ ಜನರು ಹೀಗೆ ಕರೆದುಕೊಳ್ಳುತ್ತಾರೆ.

**'ಗುಡಿ' ವಾರ್ಗಿಕದಿಂದ ಕೊನೆಯಾಗುವ ಸ್ಥಳನಾಮಗಳು**

ನಿರ್ದಿಷ್ಟ - ವಾರ್ಗಿಕ

ಅನಂತ+ಶಯನಗುಡಿ = ಅನಂತಶಯನಗುಡಿ

ಮಲ್ಲ+ಅಪ್ಪನ+ಗುಡಿ = ಮಲ್ಲಪ್ಪನಗುಡಿ (ಮಲಪನ ಗುಡಿ)

ಗಾಳಿ+ಅಮ್ಮನ+ಗುಡಿ = ಗಾಳೆಮ್ಮನ ಗುಡಿ

ಹೊಸ+ಮಲ್ಲ+ಅಪ್ಪನ+ಗುಡಿ = ಹೊಸ ಮಲಪ್ಪನಗುಡಿ (ಹೊಸಮಲಪನಗುಡಿ)

ಈ ಮೇಲಿನ ಸ್ಥಳನಾಮಗಳನ್ನು ಗಮನಿಸಿದಾಗ, ಆ ಊರುಗಳಲ್ಲಿರುವ ಗುಡಿಯ ದೇವತೆಯಿಂದ ಈ ಊರುಗಳಿಗೆ ಹೆಸರು ಬಂದಿರಬೇಕು. ಮೇಲೆ ತಿಳಿಸಿದ ಆಯಾ ಊರುಗಳಲ್ಲಿ ಆ ದೇವತೆಗಳ ಪ್ರತಿಷ್ಠಾಪನೆಗೊಂಡಿವೆ. ಅನಂತಶಯನ, ಮಲ್ಲಪ್ಪ (ಮಲ್ಲಿಕಾರ್ಜುನ) ಗಾಳೆಮ್ಮ ದೇವತೆಗಳನ್ನು ನಾವು ನೋಡಬಹುದು.

**'ದುರ್ಗ' ವಾರ್ಗಿಕದಿಂದ ಕೊನೆಯಾಗುವ ದೈವಮೂಲ ಸ್ಥಳನಾಮಗಳು**

ಉಚ್ಚಂಗಿದುರ್ಗ

ರಾಮದುರ್ಗ

ಬಸವನದುರ್ಗ

'ದುರ್ಗ'ದಿಂದ ಕೊನೆಯಾಗುವ ಗ್ರಾಮನಾಮಗಳು ಬಳ್ಳಾರಿ ಪರಿಸರದಲ್ಲಿ ಕಡಿಮೆ ಪ್ರಮಾಣದಲ್ಲಿ ಸಿಗುತ್ತವೆ. ಇದರಿಂದ ತಿಳಿಯುವುದೇನೆಂದರೆ ಈ ಊರಿನ ಸುತ್ತ ಅಥವಾ ತಾವು ನೆಲೆಸಿದ ನೆಲೆಯ ಸುತ್ತ ಕೋಟೆಯಿಂದ ಆ ಸ್ಥಳವು ಆವೃತ್ತವಾಗಿರುವ ಕುರುಹುಗಳು ಸಿಗುತ್ತವೆ. ಮೇಲಾಗಿ ಆ ಊರಿನಲ್ಲಿ ಈ ಮೇಲೆ ತಿಳಿಸಿದ ಊರುಗಳ ನಿರ್ದಿಷ್ಟ ಭಾಗದಲ್ಲಿರುವ ದೇವತೆಗಳಿವೆ.

**'ಗುಡ್ಡ' ವಾರ್ಗಿಕದಿಂದ ಕೊನೆಯಾಗುವ ದೈವಮೂಲ ಸ್ಥಳನಾಮಗಳು**

ರಾಮಲಿ ಗುಡ್ಡ

ಗುಡ್ಡದ ತಿಮ್ಮಪ್ಪ

ಅಮರ ದೇವರಗುಡ್ಡ

ಜಂಬುನಾಥನ ಗುಡ್ಡ

ಅಂಜನಾದ್ರಿ

ಕುಮಾರಸ್ವಾಮಿ ಬೆಟ್ಟ

ಈ ಮೇಲಿನ ಸ್ಥಳನಾಮಗಳನ್ನು ಗಮನಿಸಿದಾಗ ಗುಡ್ಡ ಮತ್ತು ಬೆಟ್ಟ ವಾರ್ಗಿಕಗಳಿಂದ ಕೂಡಿವೆ. ಇಂತಹ ಅನೇಕ ದೇವರುಗಳು ಇರುವ ಬೆಟ್ಟ ಗುಡ್ಡಗಳಿವೆ. ಮೇಲೆ ತಿಳಿಸಿರುವ 'ರಾಮಲಿ ಗುಡ್ಡ' ಸಂಡೂರು ತಾಲ್ಲೂಕಿನ ರಾಮನಮಲೆ (ಹೊಸಮಲೆದುರ್ಗ) ಇದಕ್ಕೆ ಆಡುಮಾತಿನಲ್ಲಿ ರಾಮಲಿಗುಡ್ಡ ಎನ್ನುತ್ತಾರೆ. ಆ ಗುಡ್ಡದಲ್ಲಿ ಕುಮಾರರಾಮನ ದೇವಸ್ಥಾನವಿದ್ದುದರಿಂದ ಅದನ್ನು ರಾಮನಮಲೆ ಎಂದು ಕರೆಯುತ್ತಾರೆ. ಕುಮಾರರಾಮನನ್ನು ಉತ್ತರ ಕರ್ನಾಟಕದಾದ್ಯಂತ ಪೂಜೆಮಾಡುತ್ತಾರೆ. ಕುಮಾರರಾಮ ನಮ್ಮ ಜನಪದರಲ್ಲಿ ಇಂದಿಗೂ ಪೂಜೆಗೊಳ್ಳುತ್ತಲಿದ್ದಾನೆ. ಗುಡ್ಡದ ತಿಮ್ಮಪ್ಪ ಹಗರಿ ಬೊಮ್ಮನಹಳ್ಳಿ ತಾಲೂಕಿನಲ್ಲಿರುವ ಸ್ಥಳವಾಗಿದೆ. ಪ್ರತೀವರ್ಷ ಪಂಚಮಿ ಹಬ್ಬವಾದ ಮೇಲೆ ಸುತ್ತಮುತ್ತಲಿರುವ ಜನರು ಇಲ್ಲಿಗೆ ಸೇರುತ್ತಾರೆ. ಮೇಲೆ ತಿಮ್ಮಪ್ಪನ ದೇವಸ್ಥಾನವಿದೆ. ಹಾಗೆಯೇ ಅಮರದೇವರ ಗುಡ್ಡ, ಜಂಬುನಾಥನಗುಡ್ಡ, ಅಂಜನಾದ್ರಿ, ಕುಮಾರಸ್ವಾಮಿ ಬೆಟ್ಟಗಳಲ್ಲಿ ದೈವಗಳಿವೆ. ಈ ಸ್ಥಳಗಳಲ್ಲಿ ಕಡಿಮೆ ಜನವಸತಿಯಿದೆ. ಕಾರಣ ಗುಡ್ಡದಲ್ಲಿ ಏರು–ತಗ್ಗಿನ ಪ್ರದೇಶವಿರುವ ಕಾರಣಕ್ಕಾಗಿ. ಹೀಗೆ ಕಟ್ಟೆ, ಕೋಟೆ, ಸಾಗರ, ಹಟ್ಟಿ ಮುಂತಾದ ವಾರ್ಗಿಕಗಳನ್ನೊಂದಿದ ದೈವಮೂಲ ಸ್ಥಳನಾಮಗಳನ್ನು ಬಳ್ಳಾರಿ ಪರಿಸರದಲ್ಲಿ ಕಾಣಬಹುದಾಗಿದೆ.



ಅಧ್ಯಾಯ : ಐದು

# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು–ಸಾಮಾಜಿಕ ಮತ್ತು ಮೌಖಿಕ ದೃಷ್ಟಿಕೋನ

೫.೧. ಬಳ್ಳಾರಿ ಪರಿಸರದ ಭೌಗೋಳಿಕತೆ

೫.೨. ಚಾರಿತ್ರಿಕ ಹಿನ್ನೆಲೆ

೫.೩. ಸಾಂಸ್ಕೃತಿಕ ಹಿನ್ನೆಲೆ

೫.೪. ಭಾಷಿಕ ಹಿನ್ನೆಲೆ

೫.೫. ಸಾಮಾಜಿಕ ದೃಷ್ಟಿಕೋನ: ಸಮುದಾಯಗಳ ಹಿನ್ನೆಲೆಯಲ್ಲಿ

೫.೫.೧. ಗೊಲ್ಲರು

೫.೫.೨. ನಾಯಕರು

೫.೫.೩. ಕುರುಬರು

೫.೫.೪. ಕೊರಚರು

೫.೫.೫. ಲಂಬಾಣಿಗರು

೫.೫.೬. ಮಾದಿಗರು

೫.೫.೭. ಬ್ರಾಹ್ಮಣರು

೫.೫.೮. ಲಿಂಗಾಯತರು

೫.೫.೯. ಮುಸ್ಲಿಮರು

೫.೬. ವ್ಯಕ್ತಿನಾಮ ದ್ವೀಪಗಳು

೫.೭. ಸ್ಥಳನಾಮಗಳ ಸಾಮಾಜಿಕ ದೃಷ್ಟಿಕೋನ

೫.೮. ಮೌಖಿಕ ದೃಷ್ಟಿಕೋನ

೫.೮.೧. ದೇವತೆಗಳ ಬಗೆಗಿರುವ ಐತಿಹ್ಯಗಳು

೫.೮.೨. ವ್ಯಕ್ತಿ ಮತ್ತು ಸಮುದಾಯದ ಬಗೆಗಿರುವ ಐತಿಹ್ಯಗಳು

೫.೮.೩. ಸ್ಥಳ ಐತಿಹ್ಯಗಳು

೫.೮.೪. ಗಾದೆಗಳಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳು

೫.೮.೫. ಒಗಟಿನಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳು

೫.೮.೬. ಒಡಪುಗಳಲ್ಲಿ ವ್ಯಕ್ತಿನಾಮಗಳು

೫.೫.೭. ಜನಪದ ಹಾಡುಗಳಲ್ಲಿ ದೈವನಾಮ ಮತ್ತು ಸ್ಥಳನಾಮಗಳು

## ಅಧ್ಯಾಯ: ಐದು

# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು–ಸಾಮಾಜಿಕ ಮತ್ತು ಮೌಖಿಕ ದೃಷ್ಟಿಕೋನ

ವ್ಯಕ್ತಿ ಮತ್ತು ಸ್ಥಳನಾಮಗಳು ಸಂಸ್ಕೃತಿಯ ನಿರ್ವಚನಕ್ಕೆ ಮಹತ್ವವಾದ ಸಂಗತಿಗಳನ್ನು ನೀಡುತ್ತವೆ. ಈವರೆಗೆ ಚರಿತ್ರೆ ಅಧ್ಯಯನಕಾರರು, ಸಂಸ್ಕೃತಿ ಶೋಧಕರು ಇತರ ಆಧಾರಗಳನ್ನು ಇಟ್ಟುಕೊಂಡು ಸಂಸ್ಕೃತಿ ಚಿಂತನೆ ನಡೆಸಿದಂತೆ, ಸಂಸ್ಕೃತಿಗೆ ಅಥವಾ ಸಮಾಜಕ್ಕೆ ಮುಖ್ಯ ಪ್ರತಿನಿಧಿಗಳಾಗಿ ನಿಲ್ಲಬಲ್ಲಂತಹ ವ್ಯಕ್ತಿನಾಮಗಳನ್ನು, ಸ್ಥಳನಾಮಗಳನ್ನು ವಿಶೇಷವಾಗಿ ಪರಿಗಣಿಸಿಲ್ಲ. ಅಲ್ಲದೇ ಅವುಗಳ ಮಹತ್ವವನ್ನು ಇನ್ನೂ ಸರಿಯಾಗಿ ತಿಳಿದುಕೊಂಡಿಲ್ಲ. ಹೆಸರುಗಳ ಮೂಲಕ ಸಂಸ್ಕೃತಿಯ ಚಿಂತನೆಯನ್ನು ನಡೆಸಿದವರಲ್ಲಿ ಶಂಬಾಜೋಶಿಯವರೇ ಕರ್ನಾಟಕದ ಮಟ್ಟಿಗೆ ಮೊದಲಿಗರಾಗಿದ್ದಾರೆ. ಈ ಮೂಲಕ ನಾಮಾಧ್ಯಯನದ ಅನಿವಾರ್ಯತೆಯನ್ನು ಎತ್ತಿ ತೋರಿಸಿದರು. ಮುಂದೆ ಈ ಅನಿವಾರ್ಯತೆಯನ್ನು ವ್ಯಾಪಕವಾಗಿ ಮುಂದುವರೆಸುವ ಪ್ರಯತ್ನಗಳು ನಡೆಯಲೇ ಇಲ್ಲ. ಬದಲಾಗಿ ವರ್ಣನಾತ್ಮಕ ಮತ್ತು ರಾಚನಿಕ ಮಾದರಿಯ ಸಾಂಪ್ರದಾಯಿಕ ನೆಲೆಯಲ್ಲಿಯೇ ಮುಂದುವರಿಸಲಾಯಿತು.

ಎಂಬತ್ತರ ದಶಕದಲ್ಲಿ ಗೋಪಾಲಕೃಷ್ಣ ವಿ. ಅವರು "ಕೋಲಾರ ಜಿಲ್ಲೆಯ ಸ್ಥಳನಾಮಗಳು ಭಾಷಿಕ, ಸಾಮಾಜಿಕ ಅಧ್ಯಯನ" ಎಂಬ ಪಿಎಚ್.ಡಿ. ಪ್ರಬಂಧದಲ್ಲಿ ಅಲ್ಲಲ್ಲಿ ಸಾಮಾಜಿಕ ಅಂಶಗಳನ್ನು ಭಾಷೆಯ ಮುಖೇನ ಗಮನಿಸಿದ್ದಾರೆ. ಸ್ಥಳನಾಮಗಳನ್ನು ಭಾಷಿಕ ಘಟಕಗಳಿಂದ ದೂರವಿರಿಸಿ, ಜನಜೀವನದಕಡೆಗೆ, ಅವರ ಸಂಸ್ಕೃತಿಯ ಕಡೆಗೆ ತರುವ ಕೆಲಸವಾಗಲಿಲ್ಲ. ಸಂಪೂರ್ಣವಾಗಿ ವರ್ಣನಾತ್ಮಕ ಮಾದರಿಯಲ್ಲೇ ಅಧ್ಯಯನಕಾರರು ವಿವರಿಸಿದರು. ಈ ಹಿಂದೆ ನಾಮಾಧ್ಯಯನದ ಬಗೆಗಿನ ಅಧ್ಯಯನಗಳು ಸಮಾಜಮುಖಿ ಅಂಶಗಳನ್ನು ಗಮನಿಸಲಿಲ್ಲ. ಈ ದೃಷ್ಟಿಯಿಂದ, ಸಮುದಾಯದ ಸಂಸ್ಕೃತಿಯನ್ನು ಅನಾವರಣಗೊಳಿಸುವಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳನ್ನು ಸಮಾಜೋಭಾಷಿಕ ನೆಲೆಯಲ್ಲಿ ವಿಶ್ಲೇಷಿಸುವುದು ಇಂದು ಅಗತ್ಯವಾಗಿದೆ.

ಸಾಮಾಜಿಕ ಪರಿಸರದ ಅಧ್ಯಯನಕ್ಕೆ ತೊಡಗುವಾಗ ಅಲ್ಲಿನ ಭೌಗೋಳಿಕತೆ ಮುಖ್ಯವಾಗಿರುತ್ತದೆ. ಜೊತೆಗೆ ಚಾರಿತ್ರಿಕ, ಸಾಂಸ್ಕೃತಿಕ, ಭಾಷಿಕ ಅಂಶಗಳನ್ನು ಪ್ರಸ್ತಾಪಿಸುತ್ತ ಸಾಮಾಜಿಕ ಅಧ್ಯಯನದ ಸಾಧ್ಯತೆಗಳನ್ನು ವಿವಿಧ ಆಯಾಮಗಳಲ್ಲಿ ಚರ್ಚೆಗೊಳಪಡಿಸಲಾಗಿದೆ. ಭೌಗೋಳಿಕ ಪರಿಸರದಲ್ಲಿ

ವ್ಯಕ್ತಿ, ಆತನ ಸುತ್ತಣ ಪರಿಸರ, ಕುಟುಂಬದ ಧರ್ಮಾಚರಣೆಗಳು, ನಂಬಿದ ದೈವ, ವ್ಯವಸ್ಥೆಯಲ್ಲಿ ಬದುಕುವ ಇತರೆ ಸಮುದಾಯಗಳು ಮುಂತಾದವು ಒಳಗೊಳ್ಳುತ್ತವೆ. ಇವೆಲ್ಲವೂ ಸಾಂಸ್ಕೃತಿಕ ಆಯಾಮಗಳ ಒಳಗೆ ಸ್ಥಿರೀಕರಿಸಲ್ಪಟ್ಟಿರುತ್ತವೆ.

ವ್ಯಕ್ತಿನಾಮಗಳನ್ನು ಸಮುದಾಯದ ಪ್ರತಿನಿಧಿಗಳೆಂದು ಅಧ್ಯಯನ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ವಿವಿಧ ವರ್ಗಗಳು ನಿರ್ದೇಶಿಸಿಕೊಳ್ಳುವ ಹೆಸರುಗಳು ಆ ಹೆಸರಿಗೆ ಕಾರಣ, ಮೂಲ, ಪರಂಪರೆ, ಆಚರಣಾ ವಿಧಿಗಳು ತಿಳಿದುಬರುತ್ತವೆ. ಹೆಸರಿನೊಂದಿಗೆ ಬರುವ ವಾರ್ಗಿಕಗಳು, ಅವುಗಳ ಬಳಕೆಯ ವ್ಯಾಪಕತೆ, ಕಾಲಾಂತರದಲ್ಲಿ ಬದಲಾವಣೆಯಾದ ಮಜಲುಗಳು ಪಡೆದುಕೊಂಡ ಅರ್ಥಾಂತರ ಹೀಗೆ ಮುಂತಾದ ವಿಶೇಷಣಗಳು ನಮ್ಮ ಮುಂದೆ ನಿಲ್ಲುತ್ತವೆ. ಈ ಸಂಗತಿಗಳು ಪ್ರಾಚೀನ ಸಂಸ್ಕೃತಿಯೊಂದರ ಚಿತ್ರಣವನ್ನು ನೀಡುತ್ತವೆ.

ಆಧುನಿಕತೆ ಎನ್ನುವುದು ಸಹಜವಾಗಿಯೇ ತನ್ನ ವ್ಯಾಪಕವಾದ ಪ್ರಭಾವವನ್ನು ಹೆಸರುಗಳ ಮೇಲೂ ಬೀರಿದೆ. ಈ ಬದಲಾವಣೆಯ ಹಂತದಲ್ಲಿ ಸಮುದಾಯಗಳು ತಮ್ಮ ಪ್ರಾಚೀನ ಪರಂಪರೆ ಎಂಬುದು ಸಹಜವಾಗಿಯೇ ಬದಲಾವಣೆಗೆ ತೊಡಗಿಕೊಂಡಿದೆ. ಪ್ರಾಚೀನ ಹೆಸರುಗಳಿಂದ ಒಂದು ಸಂಸ್ಕೃತಿಯನ್ನು ಒಂದು ಸಮುದಾಯವನ್ನು ಗುರುತಿಸುವಂತೆ ಇಂದಿನ ಹೆಸರುಗಳಲ್ಲಿ ಗುರುತಿಸುವುದು ಕಷ್ಟವಾಗುತ್ತದೆ. ಹೆಚ್ಚಾಗಿ ಭಾವನಾಮಗಳೇ ಇಂದು ನಿರ್ದೇಶಿಸಲ್ಪಡುತ್ತವೆ. ಎಲ್ಲ ಸಮುದಾಯಗಳಲ್ಲೂ ನಾವು ಭಾವನಾಮಗಳನ್ನು ಕಾಣಬಹುದಾಗಿದೆ.

ಬಳ್ಳಾರಿ ಪರಿಸರದಲ್ಲಿ ದೈವಮೂಲದ ಹೆಸರುಗಳು ಪುರುಷರಲ್ಲಿ ಹೆಚ್ಚಾಗಿ ಉಳಿದಿವೆ. ಸ್ತ್ರೀಯರಲ್ಲಿ ಹೆಚ್ಚು ಆಧುನಿಕತೆ ಪ್ರವೇಶಿಸಿದೆ. ಪ್ರಾದೇಶಿಕ ನೆಲೆಯಲ್ಲಿ ಸಮುದಾಯಗಳ ಪ್ರಸಿದ್ಧ ದೈವಗಳಿಂದ ನಾಮನಿರ್ದೇಶನಗೊಂಡು, ವ್ಯಕ್ತಿನಾಮ ದ್ವೀಪಗಳಾಗಿ ಗುರುತಿಸಿಕೊಳ್ಳುತ್ತಿದ್ದ ಪರಿಸರ ಇಂದು ಬದಲಾಗುತ್ತಿದೆ.

ಹೀಗೆ ವ್ಯಕ್ತಿನಾಮಗಳ ಪರಂಪರೆ, ಅಂದರೆ ದೈವಮೂಲ ಹೆಸರುಗಳು ಗ್ರಾಮೀಣ ಪರಿಸರದಲ್ಲಿ ಕಡಿಮೆ ಪ್ರಮಾಣದಲ್ಲಿಯೂ ಪಟ್ಟಣ ಪರಿಸರದಲ್ಲಿ ಅಧಿಕ ಪ್ರಮಾಣದಲ್ಲಿ ಕಳಚಿಕೊಳ್ಳುತ್ತಿದೆ. ಪ್ರಾಚೀನತೆ ಮತ್ತು ಆಧುನಿಕತೆ ಈ ಎರಡರ ನಡುವೆ ಸಾಂಘರ್ಷಿಕ ಹಂತದಲ್ಲಿ, ಪ್ರಸ್ತುತ ಸಮಾಜದಲ್ಲಿ ವ್ಯಕ್ತಿನಾಮಗಳು ಮುಖಾಮುಖಿಯಾಗುವ ಹಲವಾರು ಆಯಾಮಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಇನ್ನು ಸ್ಥಳನಾಮಗಳ ವಿಚಾರಕ್ಕೆ ಬಂದಾಗ, ಬಳ್ಳಾರಿ, ಸಿರುಗುಪ್ಪ, ಕೂಡ್ಲಿಗಿ, ಹೊಸಪೇಟೆ ಮತ್ತು ಸಂಡೂರಿನಲ್ಲಿಯೂ ಕನ್ನಡ ಮತ್ತು ತೆಲುಗು ಭಾಷೆಯನ್ನಾಡುವ ಜನರಿದ್ದರಿಂದ, ದ್ವಿ ಸಂಸ್ಕೃತಿಯ ಸಾಂಸ್ಕೃತಿಕ ಅಂಶಗಳು ಸ್ಥಳನಾಮಗಳ ಮೇಲೆ ಕಾಲಾಂತರದಲ್ಲಿ ಪ್ರಭಾವಿಸಿರುವುದು ಕಂಡುಬರುತ್ತದೆ. ಎರಡು ಸಂಸ್ಕೃತಿಗಳ ಸಾಮಾಜಿಕ ಸಂಬಂಧದಿಂದ ಜಾತಿ, ವರ್ಗ, ವ್ಯಕ್ತಿ, ವೃತ್ತಿ ಇವುಗಳ ನಡುವೆ ಸಂಸ್ಕೃತಾನುಕರಣ, ದೇಶೀಕರಣದಂತಹ ಪ್ರಕ್ರಿಯೆಗಳು ಹೆಸರುಗಳೊಂದಿಗೆ ಬೆಸೆದುಕೊಂಡ ಬಗೆಯನ್ನು ತಿಳಿಯಲು ಸಾಧ್ಯವಿದೆ.

ಒಂದು ನಿರ್ದಿಷ್ಟ ಸಮಾಜದಲ್ಲಿ ಸಮುದಾಯಗಳ ನೆಲೆಸುವಿಕೆಯ ಚಹರೆಗಳನ್ನು ಗುರುತಿಸುವಾಗ, ಪರಸ್ಪರ ಎರಡು ಭೌಗೋಳಿಕ ಪರಿಸರದಲ್ಲಿ ವಾಸಿಸುವ ಸಮುದಾಯಗಳಿಗೆ ಇರುವ ಭೌಗೋಳಿಕ ಅಂತರ್‌ಸಂಬಂಧ ಅತ್ಯಂತ ಮಹತ್ವದ್ದಾಗಿರುತ್ತದೆ. ಜಾತಿ ಅಥವಾ ವರ್ಗದ ನೆಲೆಯಲ್ಲಿ ಆಲೋಚಿಸುವಾಗ ವೃತ್ತಿಯನ್ನವಲಂಬಿಸಿ ಬದುಕುತ್ತಿದ್ದ ಸಮುದಾಯಗಳು ಪರಸ್ಪರ ವೃತ್ತಿಯನ್ನು ಕೊಡು-ಕೊಳೆಯನ್ನಾಗಿಟ್ಟುಕೊಂಡು ಒಂದೊಂದು ಗ್ರಾಮದಲ್ಲಿ ಒಂದೊಂದು ವಿಶಾಲ ಪ್ರದೇಶದಲ್ಲಿ ವಾಸಿದಂತಹ ಕುರುಹುಗಳನ್ನು ಸ್ಥಳಗಳ ಹೆಸರುಗಳಿಂದ ಅವು ಹೊಂದಿರುವ ಭೌಗೋಳಿಕ ಸಾಮಿಪ್ಯದಿಂದ ಕೂಡಿರುವುದು ತಿಳಿಯುತ್ತದೆ.

ಈ ಪರಿಸರದ ಸಮುದಾಯಗಳಲ್ಲಿ ಕೆಳವರ್ಗ ಮತ್ತು ಮೇಲ್ವರ್ಗ ಎಂಬ ಮೇಲ್ನೋಟದ ಗ್ರಹಿಕೆಯೊಂದಿಗೆ ಆ ಎರಡೂ ವರ್ಗಗಳಲ್ಲಿರುವ ಅಕ್ಷರಸ್ತ ಸಮುದಾಯ ಮತ್ತು ಅವರ ಉಚ್ಚಾರಣೆಯ ನಿಯಮಗಳು, ಅನಕ್ಷರಸ್ತ ಸಮುದಾಯ ಮತ್ತು ಅವರ ಉಚ್ಚಾರಣೆಯ ನಿಯಮಗಳು, ತಮ್ಮ ವಾಸದ ನೆಲೆಗಳಿಗೆ ಎರಡೂ ವರ್ಗಗಳು ಕರೆದುಕೊಳ್ಳುವ ಹೆಸರು, ಅಧಿಕೃತವಾಗಿ ಇರುವ ಹೆಸರು, ತಮ್ಮ ಹಟ್ಟಿಗಳಿಗೆ ಗೌಪ್ಯವಾಗಿ ಕರೆದುಕೊಳ್ಳುವ ಹೆಸರುಗಳು ಮಹತ್ವದ್ದಾಗಿವೆ. ಅದರಂತೆ ಮೇಲ್ವರ್ಗ ಮತ್ತು ಕೆಳವರ್ಗಗಳೆರಡೂ ಬಳಸುವ ಸ್ಥಳನಾಮ ಬರೆಹ ಮತ್ತು ಔಪಚಾರಿಕ ಬರೆಹ, ದಾಖಲೆ ಹಾಗೂ ಉಚ್ಚಾರಣೆಯಲ್ಲಾದ ಬದಲಾವಣೆಗಳನ್ನು ಇಲ್ಲಿ ಗಮನಿಸಲಾಗಿದೆ.

ಆಧುನಿಕತೆಯ ಒತ್ತಡದಿಂದಾಗಿ, ಹೆಸರುಗಳು ಸ್ಥಿತ್ಯಂತರಗೊಂಡಿರುವುದನ್ನು ನಾವು ಈ ಪರಿಸರದಲ್ಲಿ ಗಮನಿಸಬಹುದಾಗಿದೆ. ಮುಂಚೆ ಇದ್ದ ಸ್ಥಳನಾಮಗಳ ಮೇಲೆ ಉರ್ದು ಹಾಗೂ ಆಂಗ್ಲ ಆಡಳಿತದ ಪ್ರಭಾವದಿಂದಾಗಿ ಕನ್ನಡ ಭಾಷೆ ಮತ್ತು ಹೆಸರುಗಳ ಮೇಲಾದ ಪರಿಣಾಮ ಸಾಮಾಜಿಕ, ಭಾಷಿಕ ವ್ಯತ್ಯಾಸಗಳು ಇಲ್ಲಿ ಒಳಗೊಳ್ಳುತ್ತವೆ. ಜೊತೆಗೆ ಕೈಗಾರೀಕರಣ, ಜಾಗತೀಕರಣ, ಸಮಕಾಲೀನ ರಾಜಕಾರಣದಿಂದ ಪ್ರೇರಿತಗೊಂಡ ಸ್ಥಳನಾಮಗಳು ಎಡೆಪಡೆಯುತ್ತವೆ. ನಿರಂಕುಶ ಪ್ರಭುತ್ವ ಆಡಳಿತದ ದಬ್ಬಾಳಿಕೆ ಹಾಗೂ ಅವರ ಕಾಳಜಿಗಳೆರಡರಿಂದಲೂ ಪ್ರತಿನಾಮಕರಣ, ಸಂಸ್ಕೃತಾನುಕರಣ ಆಗಿರುವುದು ಕಂಡುಬರುತ್ತದೆ.

ಸ್ಥಳನಾಮ ಅಧ್ಯಯನವೆಂದರೆ ಎಲ್ಲ ಸ್ಥಳನಾಮಗಳ ಪ್ರಾಮಾಣಿಕವಾದ ನಿಷ್ಪತ್ತಿಯನ್ನು ನೀಡುವುದು ಮತ್ತು ಭಾಷಾಶಾಸ್ತ್ರದ ಮೂಲಕ ಅವುಗಳ ರಚನೆಯ ಅಧ್ಯಯನವನ್ನು ಮಾಡುವುದು ಎಂಬ ಅಭಿಪ್ರಾಯಗಳನ್ನು ವಿದ್ವಾಂಸರು ನೀಡುತ್ತಾರೆ. ಆದರೆ ಇದು ನಿಘಂಟಿನ ಅಧ್ಯಯನವಾಗಿ ಉಳಿಯುವ ಸಾಧ್ಯತೆಯಿದೆ. ಆದ್ದರಿಂದಾಗಿ ನಾಮಾಧ್ಯಯನವನ್ನು ಸಮಾಜಮುಖಿಯಾಗಿ ನೋಡುವ ಅಗತ್ಯವಿದೆ.

### ೫.೧. ಬಳ್ಳಾರಿ ಪರಿಸರದ ಭೌಗೋಳಿಕತೆ

ಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಯು ೧೪.೩೦°-೧೫.೫೦° ಉತ್ತರ ಅಕ್ಷಾಂಶ ಮತ್ತು ೭೫.೪೦°-೭೭.೧೧° ಪೂರ್ವ ರೇಖಾಂಶಗಳ ನಡುವೆ ಇದೆ. ರಾಜ್ಯದ ಪೂರ್ವದ ಕಡೆ ಇರುವ ಬಳ್ಳಾರಿ ಜಿಲ್ಲೆಯ ದಕ್ಷಿಣಕ್ಕೆ ಚಿತ್ರದುರ್ಗ, ಉತ್ತರಕ್ಕೆ ರಾಯಚೂರು, ಪಶ್ಚಿಮಕ್ಕೆ ಕೊಪ್ಪಳ, ನೈರುತ್ಯಕ್ಕೆ ದಾವಣಗೆರೆ,

ಪೂರ್ವಕ್ಕೆ ಆಂಧ್ರಪ್ರದೇಶದ ಸೀಮಾಂಧ್ರ ಪ್ರದೇಶದ ಅನಂತಪುರ ಹಾಗೂ ಕರ್ನೂಲ್ ಜಿಲ್ಲೆಗಳು ಗಡಿಗಳಾಗಿವೆ. ಬಳ್ಳಾರಿ ಜಿಲ್ಲೆಯು ಪೂರ್ವ-ಪಶ್ಚಿಮವಾಗಿ ೧೬೧ ಕಿ.ಮೀ. ಉದ್ದವಾಗಿಯೂ ಉತ್ತರ-ದಕ್ಷಿಣವಾಗಿ ೮೩.೭ ಕಿ.ಮೀ. ಅಗಲವಾಗಿಯೂ ವಿಸ್ತರಿಸಿದೆ. ಜಿಲ್ಲೆಯನ್ನು ಬಳ್ಳಾರಿ-ಹೊಸಪೇಟೆ ಎಂದು ಎರಡು ಉಪವಿಭಾಗಗಳಾಗಿ ವಿಂಗಡಿಸಿದೆ. ಸಿರುಗುಪ್ಪ, ಬಳ್ಳಾರಿ, ಸಂಡೂರು, ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ ಒಟ್ಟು ಏಳು ತಾಲೂಕುಗಳನ್ನು ಒಳಗೊಂಡಿದ್ದು, ಹರಪನಹಳ್ಳಿ ಈ ಹಿಂದೆ ಬಳ್ಳಾರಿ ಜಿಲ್ಲೆಗೆ ಒಳಪಟ್ಟಿದ್ದು, ಜಿಲ್ಲೆಗಳ ಪುನರ್ ವಿಂಗಡನೆಯ ಸಂದರ್ಭದಲ್ಲಿ ದಾವಣಗೆರೆ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಿದೆ.

ಜಿಲ್ಲೆಯ ಸಂಡೂರು, ಹೊಸಪೇಟೆ, ಕೂಡ್ಲಿಗಿ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ ತಾಲೂಕುಗಳಲ್ಲಿ ಕನ್ನಡ ಭಾಷೆಯು ಹೆಚ್ಚು ಬಳಕೆಯಿದ್ದು, ಸಿರುಗುಪ್ಪ ಮತ್ತು ಬಳ್ಳಾರಿ ತಾಲೂಕುಗಳಲ್ಲಿ ತೆಲುಗಿನ ಪ್ರಭಾವ ಹೆಚ್ಚಾಗಿದೆ. ೧೯೫೦ರ ನಂತರ ತುಂಗಭದ್ರ ನದಿಯಿಂದ ಕಾಲುವೆಗಳಲ್ಲಿ ನೀರು ಹರಿದು, ಲಕ್ಷಾಂತರ ಎಕರೆ ಪ್ರದೇಶ ಜಲಸಮೃದ್ಧಿಯನ್ನು ಪಡೆದ ನಂತರ ಆಂಧ್ರದಿಂದ ಕರಾವಳಿ ಜಿಲ್ಲೆಗಳಿಂದ ರೈತರು ತಂಡೋಪತಂಡವಾಗಿ ಆಗಮಿಸಿ ಭೂಮಾಲೀಕರಾಗಿ ನೆಲಸಿದರು. ಹೀಗಾಗಿ ತೆಲುಗು ಭಾಷೆಯ ಪ್ರಭಾವ ಬಳ್ಳಾರಿ ಜಿಲ್ಲೆಯ ಬಹುತೇಕ ಪ್ರದೇಶಗಳಲ್ಲಿ ದಟ್ಟವಾಗಿ ಹರಡಿದೆ. ಹೀಗೆ ತೆಲುಗರು ಬಂದು ನೆಲೆಸಿದ ಸ್ಥಳಗಳನ್ನು ಕ್ಯಾಂಪ್ ಎಂದು ಕರೆದರು. ಈ ಕ್ಯಾಂಪ್‌ಗಳು ವ್ಯಕ್ತಿ ಮತ್ತು ದೈವಗಳ ಹೆಸರುಗಳಿಂದ ಗುರುತಿಸಲಾಗಿದೆ.

ಜಿಲ್ಲೆಯ ವಾಯುವ್ಯದಿಂದ ಆಗ್ನೇಯದವರೆಗೂ ಹುಟ್ಟಿರುವ ನದಿಗಳು, ಬೆಟ್ಟಗಳು ಜಿಲ್ಲೆಯನ್ನು ಪೂರ್ವ ಪಶ್ಚಿಮವಾಗಿ ಎರಡು ಮುಖ್ಯ ಭೌಗೋಳಿಕ ವಿಭಾಗಗಳಾಗಿ ವಿಂಗಡಿಸಿದೆ. ಪೂರ್ವಭಾಗ ಬಳ್ಳಾರಿ ಮತ್ತು ಸಿರುಗುಪ್ಪ ತಾಲೂಕುಗಳನ್ನೊಳಗೊಂಡಿದೆ. ಈ ಪ್ರದೇಶದ ಸಮತಟ್ಟಾಗಿದ್ದು ಬಹುತೇಕ ಮರಗಿಡಗಳಿಲ್ಲದ, ಹತ್ತಿ ಬೆಳೆಯುವ ಕಪ್ಪು ಮಣ್ಣಿನ ಬಯಲು, ಅಲ್ಲಲ್ಲಿ ಕಲ್ಲಿನ ಬೆಟ್ಟಗಳು ಕಂಡುಬರುತ್ತವೆ. ಇನ್ನೂ ಪಶ್ಚಿಮದಲ್ಲಿ ಕಪ್ಪುಮಣ್ಣಿನ ಬಯಲುಗಳು ಮತ್ತು ಹೆಚ್ಚಿನ ಭಾಗದಲ್ಲಿ ಮಿಶ್ರಿತ ಮತ್ತು ಕೆಂಪು ಮಣ್ಣಿನ ಪ್ರದೇಶಗಳಿವೆ. ಇಲ್ಲಿ ಹಡಗಲಿಯನ್ನು ಬಿಟ್ಟು ಉಳಿದೆಡೆ ಅಲ್ಲಲ್ಲಿ ಕಾಡು ಮತ್ತು ಬೆಟ್ಟ ಗುಡ್ಡಗಳು ಕಂಡುಬರುತ್ತವೆ.

ಜಿಲ್ಲೆಯಲ್ಲಿ ಹೆಚ್ಚು ಒಣಹವೆ ಇರುತ್ತದೆ. ಮಾರ್ಚ್‌ನಿಂದ ಮೇ ವರೆಗೆ ಬೇಸಿಗೆಯ ತಾಪ ಹೆಚ್ಚು ಜೂನ್‌ನಿಂದ ನವೆಂಬರ್‌ವರೆಗೆ ಮಳೆಯ ಕಾಲ, ಡಿಸೆಂಬರ್‌ನಿಂದ ಫೆಬ್ರವರಿ ವರೆಗೆ ಚಳಿಯಿದ್ದು ತಂಪಾಗಿರುತ್ತದೆ. ಕನಿಷ್ಟ ಉಷ್ಣಾಂಶ ೨೯.೭° ಇದ್ದರೆ ಮಧ್ಯಮ ಕನಿಷ್ಠ ಉಷ್ಣಾಂಶ ೧೬.೭° ಸೆ. ಇದ್ದು ಗರಿಷ್ಠ ಉಷ್ಣಾಂಶ ೩೦.೨° ನಿಂದ ೪.೧೫° ಸೆ ವರೆಗೂ ಇರುತ್ತದೆ. ಜಿಲ್ಲೆಯ ಮಾಸಿಕ ಸರಾಸರಿ ಮಳೆ ೫೧೮ ಮಿ.ಮೀ. ಜಿಲ್ಲೆಯ ಒಟ್ಟು ವಿಸ್ತೀರ್ಣದ ಅರ್ಧದಷ್ಟು ಭಾಗವನ್ನು ವ್ಯವಸಾಯಕ್ಕೆ ಬಳಸಿಕೊಳ್ಳಲಾಗಿದೆ. ಇದರಲ್ಲಿ ಆಹಾರ ಬೆಳೆ ಬೆಳೆಯುವ ಪ್ರದೇಶ ೩.೮೦.೪೭೮

ಹೆಕ್ಟೇರ್‌ಗಳು. ಆಹಾರೇತರ ಬೆಳೆಗಳ ಪ್ರದೇಶ ೨.೪೦ ಹೆಕ್ಟೇರುಗಳು ಭತ್ತ, ಜೋಳ, ರಾಗಿ, ಸಾಸಿವೆ, ದ್ವಿದಳ ಧಾನ್ಯಗಳಾದ ಕಬ್ಬು, ತೆಂಗು, ಕಡಲೆಕಾಯಿ, ಹತ್ತಿ, ಬಾಳೆ, ಮುಸುಕಿನ ಜೋಳ, ನಿಂಬೆ, ಮಾವು, ಮೆಣಸಿನಕಾಯಿ, ಈರುಳ್ಳಿ, ಟೊಮೊಟೋ, ಬದನೆ, ಸವತೆಕಾಯಿ, ತೊಗರಿ ಬೆಳೆಯಾಗುತ್ತದೆ. ಹೀಗೆ ವಿಸ್ತಾರತೆಯನ್ನು ಹೊಂದಿರುವ ಬಳ್ಳಾರಿಯು ಕೆರೆ, ಕುಂಟೆ, ಕಾಲುವೆ, ಹಳ್ಳ ಮುಂತಾದ ಜಲಮೂಲಗಳಿದ್ದು, ಕೋಟೆ ಕೊತ್ತಲಗಳಿಂದಲೂ ಕೂಡಿದ ಊರುಗಳ ಹೆಸರುಗಳು ಇವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯು ಐತಿಹಾಸಿಕ ಮಹತ್ವವನ್ನು ಸಹ ಪಡೆದುಕೊಂಡಿದೆ.

### ೫.೨. ಚಾರಿತ್ರಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆ ಸಮೃದ್ಧ ಇತಿಹಾಸವನ್ನು ಒಳಗೊಂಡಿರುವ ಅಪರೂಪದ ಜಿಲ್ಲೆಗಳಲ್ಲಿ ಒಂದಾಗಿದೆ. ಇತಿಹಾಸವೆಂದಾಕ್ಷಣ ಚಕ್ರವರ್ತಿಗಳು, ರಾಜಮಹಾರಾಜರುಗಳು ಸಾಮಂತ ಅರಸರು, ದಂಡನಾಯಕರು, ನಾಯಕ ಮಣಿಗಳು, ಮಂಡಲಾಧೀಶ್ವರರು, ಪಾಳೆಯ ಪಟ್ಟುಗಳ ಒಡೆಯರಾದ ಪಾಳೆಯಗಾರರು, ಅಗ್ರೇಸರರು ಅಧೀನ ಅರಸರುಗಳು, ಕೋಟೆ ಕೊತ್ತಲುಗಳು, ಶೌರ್ಯ ಸಾಹಸಿಗಳು, ದಾನ ಬಲಿದಾನ, ದತ್ತಿ ಇವೇ ಮೊದಲಾದವು ಕಣ್ಮುಂದೆ ಸುಳಿಯುತ್ತವೆ. ಬಳ್ಳಾರಿಯು ಪ್ರಾಗೈತಿಹಾಸಿಕ ಕಾಲದಿಂದಲೂ ಗುರುತಿಸಲಾಗುತ್ತಿದೆಯಾದರೂ ಅದರ ಸಾಂಸ್ಕೃತಿಕ ಪಲ್ಲಟ, ಗಮನಾರ್ಹ ಚಹರೆ ಹಾಗೂ ಸ್ಥಿತ್ಯಂತರಗಳನ್ನು ಅನುಲಕ್ಷಿಸಿ ವಿಜಯನಗರದ ಚರಿತ್ರೆ ಮತ್ತು ವಿಜಯನಗರ ಪೂರ್ವದ ಚರಿತ್ರೆಯಿಂದ ಈ ಪರಂಪರೆಯನ್ನು ಕಲ್ಪಿಸಬಹುದಾಗಿದೆ. 'ಕಂಪ್ಲಿ'ಯ ಸಂಸ್ಥಾನದ ಚರಿತ್ರೆಯು ಬಳ್ಳಾರಿಯ ಚಹರೆಯನ್ನು ಪಾಳೆಗಾರಿಕೆ ನೆಲೆಯಿಂದ ಆರಂಭಿಸುತ್ತದೆ. ಇದರ ವಿಸ್ತೃತ ಸಾಮ್ರಾಜ್ಯಶಾಹಿ ನೆಲೆ ವಿಜಯನಗರ ಅನಾವರಣಗೊಳ್ಳುತ್ತದೆ.

ಕಂಪಿಲರಾಯ ಮತ್ತು ಕುಮಾರರಾಮರ ಸಾಂಸ್ಕೃತಿಕ ಭಿತ್ತಿಯ ಚರಿತ್ರೆಯಿಂದಾಚೆ ಐತಿಹ್ಯ-ಪುರಾಣ-ಸಾಹಿತ್ಯ ವಲಯಗಳಿಗೂ ಚಾಚಿಕೊಂಡಿದೆ. ವಿಜಯನಗರದ ಕಥನವು ಚರಿತ್ರೆಯಲ್ಲಿ ಮಾತ್ರವಲ್ಲದೆ ಆಧುನಿಕ ಭಾರತದ ಸ್ವಾತಂತ್ರ್ಯ ಸಂದರ್ಭದ ರಾಷ್ಟ್ರೀಯ ಹೋರಾಟಕ್ಕೂ ಭೂಮಿಕೆಯನ್ನು ಒದಗಿಸಿದೆ. ವಿಜಯನಗರದ ಅರಸರು ಶೈವ, ಮತ್ತು ವೈಷ್ಣವ ಮುಂತಾಗಿ ಬಹು ಧಾರ್ಮಿಕ ಸಂಸ್ಕೃತಿಯ ಅಭಿವ್ಯಕ್ತಿರೂಪಗಳಾಗಿ ದೇವಾಲಯ ವಾಸ್ತುಶಿಲ್ಪವನ್ನು ಬೆಳೆಸಿದರು. ಇಂಥದೇ ಬಹು ಸಂಸ್ಕೃತಿಗಳ ಸಾಹಿತ್ಯ, ಧಾರ್ಮಿಕ ಉತ್ಸವ ಆಚರಣಾದಿಗಳನ್ನು ಅಸ್ತಿತ್ವದಲ್ಲಿ ತಂದರು. ಇಲ್ಲಿ ಮುತ್ತು-ರತ್ನಗಳ ಸಂಪತ್ತು, ವಾಸ್ತುಶಿಲ್ಪದ ವೈಖರಿಗಳು ಅವಶೇಷಗಳಾಗಿ ಉಳಿದಿದೆಯಷ್ಟೇ ಅಲ್ಲ ಅಂತರಾಷ್ಟ್ರೀಯ ಯುನೆಸ್ಕೋ ಮನ್ನಣೆಯನ್ನು ಪಡೆದು ಜಾಗತಿಕ ಪಟ್ಟಿಯಲ್ಲುಳಿದಿದೆ. ಮತ್ತು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಜಿಲ್ಲೆಯ ಅನೇಕ ರಾಷ್ಟ್ರಪ್ರೇಮಿಗಳು ಭಾಗವಹಿಸಿ ಸೆರೆವಾಸ ಅನುಭವಿಸಿದ್ದಾರೆ. ಈ ರೀತಿಯಾಗಿ ಭಾರತದ ಇತಿಹಾಸದಲ್ಲಿ ಬಳ್ಳಾರಿಯ ಚಾರಿತ್ರಿಕತೆಯನ್ನು ನೋಡಬಹುದಾಗಿದೆ.

## ೫.೩. ಸಾಂಸ್ಕೃತಿಕ ಹಿನ್ನೆಲೆ

ಸಾಂಸ್ಕೃತಿಕ ಪರಂಪರೆಯ ನೆಲೆಯಲ್ಲಿ ಬಳ್ಳಾರಿ ಜಿಲ್ಲೆಯನ್ನು ನೋಡುವುದು ತುಂಬಾ ಸಂಕೀರ್ಣವಾದದ್ದು. ಏಕೆಂದರೆ ಬಳ್ಳಾರಿಯು ಭೌಗೋಳಿಕ, ನೈಸರ್ಗಿಕ ಸ್ವರೂಪದಿಂದ ಹಾಗೂ ಸಾಂಸ್ಕೃತಿಕ ಪರಂಪರೆಯ ದೃಷ್ಟಿಯಿಂದ ಎಷ್ಟೊಂದು ವೈವಿಧ್ಯತೆಯನ್ನು ಹೊಂದಿದೆಯೋ ಅಷ್ಟೇ ಆಧುನಿಕವಾದ ಸ್ಥಿತ್ಯಂತರಗಳಿಗೂ ಒಳಗಾಗುತ್ತ ಬಂದಿದೆ. ಪ್ರಾಕೃತಿಕ ಸಂಪತ್ತು, ಚಾರಿತ್ರಿಕ ಸ್ವರೂಪ, ದ್ವಿಭಾಷಿಕ ಪರಿಸರ, ಆಧುನಿಕವಾದ ಆಣೆಕಟ್ಟು, ಬೃಹತ್ ಕಾರ್ಖಾನೆಗಳ ಪೈಪೋಟಿ, ಗಣಿಗಾರಿಕೆ ಹಾಗೂ ಜಾನಪದ, ದೇಶಿ ಪರಂಪರೆ ಹೀಗೆ ಹಲವು ನಿಟ್ಟಿನಲ್ಲಿ ಬಳ್ಳಾರಿಯನ್ನು ನೋಡಬಹುದು.

ಬಳ್ಳಾರಿ ಜಿಲ್ಲೆಯಲ್ಲಿ ಬಳ್ಳಾರಿ, ಸಿರುಗುಪ್ಪ, ಸಂಡೂರು, ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ ತಾಲೂಕುಗಳು ತಮ್ಮದೇ ಆದ ವಿಶಿಷ್ಟ ಸಾಂಸ್ಕೃತಿಕ ಚಹರೆಗಳಿಗೆ ಪ್ರಸಿದ್ಧಿ ಪಡೆದಿವೆ. ಪ್ರಾಕೃತಿಕ ಸಂಪತ್ತಿನಲ್ಲಿ ಬಳ್ಳಾರಿಯ ಬೆಟ್ಟಗಳಿಗೆ ಸಿಂಹಪಾಲು ಸಂದಿದೆ. ಬಳ್ಳಾರಿ ತಾಲೂಕಿನಲ್ಲಿ ಹಳೆ ಶಿಲಾಯುಗದ ನೆಲೆಗಳಾದ ಸಂಗನಕಲ್ಲು, ಬೂದಿಹಾಳು, ಉದೆಗೂಳಂ ಗ್ರಾಮಗಳಿದ್ದು, ಐತಿಹಾಸಿಕ ಪ್ರಸಿದ್ಧ ಏಕಶಿಲಾಬೆಟ್ಟದ ಮೇಲೆ ಭದ್ರ ಹಾಗೂ ಮನೋಹರ ಕೋಟೆಯಿದೆ. ಮಲ್ಲೇಶ್ವರ ದೇವಸ್ಥಾನ–ನಗರೇಶ್ವರ ದೇವಸ್ಥಾನ ಸೇರಿದಂತೆ ಹಲವಾರು ಗ್ರಾಮಗಳಲ್ಲಿ ಚೆಳ್ಳಗುರ್ಕಿ ಯರ್‍ರಿತಾತ, ಕುರುಗೋಡು ದೊಡ್ಡ ಬಸವೇಶ್ವರ ಸೇರಿ ಹಲವು ಪ್ರಾಚೀನ ದೇವಾಲಯಗಳು, ಶಾಸನಗಳು ದೊರೆತಿವೆ. ಹಾಗೂ ಬಳಹರಿ ದೇವತೆಯೆಂದೆನಿಸಿದ ದುರ್ಗಮ್ಮನ ಪ್ರಸಿದ್ಧ ಮಂದಿರವಿದೆ. ಹಾಗೆ ಸಾಹಿತ್ಯಿಕ ಚಟುವಟಿಕೆಯನ್ನು ಮುದ್ರಣದ ಮೂಲಕ ಮೊಟ್ಟಮೊದಲು ಆರಂಭಿಸಿದ ಮಿಶನರಿಗಳ ಚರ್ಚ್ ಇಲ್ಲಿದೆ. ಸಿರುಗುಪ್ಪ ತಾಲೂಕು ಅಲ್ಲಿ ತೆಕ್ಕಲಕೋಟೆಯು ಪ್ರಾಚೀನ ಶಿಲಾಯುಗದ ನೆಲೆಯಾಗಿದ್ದು, ಕೋಟೆ ಕೊತ್ತಲಗಳು, ಪ್ರಾಚೀನ ದೇವಾಲಯಗಳು ಇಲ್ಲಿವೆ. ನಿಟ್ಟೂರು ಮೌರ್ಯರ ಇತಿಹಾಸವನ್ನು ಹೇಳುವ ಗ್ರಾಮ ಕೆಂಚನಗುಡ್ಡ–ಹಳೇಕೋಟೆಗಳು ದೇವಾಲಯಗಳಿಂದ ಮಹತ್ವ ಪಡೆದಿವೆ. ಸಿರುಗುಪ್ಪ ಶಂಭುಲಿಂಗ ದೇವಸ್ಥಾನ, ವರುವಿನ ಮಲ್ಲಯ್ಯ ದೇವಸ್ಥಾನಗಳು ಪ್ರಾಚೀನ ಪರಂಪರೆಯನ್ನು ಇಲ್ಲಿ ದೊರೆಯುವ ಅನೇಕ ಶಾಸನಗಳು ಸಾಂಸ್ಕೃತಿಕ ಚಟುವಟಿಕೆಯನ್ನು ಪ್ರತಿನಿಧಿಸುತ್ತವೆ.

ಹೊಸಪೇಟೆ ತಾಲೂಕಿನಲ್ಲಿ ಇತಿಹಾಸ ಪ್ರಸಿದ್ಧಿ ಮತ್ತು ವಿಶ್ವ ಪರಂಪರೆಯ ತಾಣವಾದ ಹಂಪೆಯ ಸುತ್ತ ಮುತ್ತಲಿನ ಬೃಹದಾಕಾರದ ಬಂಡೆಗಳು, ಬೆಟ್ಟಗಳು ತುಂಗಭದ್ರಾ ನದಿಯ ಇಕ್ಕೆಲಗಳಲ್ಲಿ ಕಂಗೊಳಿಸುವ ಸಂಪತ್ತಾಗಿದೆ. ಬೆಟ್ಟ ಪ್ರದೇಶಗಳ ಗಿರಿ ಕಂದರಗಳಲ್ಲಿ ವಾಸಿಸುವ ಪ್ರಾಣಿ ಸಂಪತ್ತು, ಸಂರಕ್ಷಿತ ದರೋಜಿ ಕರಡಿ ಧಾಮ ಇದೆ. ಇದು ಜೈವಿಕ ಸಂಪತ್ತಿನ ಭಾಗವಾಗಿದೆ. ಮತ್ತು ತುಂಗಭದ್ರ ಕಟ್ಟಡ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಮತ್ತು ವಿರೂಪಾಕ್ಷೇಶ್ವರ, ಅನಂತಶಯನ, ವಡಕರಾಯ, ಕಣಿವೆ ವೀರಭದ್ರ, ವಿಜಯ ವಿಠಲ, ಜಂಬುನಾಥೇಶ್ವರ ಮುಂತಾದ ದೇವಾಲಯಗಳು, ಶಾಸನಗಳು ಸಾಂಸ್ಕೃತಿಕತೆಯನ್ನು ತಿಳಿಸುತ್ತವೆ.

ಕರ್ನಾಟಕದ ಕಾಶ್ಮೀರವೆಂದೂ ಮಹಾತ್ಮಗಾಂಧಿಯಿಂದ ಹೊಗಳಿಸಿಕೊಂಡಿರುವ ಮತ್ತು

ಗಣಿಗಾರಿಕೆಯಿಂದಲೇ ಹೇರಳವಾಗಿ ಹೆಸರುವಾಸಿಯಾದ ಸಂಡೂರು ತಾಲೂಕಿನಲ್ಲಿ ಮ್ಯಾಂಗನೀಸ್ ಕಬ್ಬಿಣ ಅದಿರು ನಿಕ್ಷೇಪಗಳ ಉದ್ಯಮವು ರಾಜ್ಯ-ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಹಾಗೂ ಕುಮಾರಸ್ವಾಮಿ, ಗಂಡಿನರಸಿಂಹ, ರಾಮನಮಲೈ, ಗಂಡಿಮಲಿಯಮ್ಮ, ಬೊಮ್ಮಗಟ್ಟ ಹುಲಿಕುಂಟೇಶ್ವರ ದೇವರುಗಳ ದೇವಾಲಯಗಳಿವೆ. ಮತ್ತು ಸಂಡೂರು ಪ್ರದೇಶವನ್ನು ಸಂಡೂರು ಪಾಳೆಯಗಾರರು, ಘೋರ್ಪಡೆ ವಂಶಜರು ಆಳ್ವಿಕೆಯನ್ನು ಮಾಡಿದ್ದಾರೆ. ಕೂಡ್ಲಿಗಿ ತಾಲೂಕು ಬಳ್ಳಾರಿಯಿಂದ ೮೦ ಕಿ.ಮೀ. ದೂರದಲ್ಲಿದ್ದು ಬಯಲು ಪ್ರದೇಶವಾಗಿದ್ದು ಹೆಚ್ಚು ಮಳೆಯನ್ನೇ ಆಶ್ರಯಿಸಿದ ಭೂ ಪ್ರದೇಶವನ್ನು ಹೊಂದಿದೆ. ಚಾರಿತ್ರಿಕವಾಗಿ ಗುಡೇಕೋಟೆ ಪಾಳೆಗಾರರು, ಜರಿಮಲೆ ಪಾಳೆಗಾರರು, ರಾಂಪುರ ಪಾಳೆಗಾರರ ಆಳ್ವಿಕೆಯನ್ನು ನೋಡಬಹುದು. ಮತ್ತು ಇತಿಹಾಸ ಪ್ರಸಿದ್ಧಿಯನ್ನು ಪಡೆದ ಕೊಟ್ಟೂರೇಶ್ವರ ದೇವಾಲಯ, ಉಜ್ಜಿನಿ ಪೀಠ, ಬೆನ್ನಳ್ಳಿ ದುರುಗಮ್ಮ, ಮರಬದ ಈರಣ್ಣ, ಶಿರಬಿ ಮೂಗಬಸವೇಶ್ವರ ದೇವಸ್ಥಾನಗಳು ಈ ತಾಲೂಕಿನ ಜನರ ಆರಾಧ್ಯ ದೈವಗಳು ಆಗಿವೆ. ಇತ್ತೀಚಿಗೆ ಪ್ರಸಿದ್ಧಿಯನ್ನು ಪಡೆದಿರುವ ಗಾಣಗಟ್ಟೆ ಮಾಯಮ್ಮ ಬಹಳ ಪ್ರಸಿದ್ಧಿಯನ್ನು ಪಡೆದ ದೇವತೆಯಾಗಿದ್ದಾಳೆ. ಹಾಗೂ ಗುಡೇಕೋಟೆ ಜರಿಮಲೆ, ಉಜ್ಜನಿ, ಕೊಟ್ಟೂರು ಪ್ರದೇಶಗಳಲ್ಲಿ ಪ್ರಾಚೀನ ಅವಶೇಷಗಳು ದೊರೆಯುತ್ತವೆ.

ಹಗರಿಬೊಮ್ಮಹಳ್ಳಿ ತಾಲೂಕು ಐತಿಹಾಸಿಕವಾಗಿ ಅಷ್ಟೊಂದು ಪ್ರಸಿದ್ಧಿಯನ್ನು ಪಡೆಯದಿದ್ದರು ವಿಜಯನಗರ ರಾಜಧಾನಿ ಖ್ಯಾತಿವೆತ್ತ, ಹಂಪೆಯ ಹಂಪಮ್ಮ-ಪಂಪಾಪತಿಯಿಂದ ಪ್ರಸಿದ್ಧಿಯನ್ನು ಪಡೆದ ಅನೇಕ ಊರುಗಳು ದೊರೆಯುತ್ತವೆ. ವಿಶೇಷವಾಗಿ ತುಂಗಭದ್ರ ಜಲಾಶಯದ ಹಿನ್ನೀರಿಗೆ ಹೊಂದಿಕೊಂಡಿರುವ ಬೊಮ್ಮನಹಳ್ಳಿಯ ಹಂಪಸಾಗರ, ಹಂಪಾಪಟ್ಟಣ, ತಂಬ್ರಹಳ್ಳಿ, ಕೋಗಳಿ ಊರುಗಳನ್ನು ಹೊಂದಿದ್ದು ಬಯಲು ಪ್ರದೇಶವಾಗಿದೆ. ಬಳ್ಳಾರಿ ಜಿಲ್ಲೆಯ ಕೇಂದ್ರದಿಂದ ಸುಮಾರು ೮೦ ರಿಂದ ೧೦೦ ಕಿ.ಮೀ. ದೂರದಲ್ಲಿಯ ಹೂವಿನ ಹಡಗಲಿ ತಾಲೂಕು ಒಂದನ್ನು ಬಿಟ್ಟು ಬಳ್ಳಾರಿ ಜಿಲ್ಲೆಯ ಉಳಿದೆಡೆ ಅಲ್ಲಲ್ಲಿ ಕಾಡು, ಬೆಟ್ಟ, ಗುಡ್ಡಗಳು ಕಂಡುಬರುತ್ತದೆ. ಈ ತಾಲೂಕು ಹೂಗಳಿಗೆ ಪ್ರಸಿದ್ಧಿಯನ್ನು ಪಡೆದಿದೆ. ಇದು ತುಂಗಭದ್ರ ಜಲಾಶಯದ ಹಿನ್ನೀರನ್ನು ಬಳಸಿಕೊಳ್ಳುತ್ತದೆ. ಇಲ್ಲಿ ಕೊಟ್ನಿಕಲ್, ಚಿಮ್ನಿಹಳ್ಳಿ, ಮಾನ್ಯರ ಮಸಲ್ವಾಡ, ಮಾಗಳ, ಮೊದಲಘಟ, ಮೈಲಾರ, ಸೋಗಿ, ಮೋರಿಗೆರೆ, ಮುತ್ತಿಗಿ, ಲಿಂಗನಾಯಕನಹಳ್ಳಿ, ಇತಿಹಾಸ ಪ್ರಸಿದ್ಧ ಊರುಗಳಾಗಿವೆ. ಇಲ್ಲಿ ಕೋಟೆ ಶಂಕರಲಿಂಗ ದೇವರು, ಆಂಜಿನೇಯ, ರಂಗಾಪುರ ನರಸಿಂಹಸ್ವಾಮಿ, ಮೈಲಾರಲಿಂಗಸ್ವಾಮಿ ಮೊದಲಾದ ದೇವಸ್ಥಾನಗಳು ಕಾಣಬಹುದು. ಮತ್ತು ಚಾಲುಕ್ಯರ ಒಂದನೇ ಸೋಮೇಶ್ವರನ ಕಾಲದ ಶಾಸನ (ಕ್ರಿ.ಶ. ೧೦೪೫), ಮಾಗಳದ ರಂಗಾಪುರ ನರಸಿಂಹಸ್ವಾಮಿ ಗುಡಿಯ ಶಾಸನ (ಕ್ರಿ.ಶ. ೧೦೫೭), ಮಸಲ್ವಾಡ ಶಾಸನ (ಕ್ರಿ.ಶ. ೯೧೩), ಕ್ರಿ.ಶ. ೯೨೨ರ ಕೋಗಳಿ ಶಾಸನದಲ್ಲಿ ಕೋಗಳಿ ೫೦೦, ಮಾಸಿವಾಡಿ-೧೪೦, ಚಾಲುಕ್ಯರ ಜಗದೇಕ ಮಲ್ಲದೇವ (ಜಯಸಿಂಹ-೨)ನ ಶಾಸನ (ಕ್ರಿ.ಶ. ೧೦೨೫) ಮುಂತಾದವುಗಳನ್ನು ಚಾರಿತ್ರಿಕವಾಗಿ ಹೂವಿನಹಡಗಲಿ ಮತ್ತು ಸುತ್ತಮುತ್ತಲಿನ ಊರುಗಳನ್ನು ನೋಡಲು ಸಾಧ್ಯವಾಗುತ್ತದೆ.

ಹೀಗೆ ಈ ಏಳು ತಾಲೂಕುಗಳಲ್ಲಿ ದೊರೆಯುವ ಪ್ರಾಚೀನ ಅವಶೇಷಗಳು, ಶಿಲಾಯುಗದ ನೆಲೆಗಳು, ದೇವಾಲಯಗಳು, ಶಾಸನಗಳು, ಬೆಟ್ಟಗಳು, ಕೋಟೆಗಳು ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ವೈಭವವನ್ನು ಸಾರುತ್ತವೆ. ಅಷ್ಟಲ್ಲದೆ ಈ ಜಿಲ್ಲೆಯ ತಾಲೂಕುಗಳಲ್ಲಿ ವಾಸಿಸುವ ವಿವಿಧ ಜಾತಿ, ಸಮುದಾಯದವರು ತಮ್ಮ ತಮ್ಮ ಸಂಪ್ರದಾಯ-ಪರಂಪರೆಯ ಅನುಗುಣವಾಗಿ ಹಬ್ಬ-ಹರಿದಿನ ಜಾತ್ರೆ, ಪರಿಶೆ ಇತ್ಯಾದಿಗಳನ್ನು ಅತ್ಯಂತ ವೈಭವದಿಂದ ಆಚರಿಸುತ್ತಾರೆ. ಈ ಎಲ್ಲವೂ ಬೃಹತ್ ಗುಡ್ಡಬೆಟ್ಟಗಳು ಮತ್ತು ಬಯಲು ನಾಡುಗಳನ್ನು ಹೊಂದಿದ ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಹೆಗ್ಗುರುತುಗಳಾಗಿ ಕಂಡುಬರುತ್ತವೆ.

**೫.೪. ಭಾಷಿಕ ಹಿನ್ನೆಲೆ**

ಬಳ್ಳಾರಿಯನ್ನು ಭಾಷಿಕ ನೆಲೆಯಿಂದ ನೋಡಿದರೆ, ಪ್ರಾಚೀನ ಕಾಲದಿಂದಲೂ ಬಹುಭಾಷಿಕ ಪರಂಪರೆಯಾಗಿ ಬೆಳೆದು ನಿಂತಿರುವುದನ್ನು ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಬಹುಭಾಷಾ ಪಂಡಿತರೇ ಸಾಕ್ಷಿಗಳಾಗಿದ್ದಾರೆ. ಬಳ್ಳಾರಿ, ಸಿರುಗುಪ್ಪ, ಸಂಡೂರು, ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ ಪ್ರದೇಶಗಳಲ್ಲಿ ಬಹುಮುಖ್ಯವಾದ ಭಾಷೆ ಕನ್ನಡ ಆಗಿದೆ. ಆದರೆ ಸಿರುಗುಪ್ಪ, ಬಳ್ಳಾರಿ ಪ್ರದೇಶಗಳಲ್ಲಿ ಎರಡನೇ ಮುಖ್ಯ ಭಾಷೆ ತೆಲುಗು ಆಗಿದೆ. ಸಂಡೂರು, ಕೂಡ್ಲಿಗಿ ಕೆಲ ಪ್ರದೇಶಗಳಲ್ಲಿ ಕಂದೆಲುಗು ಬಹುತೇಕರ ಮನೆಮಾತು ಆಗಿದ್ದು, ವ್ಯವಹಾರಿಕ ಸಂದರ್ಭದಲ್ಲಿ ಕನ್ನಡವನ್ನೆ ಬಳಸುತ್ತಾರೆ. ಇಲ್ಲಿ ಸಿರುಗುಪ್ಪ, ಬಳ್ಳಾರಿ ಪರಿಸರಗಳಲ್ಲಿ ಬಹುತೇಕ ಕನ್ನಡ ಮಾತೃಭಾಷಿಕರು ವ್ಯಾಪಾರ, ವಾಣಿಜ್ಯ, ತೆಲುಗು ಭಾಷೆಯ ಸಿನಿಮಾ, ದೂರದರ್ಶಗಳಲ್ಲಿ ತೆಲುಗು ವ್ಯಾಮೋಹಿತರನ್ನು ಕಾಣಬಹುದಾಗಿದೆ. ಆದರೆ ಹೊಸಪೇಟೆ, ಕೂಡ್ಲಿಗಿ, ಸಂಡೂರು, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ ಅಂತಹ ತಾಲೂಕುಗಳಲ್ಲಿ ಆಧುನಿಕರಣದ ಪ್ರಭಾವದಿಂದಾಗಿ ತೆಲುಗು ಭಾಷಿಕರು, ತಮಿಳು ಭಾಷಿಕರನ್ನು ನೋಡಬಹುದಾಗಿದೆ. ಹೀಗಾಗಿ ಬಳ್ಳಾರಿಯು ಒಂದು ಬಹುಭಾಷಿಕ ಪರಿಸರವಾಗಿದೆ. ತೆಲುಗು-ಕನ್ನಡಗಳ ದ್ವಿಭಾಷಾ ಪರಿಸರವು ಇಲ್ಲಿನ ಜನ ಸಮುದಾಯಗಳ ದೈನಿಕ ಪರಿಸರದಲ್ಲಿ ಬೆರೆತು ಹೋಗಿದೆ. ಆಧುನಿಕ ವಿದ್ಯಮಾನಗಳ ಸಂದರ್ಭದ ಹಿನ್ನೆಲೆಯಿಂದ ತುಂಗಭದ್ರ ಆಣೆಕಟ್ಟಿನ ಕೆಲಸ ಕಾರ್ಯಗಳು ಜೊತೆಗೆ ತಮಿಳು ಭಾಷಿಕರು, ನೀರಾವರಿ ಉತ್ಪನ್ನದ ಜೊತೆಗೆ ವಲಸಿಗರಾಗಿ ಬಂದ ಆಂಧ್ರದ ಭೂಮಾಲೀಕರು, ಪ್ರವಾಸಿ ತಾಣವಾದ ಹಂಪಿಯ ಕಾರಣಕ್ಕಾಗಿ ಬರುವ ವಿದೇಶಿ ಆಂಗ್ಲ ಭಾಷಿಕರು ಇಲ್ಲಿನ ಬಹುಭಾಷಾ ಸಂಸ್ಕೃತಿಯ ಭಾಗವಾಗಿ ಹೋಗಿದ್ದಾರೆ. ಹಂಪಿಯ ಹೋಟೆಲ್ ಮಾಣಿಯು ಕೂಡ ಇಂಗ್ಲಿಶ್ ಭಾಷೆಯನ್ನು ಸಹಜವಾಗಿ ವ್ಯವಹರಿಸಬಲ್ಲನಾದ್ದರಿಂದ, ಭಾಷಿಕವಾದ ಅನೇಕ ಸಂಕೀರ್ಣತೆಗಳು ಮೂಡಿವೆ. ಹೀಗಾಗಿ ಸ್ಟ್ಯಾಂಡರ್ಡ್ ಕನ್ನಡ, ಗ್ರಾಮೀಣ ಪ್ರದೇಶದ ಆಡುನುಡಿ ಕನ್ನಡ, ತೆಲುಗು, ತಮಿಳು, ಇಂಗ್ಲಿಶ್ ಮಿಶ್ರಿತ ಕನ್ನಡ ಇಂತಹ ಹಲವು ರೀತಿಯ ಬಹುಭಾಷಿಕ ಸ್ವರೂಪವು ಬಳ್ಳಾರಿ ಪರಿಸರದಲ್ಲಿ ಕಂಡುಬರುತ್ತದೆ.

## ೫.೫. ಸಾಮಾಜಿಕ ದೃಷ್ಟಿಕೋನ: ಸಮುದಾಯಗಳ ಹಿನ್ನೆಲೆಯಲ್ಲಿ

### ೫.೫.೧. ಗೊಲ್ಲರು

ಕರ್ನಾಟಕದ ಬುಡಕಟ್ಟು ಸಮುದಾಯದಲ್ಲಿ ಒಂದಾದ ಗೊಲ್ಲರಲ್ಲಿ, ಕಾಡುಗೊಲ್ಲರು ಮತ್ತು ಊರುಗೊಲ್ಲರೆಂಬ ಪಂಗಡಗಳಿವೆ. ಆರಂಭದಲ್ಲಿ ಕಾಡಿನಲ್ಲಿ ವಾಸಿಸುತ್ತಿದ್ದ ಸಮುದಾಯಕ್ಕೆ ಕಾಡುಗೊಲ್ಲರೆಂದು ಕರೆಯುತ್ತಾರೆ. ಪುರಾಣ ಮತ್ತು ಪ್ರಾಚೀನ ಕಾವ್ಯಗಳಲ್ಲಿ ಇವರ ಉಲ್ಲೇಖ ಕಂಡುಬರುತ್ತದೆ. ಈ ಸಮುದಾಯದ ಮುಖ್ಯ ವೃತ್ತಿ ಪಶುಪಾಲನೆ. ಉತ್ತರ ಭಾರತದಲ್ಲಿ ಇವರನ್ನು 'ಯಾದವ'ರೆಂದು ಗುರುತಿಸುತ್ತಾರೆ. ಅಲ್ಲಿನ ಹೆಸರುಗಳ ಉತ್ತರ ಭಾಗದಲ್ಲಿ 'ಯಾದವ್' ಎಂಬ ಜಾತಿವಾಚಿಯನ್ನು ನಾವು ನೋಡಬಹುದು. ಉದಾಹರಣೆಗೆ ರಾಜಕೀಯದಲ್ಲಿ ತನ್ನದೇಯಾದಂತಹ ಛಾಪು ಮೂಡಿಸಿದ ಬಿಹಾರದ 'ಲಾಲು ಪ್ರಸಾದ್‌ಯಾದವ್'ರ ಹೆಸರನ್ನು ಗಮನಿಸಬಹುದು.

ಮಹಾಭಾರತ ಕಾವ್ಯದಲ್ಲಿ ಶ್ರೀಕೃಷ್ಣನು ಗೋವುಗಳನ್ನು ಕಾಯುವವನಾಗಿ ಗೋಪಾಲಕನೆಂದು ಹೆಸರು ಪಡೆದಿದ್ದಾನೆ. ಇಂದಿಗೂ ಭಾರತದಲ್ಲಿ ವಾಸಿಸುವ ಗೊಲ್ಲ ಸಮುದಾಯವು ಶ್ರೀಕೃಷ್ಣನನ್ನು ತಮ್ಮ ಮೂಲ ಪುರುಷನೆಂದು ಗುರುತಿಸಿಕೊಳ್ಳುತ್ತಾರೆ. ಇವರು ವೈಷ್ಣವ ಮತಾವಲಂಬಿಗಳು, ಹಿಂದೆ ಗುಡ್ಡಗಾಡು ಪ್ರದೇಶದಲ್ಲಿ ತಮ್ಮ ನೆಲೆಗಳನ್ನು ಕಟ್ಟಿಕೊಂಡು ಪಶುಪಾಲನೆಯನ್ನು ಮಾಡಿ ಜೀವಿಸುತ್ತಿದ್ದ ಈ ಜನರೇ ಗೋವಳಿಗರು. ಇವರು ಅಲ್ಲಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು. ಇವರನ್ನು ಹಟ್ಟಿಕಾರರೆಂದು ಕರೆಯಲಾಗುತ್ತದೆ. ಅಂತೆಯೇ ಬಳ್ಳಾರಿ ಪರಿಸರದಲ್ಲಿ ಅನೇಕ ಗೊಲ್ಲರಹಟ್ಟಿಗಳು ಮತ್ತು ಗೊಲ್ಲರಹಳ್ಳಿಗಳಿರುವುದನ್ನು ನಾವು ಗಮನಿಸಬಹುದು. ಮೇಲೆ ತಿಳಿಸಿದ ಈ ಗೋವಳಿಗರೇ ಕಂನಾಡಿನ ಮೂಲನಿವಾಸಿಗಳೆಂದು ಶಂಬಾಜೋಶಿಯವರು ತಮ್ಮ ಸಾಂಸ್ಕೃತಿಕ ಶೋಧನೆಯಲ್ಲಿ ಗುರುತಿಸಿರುತ್ತಾರೆ. ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುವಲ್ಲಿ ಇವರು ನಾಡನ್ನು ಕಟ್ಟಿಕೊಂಡರು. ಆ ಮೂಲಕ ಕಾಡಿನಿಂದ ನಾಡಿಗೆ ಬಂದರೆಂದು ಶಂಬಾ ವಾದಿಸುತ್ತಾರೆ.

ಬಳ್ಳಾರಿ ಪರಿಸರದ ಅನೇಕ ಊರುಗಳಲ್ಲಿ ಗೊಲ್ಲರ ಸಮುದಾಯಗಳನ್ನು ನೋಡಬಹುದಾಗಿದೆ. ಕೆಲವೊಂದು ಊರುಗಳಲ್ಲಿ ಪ್ರತ್ಯೇಕವಾಗಿ ಆ ಸಮುದಾಯವೇ ವಾಸಿಸುವುದನ್ನು ನೋಡಬಹುದು. ಈ ಸಮುದಾಯವು ಕೃಷ್ಣ, ಆಂಜನೇಯ, ತಿರುಪತಿ ವೆಂಕಟೇಶ್ವರ, ಮೈಲಾರಲಿಂಗ ಮುಂತಾದ ದೇವರುಗಳನ್ನು ಪೂಜೆ ಮಾಡುತ್ತಿದ್ದಾರೆ. ಜೊತೆಗೆ ಪ್ರಾದೇಶಿಕ ದೇವರುಗಳಾದ ಗುದ್ರಿ ಈರಣ್ಣ, ಎತ್ತಯ್ಯ, ಕ್ಯಾತಯ್ಯ, ಚಿತ್ರಲಿಂಗೇಶ್ವರ, ಬೊಮ್ಮಲಿಂಗೇಶ್ವರ, ಕಾಟಲಿಂಗೇಶ್ವರ, ಸಿದ್ದಯ್ಯ, ಕದರಯ್ಯ ದೇವರುಗಳನ್ನು ಪೂಜೆ ಮಾಡುತ್ತಿದ್ದಾರೆ. ಇದರಿಂದ ಸಮುದಾಯದ ದೈವಗಳ ಪ್ರಭಾವವನ್ನು ಇವರ ವ್ಯಕ್ತಿನಾಮಗಳಲ್ಲಿ ಗುರುತಿಸಬಹುದು. ಗೊಲ್ಲ ಸಮುದಾಯದ ಸ್ತ್ರೀಯರ ಹೆಸರುಗಳು ಹೆಚ್ಚಾಗಿ ಮಹಾಭಾರತದ ರುಕ್ಮಿಣಿ, ಸತ್ಯಭಾಮ, ಯಶೋಧ ಮುಂತಾದ ಹೆಸರುಗಳಲ್ಲದೆ ಆಯಾ ಪ್ರಾದೇಶಿಕ ದೇವತೆಗಳಾದ ಚಿತ್ತವ್ವ, ಚಿತ್ತಮ್ಮ ಎಂಬ ಹೆಸರುಗಳೂ ಬಳಕೆಯಲ್ಲಿವೆ.

ಕೆಲವೊಂದು ಹೆಸರುಗಳಲ್ಲಿ 'ಯಾದವ' ಎಂಬ ವಾರ್ಗಿಕವು ಇವರ ವ್ಯಕ್ತಿನಾಮಗಳಲ್ಲಿ ನಿರ್ದೇಶನಗೊಳ್ಳುತ್ತಿರುವುದು ಕಂಡುಬರುತ್ತದೆ. ಇದು ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದಾಗಿ ಪ್ರಭಾವ ಪಡೆದಿರುವೆಂಬುದನ್ನು ಗುರುತಿಸಬಹುದು. ಕನ್ನಡ ನಾಡಿನ ಮೂಲನಿವಾಸಿಗಳೆಂದು, ಇವರನ್ನು ಗುರುತಿಸುವ ಶಂಬಾ ಅವರ ಹೆಸರುಗಳ ಬಗೆಗೆ ವಿವರಿಸುವುದಿಲ್ಲ. ಬದಲಾಗಿ ಗೋವಳಿಗರು, ಗೊಲ್ಲರು, ಪಶುಪಾಲಕರು, ಗೋಪಾಲಕರು, ಹಟ್ಟಿಕಾರರು, ಗೌಡರು ಎಂದು ವೃತ್ತಿಯ ಮೇಲೆ ಗುರುತಿಸುತ್ತಾರೆ. ಇಂದು ಗೊಲ್ಲ ಸಮುದಾಯವು ಬದಲಾಗುತ್ತಿರುವ ಸಮಾಜದಲ್ಲಿ ತಮ್ಮನ್ನು ಮುಖಾಮುಖಿಯಾಗಿಸಿಕೊಂಡಿದೆ. ಬಳ್ಳಾರಿ ಪರಿಸರದ ಗೊಲ್ಲ ಸಮುದಾಯದಲ್ಲಿ ಈ ಕೆಳಗಿನಂತೆ ವ್ಯಕ್ತಿನಾಮಗಳನ್ನು ತಲೆಮಾರುಗಳಲ್ಲಿ ಅಂತರದಲ್ಲಿ ಕೆಲವು ಮಾದರಿಗಳನ್ನು ಗಮನಿಸಬಹುದು.

(ವಯಸ್ಸಿನ ಆಧಾರದ ಮೇಲೆ ತಲೆಮಾರುಗಳನ್ನು ಗುರುತಿಸಿಕೊಳ್ಳಲಾಗಿದೆ. ೬೦ ವರ್ಷದಿಂದ ಮೇಲ್ಪಟ್ಟವರನ್ನು ೧ನೇ ತಲೆಮಾರು, ೩೦ ರಿಂದ ೬೦ ವರ್ಷದವರಗೆ ೨ನೇ ತಲೆಮಾರು ಹಾಗೂ ಹುಟ್ಟಿನಿಂದ ೩೦ ವರ್ಷಗಳವರೆಗಿನ ಹೆಸರುಗಳನ್ನು ೩ನೇ ತಲೆಮಾರಿನವರೆಂದು ಗುರುತಿಸಲಾಗಿದೆ.)

**ಪುರುಷರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ಕ್ಯಾತಪ್ಪ | ಕೃಷ್ಣಮೂರ್ತಿ | ಕೊಟ್ರೇಶ್ |
| ಪುಟ್ಟೆಪ್ಪರ ಬೊಮ್ಮಪ್ಪ | ಕೃಷ್ಣಪ್ಪ | ಮನು |
| ಕುಪ್ಪಿನಕೇರಪ್ಪ | ಕೊಟ್ರಪ್ಪ | ಮರುಳೇಶ |
| ಬಾಲಪ್ಪಜ್ಜ | ಮೂಗಪ್ಪ | ವೀರೇಶ |
| ಈರಪ್ಪ | ಮೈಲಣ್ಣ | ಸಿದ್ದೇಶ |
| ಸಣ್ಣನಾಗಪ್ಪ | ಸಿದ್ದೇಶ್ವರ | ಚಿಕ್ಕಣ್ಣ |
| ಉಜ್ಜಿನಪ್ಪ | ಅನಂದಪ್ಪ | ಸಿದ್ದೇಶ್ವರ |
| ಕೊಟ್ರಜ್ಜ | ಅಂಜಿನಪ್ಪ | ಚಿತ್ರಲಿಂಗೇಶ್ವರ |
| ಮೈಲಾರಪ್ಪ | ಬಾಲಪ್ಪ | ಮರಿನಾಗಪ್ಪ |
| ಮಲ್ಲಯ್ಯ | ಕಾಡಪ್ಪ | ಗೋಪಾಲ |
| ಕೃಷ್ಣಪ್ಪ | ಉತ್ತಪ್ಪ | ಬಾಲೇಶ |
| ತಿಪ್ಪಜ್ಜ | ಬಾಗೂರಪ್ಪ | ಬೊಮ್ಮಣ್ಣ |
| ದೊಡ್ಡಪ್ಪ | ಯರಿಯಪ್ಪ | ದ್ಯಾನ್‌ರಾಜ್ |

| | | |
|---|---|---|
| ಚಿಕ್ಕಬಾಲಪ್ಪ | ರಾಮಪ್ಪ | ನಾಗೇಶ್ |
| ಬೊಮ್ಮಪ್ಪ | ನಾಗಪ್ಪ | ದೊಡ್ಡ ವೀರೇಶ್ |

**ಸ್ತ್ರೀಯರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ಚಿತ್ತವ್ವ | ಕೆಂಚಮ್ಮ | ಗಾಯಿತ್ರಿ |
| ಭೀಮಕ್ಕ | ತಿಮ್ಮಕ್ಕ | ಗೀತಾ |
| ಹನುಮಕ್ಕ | ನುಂಕಮ್ಮ | ರತ್ನಮ್ಮ |
| ಸಿದ್ದಮ್ಮ | ತಿಪ್ಪವ್ವ | ಮಂಜುಳ |
| ತಾಯಮ್ಮ | ಸಿದ್ದಮ್ಮ | ನುಂಕೇಶ್ವರಿ |
| ಬಡಮ್ಮ | ಕರಿಯಮ್ಮ | ಲಕ್ಷ್ಮಿ |
| ಬೊಮ್ಮಮ್ಮ | ಯಮುನಮ್ಮ | ರಾಧ |
| ಬಾಲಮ್ಮ | ಬಾಲವ್ವ | ಅಶ್ವಿನಿ |
| ದುರುಗಮ್ಮ | ಮಲ್ಲಮ್ಮ | ಮಹೇಶ್ವರಿ |
| ಮಾಯವ್ವ | ಸೀತಮ್ಮ | ಸಾವಿತ್ರಿ |

ಈ ಮೇಲಿನ ಮೂರು ತಲೆಮಾರುಗಳ ಪಟ್ಟಿಯಲ್ಲಿ ಪುರುಷ ಮತ್ತು ಸ್ತ್ರೀಯರ ಹೆಸುರಗಳನ್ನು ಗಮನಿಸಿದರೆ, ಒಂದನೇ ಮತ್ತು ಎರಡನೇ ತಲೆಮಾರುಗಳ ಹೆಸರುಗಳಲ್ಲಿ ದೈವಮೂಲದ ವ್ಯಕ್ತಿನಾಮಗಳು ಅಧಿಕ ಪ್ರಮಾಣದಲ್ಲಿ ಕಾಣುತ್ತೇವೆ. ಪ್ರಾದೇಶಿಕ ದೈವಗಳಾದ, ಉಜ್ಜಿನಿಯ ಮರುಳಸಿದ್ದೇಶ್ವರ, ಕೊಟ್ಟೂರಿನ ಕೊಟ್ರೇಶ, ಸಿರಿಬಿಯ ಮೂಗಬಸವೇಶ್ವರ, ನಾಯಕನಹಟ್ಟಿಯ ತಿಪ್ಪೇಸ್ವಾಮಿ, ಬೆನ್ನಳ್ಳಿಯ ದುರುಗಮ್ಮ, ಬಳ್ಳಾರಿ ದುರುಗಮ್ಮ, ಗಾಣಗಟ್ಟಿ ಮಾಯಮ್ಮ, ಕಣಿಮೆ ಈರಣ್ಣ, ಮರಬದ ಈರಣ್ಣ ಇನ್ನು ಅನೇಕ ಪ್ರಾದೇಶಿಕ ಸ್ತ್ರೀ ಮತ್ತು ಪುರುಷ ದೇವತೆಗಳ ಹೆಸರುಗಳ ಮೇಲೆ ಪ್ರಭಾವ ಬೀರಿರುವುದನ್ನು ಗಮನಿಸಬಹುದು.

ಗೊಲ್ಲ ಸಮುದಾಯದ ವ್ಯಕ್ತಿನಾಮಗಳಲ್ಲಿ ವಿಶೇಷವೇನೆಂದರೆ, ಅವರ ಸಮುದಾಯ ದೈವಗಳಾದ ಚಿತ್ರಲಿಂಗೇಶ್ವರ, ಬೊಮ್ಮಲಿಂಗೇಶ್ವರ, ಕಾಟಲಿಂಗೇಶ್ವರ, ಕ್ಯಾತಯ್ಯ, ಗುದ್ರಿ ದೊಡ್ಡಣ್ಣ ಈ ದೇವತೆಗಳ ಹೆಸರುಗಳನ್ನು ಒಂದು ಮತ್ತು ಎರಡನೇ ತಲೆಮಾರಿನವರಲ್ಲಿ ಒಂದೇ ಮನೆಯಲ್ಲಿ ಒಂದೇ ಹೆಸರನ್ನು ಸಣ್ಣ ಮತ್ತು ದೊಡ್ಡ ವಿಶೇಷಣಗಳನ್ನು ಬಳಸಿ ಹೆಸರುಗಳನ್ನು ಇಟ್ಟಿರುವುದು ಕಂಡುಬರುತ್ತದೆ. ಉದಾಹರಣೆಗೆ ಸಣ್ಣ ಚಿತ್ತಯ್ಯ, ದೊಡ್ಡ ಚಿತ್ತಪ್ಪ, ಚಿಕ್ಕಣ್ಣ, ದೊಡ್ಡಣ್ಣ, ಸಣ್ಣನಾಗಪ್ಪ, ದೊಡ್ಡನಾಗಪ್ಪ, ಸಣ್ಣಬಾಲಪ್ಪ, ದೊಡ್ಡ ಬಾಲಪ್ಪ, ಸಣ್ಣ ಚಿತ್ತವ್ವ, ದೊಡ್ಡ ಚಿತ್ತವ್ವ, ಸಣ್ಣ ಬಾಲವ್ವ, ದೊಡ್ಡ ಬಾಲವ್ವ

ಈ ಮೇಲಿನ ಉದಾಹರಣೆಗಳಿಂದ ಒಂದೇ ದೈವಮೂಲದ ಹೆಸರನ್ನು ಪುರುಷ ಮತ್ತು ಸ್ತ್ರೀಯರಿಬ್ಬರೂ ಇಟ್ಟುಕೊಂಡಿರುವುದು ತಿಳಿಯುತ್ತದೆ. ಮೂರನೇ ತಲೆಮಾರಿನ ಹೆಸರುಗಳಲ್ಲಿ ದೈವಮೂಲದ ಹೆಸರುಗಳು ಇದ್ದಕ್ಕಿದ್ದಂತೆ ಇರುವುದು ಕಡಿಮೆ ಸ್ವರೂಪದಲ್ಲಿ ಬದಲಾವಣೆಗಳಾಗಿವೆ. ಉದಾಹರಣೆಗೆ,

ಕೃಷ್ಣಪ್ಪ – ಕೃಷ್ಣ

ಚಿತ್ತಪ್ಪ – ಚಿತ್ತಲಿಂಗೇಶ

ಬಾಲಪ್ಪ – ಬಾಲೇಶ

ನಾಗಪ್ಪ – ನಾಗೇಶ

ಗೋಪಾಲಪ್ಪ – ಗೋಪಾಲ

ಈ ರೀತಿಯಾಗಿ ಬದಲಾವಣೆಗೊಂಡಿವೆ. ಈ ತಲೆಮಾರಿನಲ್ಲಿ ದೈವಮೂಲದ ಹೆಸರುಗಳನ್ನು ಇಟ್ಟಿರುವುದು ಕಡಿಮೆ ಕಂಡುಬರುತ್ತವೆ. ಹೆಚ್ಚಾಗಿ ಭಾವನಾಮಗಳೇ ಸ್ಥಾನವನ್ನು ಪಡೆದುಕೊಂಡಿವೆ.

ಗೊಲ್ಲ ಸಮುದಾಯದ ಹೆಸರುಗಳಲ್ಲಿ ವಾರ್ಗಿಕಗಳು ಬಳಕೆಯಾಗಿರುವುದನ್ನು ಹೆಚ್ಚಾಗಿ ಒಂದು ಮತ್ತು ಎರಡನೇ ತಲೆಮಾರುಗಳಲ್ಲಿ ಕಾಣಬಹುದು.

**ಸಂಬಂಧವಾಚಿ ವಾರ್ಗಿಕಗಳು**

**ಪುರುಷರಲ್ಲಿ**

ಅಯ್ಯ – ಚಿತ್ತಯ್ಯ, ಬೊಮ್ಮಯ್ಯ

ಅಪ್ಪ – ನಾಗಪ್ಪ, ಬಾಲಪ್ಪ, ದೊಡ್ಡಪ್ಪ

ಅಣ್ಣ – ತಿಪ್ಪಣ್ಣ, ಕೊಟ್ರಣ್ಣ

**ಸ್ತ್ರೀಯರಲ್ಲಿ**

ಅಮ್ಮ – ಕರಿಯಮ್ಮ, ತಿಪ್ಪಮ್ಮ, ಬಾಲಮ್ಮ

ಅಕ್ಕ – ಚಿತ್ತಕ್ಕ, ತಾಯಕ್ಕ, ದುರುಗಕ್ಕ

ಜಾತಿವಾಚಿ/ವೃತ್ತಿವಾಚಿ ವಾರ್ಗಿಕಗಳು ಹೆಚ್ಚಾಗಿ ಪುರುಷರಲ್ಲಿಯೇ ಕಂಡುಬರುತ್ತವೆ.

ಗೌಡ – ಈರೇಗೌಡ, ನಾಗೇಗೌಡ, ಯಾದವ್– ನಿಂಗಪ್ಪ ಯಾದವ್, ಕೃಷ್ಣ ಯಾದವ್, ಗೋಪಿ ಯಾದವ್, ತಿಪ್ಪೇಶ ಯಾದವ್.

ಈ ಮೇಲಿನ ಸಂಬಂಧವಾಚಿ ವಾರ್ಗಿಕಗಳನ್ನು ಬಳಸಿಕೊಂಡಿರುವ ಹೆಸರುಗಳನ್ನು ಒಂದು ಮತ್ತು ಎರಡನೇ ತಲೆಮಾರಿನವರಲ್ಲಿ ಹೆಚ್ಚು ಕಾಣಲಿಕ್ಕೆ ಸಾಧ್ಯ. ಹಾಗೆಯೇ ಜಾತಿವಾಚಿ ಮತ್ತು ವೃತ್ತಿವಾಚಿಯಾದ 'ಯಾದವ್' ಮತ್ತು 'ಗೌಡ' ಎಂಬ ವಾರ್ಗಿಕಗಳಲ್ಲಿ 'ಯಾದವ್' ಎಂಬ

ವಾರ್ಗಿಕವನ್ನು ಹೆಸರಿನ ಮುಂದೆ ಬಳಸುವುದು ಇತ್ತೀಚೆಗೆ ಹೆಚ್ಚಾಗಿದೆ. 'ಗೌಡ' ಎಂಬ ವಾರ್ಗಿಕಗಳು ಈ ಸಮುದಾಯದಲ್ಲಿ ಪ್ರಸ್ತುತ ಕಂಡುಬರುವುದು ಬೆರಳೆಣಿಕೆಯಷ್ಟು. ಹಿಂದೆ ವೃತ್ತಿವಾಚಿ ಅರ್ಥದಲ್ಲಿ ಬಳಕೆಯಾಗಿರುವುದು ಕಂಡುಬರುತ್ತದೆ.

**೫.೫.೨. ನಾಯಕರು**

ಕರ್ನಾಟಕದ ಅನೇಕ ಬುಡಕಟ್ಟುಗಳಲ್ಲಿ ನಾಯಕ ಸಮುದಾಯವೂ ಒಂದಾಗಿದೆ. ಈ ಸಮುದಾಯವನ್ನು ಬೇಡ, ವಾಲ್ಮೀಕಿ, ತಳವಾರ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಕರ್ನಾಟಕದ ಬಳ್ಳಾರಿ, ಚಿತ್ರದುರ್ಗ, ರಾಯಚೂರು, ಗುಲ್ಬರ್ಗಾ, ಬೆಳಗಾಂ ಜಿಲ್ಲೆಗಳಲ್ಲಿ ಈ ಸಮುದಾಯದವರು ಹೆಚ್ಚಾಗಿ ಕಂಡುಬರುತ್ತಾರೆ. ಬಳ್ಳಾರಿ ಪರಿಸರದಲ್ಲಿ ಈ ಜನಾಂಗವು ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಸಮುದಾಯವಾಗಿದೆ. ಹೆಚ್ಚು ಜನ ವ್ಯವಸಾಯ ಮಾಡುವುದರಲ್ಲಿ ನಿರತರಾಗಿದ್ದಾರೆ. ಹೊಸ, ಹೊಸ ವೃತ್ತಿಗಳಿಗೆ ಇತ್ತೀಚೆಗೆ ತೆರೆದುಕೊಳ್ಳುತ್ತಿದ್ದಾರೆ. ವಿವಿಧ ಆಚರಣಾ ಪದ್ಧತಿಗಳನ್ನು ಈ ಸಮುದಾಯವು ಹೊಂದಿದ್ದು, ಪ್ರಸ್ತುತ ವ್ಯಕ್ತಿನಾಮ ನಿರ್ದೇಶನದಲ್ಲಿ ಹೇಗೆ ಬದಲಾವಣೆಯನ್ನು ಕಂಡಿದೆ ಎಂಬುದನ್ನು ಇಲ್ಲಿ ನೋಡಲಾಗಿದೆ. ತಲೆಮಾರುಗಳಲ್ಲಿ, ವ್ಯಕ್ತಿನಾಮಗಳ ಮಾದರಿಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

**ಪುರುಷರಲ್ಲಿ**

| **ತಲೆಮಾರು –೧** | **ತಲೆಮಾರು–೨** | **ತಲೆಮಾರು–೩** |
|---|---|---|
| ರಾಮಪ್ಪ | ಹುಲುಗಪ್ಪ ನಾಯಕ | ಮಂಜುನಾಥ |
| ಪಾಲಜ್ಜ | ಹನುಮಂತ | ಹುಲಿಗೇಶ |
| ಹನುಮಂತಪ್ಪ | ಕೊಟ್ರೇಶಪ್ಪ | ರಮೇಶನಾಯಕ |
| ಭರಮಪ್ಪ ನಾಯಕ | ಉಜ್ಜೀನಪ್ಪ | ಕುಮಾರ ವಾಲ್ಮೀಕಿ |
| ಕಡ್ಲಬಾಳಪ್ಪ | ಪಂಪಾಪತಿ | ಕೊಟ್ರೇಶ |
| ಕೊತ್ಲಯ್ಯ | ಮಲ್ಲಿಕಾರ್ಜುನ | ಯರ್ರಿಸ್ವಾಮಿ |
| ಮಲ್ಲೇಶಪ್ಪ | ಕುಮಾರಸ್ವಾಮಿ | ಪಂಪಾಪತಿ |
| ಕುಮಾರಪ್ಪ | ನರಸಿಂಹಪ್ಪ | ಪರಶುರಾಮ |
| ಕಾಟಪ್ಪ | ಬಳ್ಳಾರೆಪ್ಪ | ಲಕ್ಷ್ಮಣನಾಯಕ |
| ಬೋರನಾಯಕ | ಅರ್ಜುನಪ್ಪ | ಅರ್ಜುನ್ |
| ಪಂಪನಾಯಕ | ಭೀಮಣ್ಣ ತಳವಾರ್ | ಸಾಗರ್‌ನಾಯಕ |
| ಹುಲುಗಜ್ಜ | ಅಂಜಿನಪ್ಪ | ಉಲ್ಲಾಸ್ ವಾಲ್ಮೀಕಿ |

**ಸ್ತ್ರೀಯರಲ್ಲಿ**

| **ತಲೆಮಾರು-೧** | **ತಲೆಮಾರು-೨** | **ತಲೆಮಾರು-೩** |
|---|---|---|
| ದುರುಗಮ್ಮ | ಹುಲಿಗೆಮ್ಮ | ಸರಸ್ವತಿ |
| ಹಂಪಮ್ಮ | ಕೊಟ್ರಮ್ಮ | ಸಾವಿತ್ರಿ |
| ಕಂಪಾಲೆವ್ವ | ಪಾಲವ್ವ | ಮಹಾದೇವಿ |
| ಸೀತಮ್ಮ | ಉಡುಸಲಮ್ಮ | ನಾಗವೇಣಿ |
| ತಿಪ್ಪಮ್ಮ | ರಾಮಕ್ಕ | ಕಲ್ಪನಾ ವಾಲ್ಮೀಕಿ |
| ಬಳ್ಳಾರೆಮ್ಮ | ಗಾಳೆಮ್ಮ | ಭಾವನಾ ನಾಯಕ |
| ಹೂಲೆಪ್ಪ | ಪಕ್ಕೀರಮ್ಮ | ಮಂದಾರ |
| ಕಾಳಮ್ಮ | ಇರುಪವ್ವ | ಸೃಷ್ಟಿ |
| ಹನುಮವ್ವ | ಸುಂಕಲವ್ವ | ಮೇಘನಾ |
| ರಾಮವ್ವ | ಮಾರೆಮ್ಮ | ಸರೋಜ |
| ಯರ್ರೆಮ್ಮ | ಕರಿಯಮ್ಮ | ಸ್ವಪ್ನ, ನಯನ ವಾಲ್ಮೀಕಿ |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ ನಾಯಕ ಸಮುದಾಯವು ದೈವ ಮತ್ತು ಧರ್ಮದಿಂದ ಪ್ರೇರಣೆ ಪಡೆದಿರುವುದು ಗೊತ್ತಾಗುತ್ತದೆ. ಇಲ್ಲಿ ಪುರುಷ ಮತ್ತು ಸ್ತ್ರೀಯರ ಒಂದು ಮತ್ತು ಎರಡನೇ ತಲೆಮಾರುಗಳ ಪಟ್ಟಿಗಳನ್ನು ಗಮನಿಸಿದಾಗ, ಚಾರಿತ್ರಿಕ ವ್ಯಕ್ತಿಗಳ ಹೆಸರು, ಪ್ರಾದೇಶಿಕ ದೇವತೆಗಳ ಹೆಸರು ಮತ್ತು ತಮ್ಮ ಮನೆದೇವರ ಹೆಸರುಗಳಿರುವುದು ಸ್ಪಷ್ಟವಾಗಿ ತಿಳಿಯುತ್ತದೆ. ಮೂರನೇ ತಲೆಮಾರುಗಳ ಹೆಸರುಗಳನ್ನು ಗಮನಿಸಿದಾಗ, ದೈವಮೂಲದ ಹೆಸರು ಸಂಪೂರ್ಣವಾಗಿ ಅಳಿದು ಹೋಗಿಲ್ಲ. ಭಾವನಾಮಗಳು ಜಾಸ್ತಿಯಾಗಿರುವುದನ್ನು ನಾವು ಗಮನಿಸಬಹುದು. ಪುರುಷರಿಗಿಂತ ಸ್ತ್ರೀಯರಲ್ಲೆ ಹೆಚ್ಚು ಭಾವನಾಮಗಳು ಇರುವುದನ್ನು ಗಮನಿಸಲಾಗಿದೆ.

ವಾರ್ಗಿಕಗಳು: ಮೂರನೇ ತಲೆಮಾರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಇಲ್ಲವೆನ್ನು ವಷ್ಟರಮಟ್ಟಿಗೆ ಕಡಿಮೆಯಾಗಿವೆ. ಜಾತಿವಾಚಿ ವಾರ್ಗಿಕಗಳು ಒಂದು ಪ್ಯಾಶನ್ ರೀತಿಯಲ್ಲಿ ಬಳಕೆಯಾಗುವುದನ್ನು ನೋಡುತ್ತೇವೆ. ಬೇರೆ ಪ್ರದೇಶದಲ್ಲಿ ನಾಯಕ, ವಾಲ್ಮೀಕಿ ಎಂಬ ವಾರ್ಗಿಕಗಳನ್ನು ಬಳಸಿರುವುದನ್ನು ನೋಡಿ ಕಲಿಯುವ ಸಂದರ್ಭವನ್ನು ಗಮನಿಸಲಾಗಿದೆ. ಉದಾಹರಣೆಗೆ ಸುರಪುರ ಪರಿಸರದ ಸುತ್ತಮುತ್ತ ನಾಯಕ ಸಮುದಾಯದಲ್ಲಿ 'ದೊರೆ' ಎನ್ನುವ ವಾರ್ಗಿಕವನ್ನು ಬಳಸುತ್ತಾರೆ. ಅದನ್ನು ಗಮನಿಸಿ ಬಳ್ಳಾರಿ ಪರಿಸರದಲ್ಲಿಯ ಕೆಲವು ಹೆಸರುಗಳಲ್ಲಿ 'ದೊರೆ' ಎನ್ನುವ ವಾರ್ಗಿಕ ಇರುವುದನ್ನು ದತ್ತಾಂಶಗಳಿಂದ ಪಡೆದ ಮಾಹಿತಿಯಿಂದ ಗಮನಿಸಲಾಗಿದೆ.

ಪುರುಷರಲ್ಲಿ ಸಂಬಂಧವಾಚಿ ವಾರ್ಗಿಕ: ಅಯ್ಯ – ಮಾರಯ್ಯ, ಅಪ್ಪ– ಕಂಪ್ಲೆಪ್ಪ, ಅಜ್ಜ – ಹನುಮಜ್ಜ, ಅಣ್ಣ – ಕೊಟ್ರಣ್ಣ.

ವೃತ್ತಿ/ಜಾತಿವಾಚಿ ವಾರ್ಗಿಕ : ಗೌಡ– ಹನುಮೇಶಗೌಡ, ತಳವಾರ – ತಳವಾರ ಅಂಜಿನಪ್ಪ, ರಾಜ – ರಾಜಾ ಮದಕರಿನಾಯಕ, ದೊರೆ – ಹನುಮಣ್ಣನಾಯಕ ದೊರೆ, ನಾಯಕ–ಬಸವರಾಜ ನಾಯಕ.

ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕ: ಅವ್ವ–ನಾಗವ್ವ, ಅಮ್ಮ–ಹಂಪಮ್ಮ, ಅಕ್ಕ–ಲಸುಮಕ್ಕ.

ವೃತ್ತಿ/ಜಾತಿವಾಚಿ ವಾರ್ಗಿಕ: ನಾಗತಿ – ಬಸವ್ವ ನಾಗತಿ, ನಾಯಕ – ಗೀತಾನಾಯಕ, ತಳವಾರ–ಮಂಜುಳ ತಳವಾರ.

ಸಂಬಂಧವಾಚಿ ವಾರ್ಗಿಕಗಳನ್ನು ಗಮನಿಸಿದಾಗ, ಸಾಮಾನ್ಯವಾಗಿ ಎಲ್ಲ ಸಮುದಾಯಗಳಲ್ಲಿ ಬಳಕೆಯಾಗಿರುವಂತೆ ಇಲ್ಲಿಯೂ ಬಳಕೆಯಾಗಿದೆ. ವೃತ್ತಿ/ಜಾತಿವಾಚಿ ವಾರ್ಗಿಕಗಳನ್ನು ಬಳ್ಳಾರಿ ಪರಿಸರದ ಹೆಸರುಗಳಲ್ಲಿ ಗಮನಿಸಿದಾಗ 'ನಾಯಕ' ಎಂಬ ವಾರ್ಗಿಕವು ಹೆಚ್ಚಾಗಿ ಬಳಕೆಯಾಗಿರುವುದನ್ನು ಕ್ಷೇತ್ರಕಾರ್ಯ ಮಾಹಿತಿಯಿಂದ ತಿಳಿಯಲಾಗಿದೆ. ದೊರೆ, ಗೌಡ, ರಾಜ ಎಂಬ ವಾರ್ಗಿಕಗಳು ಕಡಿಮೆ ಎನ್ನುವಷ್ಟರ ಮಟ್ಟಿಗೆ ಬಳಕೆಯಾಗಿದೆ.

ಇನ್ನು ಸ್ತ್ರೀಯರ ವೃತ್ತಿ/ಜಾತಿವಾಚಿ ವಾರ್ಗಿಕಗಳನ್ನು ಗಮನಿಸಿದಾಗ 'ನಾಯಕ' ಎಂಬುದು ಇತ್ತೀಚಿಗೆ ಸ್ತ್ರೀಯರ ಹೆಸರುಗಳಲ್ಲಿ ಬಳಕೆಯಾಗುವುದು ಕಂಡುಬರುತ್ತದೆ. 'ನಾಗತಿ' ಎಂಬ ವಾರ್ಗಿಕವು ಹೂವಿನಹಡಗಲಿ ತಾಲೂಕಿನ ಕೆಲವು ಹೆಸರುಗಳಲ್ಲಿ ಗಮನಿಸಲಾಗಿದೆ.

**೫.೫.೩. ಕುರುಬರು**

ಕುರುಬ ಸಮುದಾಯವು ಕರ್ನಾಟಕದಲ್ಲಿ ಬಹುಸಂಖ್ಯಾತರಾಗಿದ್ದಾರೆ. ಇವರಲ್ಲಿ ಕಾಡು ಕುರುಬ, ಜೇನುಕುರುಬ, ಊರ ಕುರುಬರು ಎಂಬ ವಿಧಗಳಿವೆ. ಕುರಿಸಾಕಾಣಿಕೆ ಇವರ ಮೂಲ ವೃತ್ತಿ. ಪ್ರಾಚೀನ ಕಾಲದಲ್ಲಿ ಬೆಟ್ಟಗುಡ್ಡಗಳ ಅಂಚಿನಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದು, ಇವರೇ ಹಟ್ಟಿಕಾರರೆಂದು ಶಂಬಾ ವಾದಿಸುತ್ತಾರೆ. ಇವರು ಮೂಲತಃ ಶೈವಧರ್ಮದ ಆರಾಧಕರು. ಶಿವ ಇವರ ಆರಾಧ್ಯ ದೈವ. ಪ್ರಾಚೀನ ಕಾವ್ಯಗಳಲ್ಲಿ ಮಾಳವಿ, ಮೈಲಾರ, ಗೊರವ ಮುಂತಾದ ಹೆಸರುಗಳು ಉಲ್ಲೇಖವಾಗಿದೆ. ಮೈಲಾರ, ಮಾಳವಿ, ಬೀರ, ಕನಕ ಇವರು ಮುಖ್ಯವಾಗಿ ದೈವಗಳಾಗಿ ಈ ಸಮುದಾಯಕ್ಕೆ ನಿಂತಿದ್ದಾರೆ. ಈ ದೈವಗಳ ಪ್ರಭಾವವೂ ಇವರ ವ್ಯಕ್ತಿನಾಮಗಳಿಗೆ ಪ್ರೇರಣೆಯಾಗಿದೆ.

ಬಳ್ಳಾರಿ ಪರಿಸರದಲ್ಲಿ ಕುರುಬರ ಸಮುದಾಯಕ್ಕೆ ಸಂಬಂಧಿಸಿದಂತಹ ಹಲವು ಸ್ಥಳಗಳನ್ನು ನೋಡಬಹುದು. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಕುರುಗೋಡು, ಸಂಡೂರು ತಾಲೂಕಿನ ಕುರೆಕೊಪ್ಪ, ಹೂವಿನಹಡಗಲಿ ತಾಲೂಕಿನ ಕೊಂಬಳಿ, ಬಳ್ಳಾರಿ ತಾಲೂಕಿನ ಕುರುಳ್ಳಿ, ಗದಗ ಜಿಲ್ಲೆಯ ಹಾಲಕೆರೆ, ಮೊಳಕಾಲ್ಮುರು ತಾಲೂಕಿನ ರೊಪ್ಪ, ಹೂವಿನಹಡಗಲಿ ತಾಲೂಕಿನ ಕುರುವತ್ತಿ

ಹೀಗೆ ಅನೇಕ ಸ್ಥಳಗಳನ್ನು ಗುರುತಿಸಬಹುದಾಗಿದೆ. ಇಲ್ಲಿನ ಪ್ರಾದೇಶಿಕ ದೇವತೆಗಳಾದ ಬಳ್ಳಾರೆಪ್ಪ, ಗುಂಟಕಲ್ಲಪ್ಪ, ಕಂಚೇಶ್ವರ, ಬೀರಲಿಂಗೇಶ್ವರ, ಕೆಂಚಮಾಳಪ್ಪ, ಕಲ್ಲುದೇಶ್ವರ, ಹೊಸಗೇರಪ್ಪ, ಬಲ್ಲಕುಂದೆಪ್ಪ, ಕಾರಮಿಂಚಪ್ಪ, ನಾಗಲಿಂಗೇಶ್ವರ, ಗಾದಿಲಿಂಗೇಶ್ವರ, ತಿಪ್ಪೇರುದ್ರಸ್ವಾಮಿ, ಯರ‍್ರಿಸ್ವಾಮಿ, ಬಸಪ್ಪತಾತ, ಹುಚ್ಚಪ್ಪತಾತ, ಕರಿಸಿದ್ದ ದೈವಗಳು ಬಳ್ಳಾರಿ ಪರಿಸರದ ವ್ಯಕ್ತಿನಾಮಗಳ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

ಎಲ್ಲ ಸಮುದಾಯಗಳ ವ್ಯಕ್ತಿನಾಮಗಳ ಮೇಲೆ ಬದಲಾವಣೆಯಾದಂತೆ, ಕುರುಬ ಸಮುದಾಯದ ಮೇಲೆಯೂ ಆಧುನಿಕತೆಯಿಂದಾಗಿ, ಹೆಸರುಗಳಲ್ಲಿ ಬದಲಾವಣೆಯಾಗಿರುವುದನ್ನು ನೋಡಬಹುದು. ಆದರೆ ಇಂದಿಗೂ ಕೂಡ ಗ್ರಾಮೀಣ ಪರಿಸರದಲ್ಲಿ ಸಾಂಸ್ಕೃತಿಕ ಮತ್ತು ಸಾಮಾಜಿಕ ಪರಂಪರೆಯ ವ್ಯಕ್ತಿನಾಮಗಳು ಪ್ರಸ್ತುತದಲ್ಲಿಯೂ ಕಾಣಬಹುದು. ಅವುಗಳ ಪ್ರಮಾಣ ಕಡಿಮೆಯಾಗಿದೆ ಎನ್ನಬಹುದು. ಕಾಲಾಂತರದಲ್ಲಿ ಬದಲಾವಣೆಯಾದ ಹೆಸರುಗಳನ್ನು ಈ ಕೆಳಗಿನ ಮಾದರಿಗಳಿಂದ ಗಮನಿಸಬಹುದು.

**ಪುರುಷರಲ್ಲಿ**

| **ತಲೆಮಾರು-೧** | **ತಲೆಮಾರು-೨** | **ತಲೆಮಾರು-೩** |
|---|---|---|
| ಗಾದೆಪ್ಪ | ಹುಲುಗಪ್ಪ | ಮಂಜುನಾಥ |
| ಬಲಕುಂದೆಪ್ಪ | ದುರುಗಪ್ಪ | ಚಿತ್ರೇಶ |
| ಕರಿಸಿದ್ದಪ್ಪ | ಆನಂದ | ಮನೋಹರ |
| ಕೋಟೆಪ್ಪ | ಕೊಟ್ರಣ್ಣ | ಯರಿಸ್ವಾಮಿ |
| ಗಟ್ಟೆಪ್ಪ | ಪ್ರಕಾಶ್‌ಗೌಡ | ಮನೋಜ್ |
| ಜಾಲಾಟಪ್ಪ | ಮಲ್ಲಿಕಾರ್ಜುನಗೌಡ | ಪ್ರಭು |
| ಕೆಂಚಮಾಳಪ್ಪ | ಬೀರಲಿಂಗೇಶ್ವರ | ಮಹೇಶ |
| ಕಾರಮಿಂಚಪ್ಪ | ಮಾಳಪ್ಪ | ಬಸವರಾಜ |
| ಬೀರಪ್ಪ | ನಾಗಲಿಂಗ | ನಿಂಗಪ್ಪ |
| ಬಳ್ಳಾರೆಪ್ಪ | ಬೀರಣ್ಣ | ಅಂಜಿನಿ |

**ಸ್ತ್ರೀಯರಲ್ಲಿ**

| **ತಲೆಮಾರು-೧** | **ತಲೆಮಾರು-೨** | **ತಲೆಮಾರು-೩** |
|---|---|---|
| ಕರಿಯಮ್ಮ | ಹನುಮಕ್ಕ | ಪಾರ್ವತಿ |
| ಭೀಮಕ್ಕ | ಮಾರೆಮ್ಮ | ಶಾರದ |

| | | |
|---|---|---|
| ಮಾಯಮ್ಮ | ಗೌರಮ್ಮ | ಮೌನೇಶ್ವರಿ |
| ಬೆನ್ನೆಳಮ್ಮ | ಬಸಕ್ಕ | ಸ್ವಪ್ನ |
| ಕುರುವತ್ತೆಮ್ಮ | ಕೊಟ್ರಮ್ಮ | ಸೌಂದರ್ಯ |
| ಭರಮಮ್ಮ | ತಿಪ್ಪವ್ವ | ಪಲ್ಲವಿ |
| ಕೆಂಚಮ್ಮ | ದುರುಗವ್ವ | ಆಶಿಕಾ |
| ಲಕ್ಕಮ್ಮ | ಚಿತ್ರಲಿಂಗಮ್ಮ | ಮಂಜುಳ |
| ಬರಿಗೇರಮ್ಮ | ಈರಮ್ಮ | ಗೀತಾ |
| ಬಳ್ಳಾರೆಮ್ಮ | ಕ್ಯಾತಕ್ಕ | ಮಹಾದೇವಿ |

ಮೇಲಿನ ತಲೆಮಾರು ಪಟ್ಟಿಗಳ ಪ್ರಕಾರ ಪುರುಷ ಮತ್ತು ಸ್ತ್ರೀಯರ ಹೆಸರುಗಳನ್ನು ಗಮನಿಸಿದಾಗ, ಆ ಸಮುದಾಯದ ದೈವಗಳು ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ಮತ್ತು ಪ್ರಾದೇಶಿಕ ಪ್ರಸಿದ್ಧ ದೈವಗಳಾದ ದುರುಗಮ್ಮ, ತಿಪ್ಪೇಸ್ವಾಮಿ, ಕೊಟ್ರೇಶ, ಮಾಯಮ್ಮ, ಇನ್ನೂ ಅನೇಕ ದೈವಗಳ ಪ್ರಭಾವವೂ ಇದೆ. ಒಂದು ಮತ್ತು ಎರಡನೇ ತಲೆಮಾರುಗಳ ಪಟ್ಟಿಯಲ್ಲಿ ದೈವಮೂಲದ ಹೆಸರುಗಳನ್ನೇ ಪ್ರಧಾನವಾಗಿ ಇಟ್ಟುಕೊಂಡಿರುವುದು ತಿಳಿಯುತ್ತದೆ.

ಮೂರನೆ ತಲೆಮಾರಿನ ಪುರುಷ ಮತ್ತು ಸ್ತ್ರೀ ಹೆಸರುಗಳಲ್ಲಿ ಮೇಲ್‌ಸ್ತರದ ದೇವತೆಗಳೆಂದೆನಿಸಿದ, ಧರ್ಮಸ್ಥಳ ಮಂಜುನಾಥ, ಪಾರ್ವತಿ ಇನ್ನಿತರ ದೇವತೆಗಳನ್ನು ಕಾಣುತ್ತೇವೆ. ಒಟ್ಟಾರೆ ಈ ತಲೆಮಾರಿನಲ್ಲಿ ದೈವಮೂಲದ ಹೆಸರುಗಳು ಹಿಂದಕ್ಕೆ ಸರಿಯುವುದನ್ನು ಕಾಣಬಹುದು.

ಕುರುಬ ಸಮುದಾಯದ ವ್ಯಕ್ತಿನಾಮಗಳಲ್ಲಿ ಬಳಕೆಯಾಗಿರುವ ವಾರ್ಗಿಕಗಳನ್ನು ಈ ಕೆಳಗಿನಂತೆ ಗಮನಿಸಬಹುದಾಗಿದೆ.

ಪುರುಷರಲ್ಲಿ ಸಂಬಂಧವಾಚಿ ವಾರ್ಗಿಕ: ಅಪ್ಪ – ಮಾಳಪ್ಪ, ಕಲ್ಲಪ್ಪ, ಅಯ್ಯ – ಕೆಂಚಯ್ಯ, ಬೀರಯ್ಯ.

ವೃತ್ತಿ/ಜಾತಿವಾಚಿ ವಾರ್ಗಿಕ: ಗೌಡ–ಬೀರಪ್ಪಗೌಡ, ಕುರುಬರ – ಹನುಮಂತಪ್ಪ ಕುರುಬರ

ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕ: ಅವ್ವ–ಕುರುವತ್ತೆವ್ವ, ಅಮ್ಮ–ಮಾಳಮ್ಮ, ಅಕ್ಕ–ಕೊಟ್ರಕ್ಕ.

ಈ ಮೇಲಿನ ವಾರ್ಗಿಕಗಳಲ್ಲಿ 'ಗೌಡ' ಎಂಬ ವಾರ್ಗಿಕವು ಕೆಲವು ಹೆಸರುಗಳಲ್ಲಿ ಮಾತ್ರ ಕಾಣಸಿಗುತ್ತದೆ. ಇನ್ನುಳಿದಂತೆ ಜಾತಿವಾಚಿ, ಕುರುಬರ, ಸಂಬಂಧವಾಚಿಗಳು ಇತ್ತೀಚೆಗೆ ಕಡಿಮೆ ಯಾಗತೊಡಗಿವೆ.

### ೫.೫.೪. ಕೊರಚರು

ಕೊರಚರು ಬಳ್ಳಾರಿ ಪರಿಸರದಲ್ಲಿ ಅಲ್ಪಸಂಖ್ಯಾತರಾಗಿದ್ದು, ದಕ್ಷಿಣ ಕನ್ನಡ ಪರಿಸರದಲ್ಲಿ ಇವರು ಹೆಚ್ಚಾಗಿ ನೆಲಸಿದ್ದಾರೆ. ಕೊರಚರನ್ನು ಕೊರಗ, ಕೊರಮ ಎರಡು ಬುಡಕಟ್ಟುಗಳೊಂದಿಗೆ ಹೋಲಿಸುತ್ತಾರೆ. ಕೊರಗರು ಕನ್ನಡನಾಡಿನ ಮೂಲನಿವಾಸಿಗಳೆನ್ನಲಾಗಿದೆ. (ಪುರುಷೋತ್ತಮ ಬಿಳಿಮಲೆ, ೧೯೯೩, ಪುಟ-೨೬) ಇವರಿಗೆ ಸಂಬಂಧಿಸಿದಂತೆ ಅನೇಕ ಸ್ಥಳನಾಮಗಳಿವೆ. ಕೊರಚರಹಟ್ಟಿ, ಕೊರವರ ಓಣಿ, ಕೊರಚರ ಈಚಲು, ಈಚಲಹಾಳ್ ಈ ರೀತಿಯಾಗಿ ಅನೇಕ ಸ್ಥಳಗಳಿವೆ.

ಕೊರಚ ಸಮುದಾಯದ ವೃತ್ತಿಯು, ಪುಟ್ಟಿ ಹೆಣೆಯುವುದು ಮತ್ತು ಹಗ್ಗ ಮಾಡುವುದಾಗಿದೆ. ಇತ್ತೀಚೆಗೆ ಅವುಗಳ ಜೊತೆಗೆ ವ್ಯವಸಾಯ ಮಾಡುವುದರಲ್ಲಿ ಆಸಕ್ತರಾಗಿದ್ದಾರೆ. ಗಂಗಾವತಿ, ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ, ಕೊಪ್ಪಳ ಜಿಲ್ಲೆಗಳಲ್ಲಿ ಕೊರಚರು ನೆಲೆಸಿರುವುದನ್ನು ತಿಳಿದುಕೊಳ್ಳಲಾಗಿದೆ. ಮದುವೆ, ಹಬ್ಬದ ದಿನಗಳಲ್ಲಿ ಅವರದೇಯಾದ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತಾರೆ. ಕೆಳವರ್ಗದ ದೇವತೆಗಳಾದ ದುರುಗವ್ವ, ಸುಂಕಲವ್ವ, ಮಾರಮ್ಮ, ಗುಳೇಲಕ್ಕವ್ವ, ಉಡುಸಲವ್ವ, ದೇವತೆಗಳನ್ನು ಪೂಜಿಸುತ್ತಾರೆ. ಆ ಸಮುದಾಯದ ಜನರನ್ನು ಸಂಪರ್ಕಿಸಿದಾಗ, ಚಿತ್ರದುರ್ಗ-ದಾವಣಗೆರೆ ಜಿಲ್ಲೆಯ ಕಡೆಯ ಜನರು ನಮ್ಮ ಸಮುದಾಯದ ದೇವರು 'ಗೋಸಂದ್ರ ಮಾರಮ್ಮ' ಎಂದು ಹೇಳುತ್ತಾರೆ. ಬಳ್ಳಾರಿ ಕಡೆಯ ಜನರು ದುರುಗಮ್ಮ, ಅರಿಯಲಮ್ಮ, ಸಲ್ಲಮ್ಮ ಮತ್ತು ವಲಸು ದೇವತೆಗಳು ನಮ್ಮ ಸಮುದಾಯದ ದೇವತೆಗಳು ಎಂದು ಹೇಳುತ್ತಾರೆ.

'ಅರಿಯಲಮ್ಮ' ದೇವತೆಯ ವಿಶೇಷವೇನೆಂದರೆ ಆಕೆ ಫಲವತ್ತತೆಯ ಸಂಕೇತವಂತೆ, ಆದ್ದರಿಂದ ಬಿತ್ತನೆ ಮಾಡುವ ಸಂದರ್ಭದಲ್ಲಿ ಮತ್ತು ಫಲಗಳು ಬೆಳವಣಿಗೆಯ ಸಮಯದಲ್ಲಿ ಈ ದೇವತೆಯನ್ನು ಹೊಲಗಳಲ್ಲಿ ಪೂಜೆ ಮಾಡಿಕೊಳ್ಳುತ್ತಾರೆ. ಹಾಗೆಯೇ ವಲಸೆ ಬಂದಂತಹ ಈ ಜನರು ಹೊಸ ಜಾಗದಲ್ಲೇನಾದರು ಮಕ್ಕಳಿಗೆ ರೋಗ, ರುಜಿನಗಳು ಬಂದರೆ ಒಂದು ಮಣ್ಣಿನ ಮೂರ್ತಿಯನ್ನು ಹಟ್ಟಿಯಲ್ಲಿ ಮಾಡಿ, ಮಾಡಿದಂತಹ ಪ್ರಸಾದವನ್ನು ಊರ ಅಥವಾ ಹಟ್ಟಿಯ ಹೊರಗಡೆ ಒಯ್ದು, ಅಲ್ಲಿ ಊಟ ಮಾಡಿ ಬರುತ್ತಾರೆ. ಇದರಿಂದ ತಮ್ಮ ಮಕ್ಕಳಿಗೆ ಬಂದಂತಹ ಕಾಯಿಲೆಗಳು ವಾಸಿಯಾಗುತ್ತವೆಂಬ ನಂಬಿಕೆ ಕೊರಚ ಸಮುದಾಯದ ಜನರಲ್ಲಿದೆ. ಇದನ್ನೇ ಅವರು ಆಡುಮಾತಿನಲ್ಲಿ ವಲಸು ದೇವರು ಎನ್ನುತ್ತಾರೆ. ಇವರಾಡುವ ಭಾಷೆಯು ತಮಿಳು, ತೆಲುಗು, ಕನ್ನಡ ಮಿಶ್ರಿತವಾಗಿದೆ. ಇವರು ತಮಿಳುನಾಡಿನ ಮೂಲದವರೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಬಳ್ಳಾರಿ ಪರಿಸರದ ಕೊರಚ ಸಮುದಾಯದಲ್ಲಿ ತಲೆಮಾರುಗಳಲ್ಲಿ ಬಳಕೆಯಾಗಿರುವ ಕೆಲವು ಹೆಸರುಗಳನ್ನು ಮೂರು ತಲೆಮಾರುಗಳಲ್ಲಿ ಮಾದರಿಗಾಗಿ ಗಮನಿಸಬಹುದು.

**ಪುರುಷರಲ್ಲಿ**

| **ತಲೆಮಾರು-೧** | **ತಲೆಮಾರು-೨** | **ತಲೆಮಾರು-೩** |
|---|---|---|
| ದುಗ್ಗಪ್ಪ | ಅಜ್ಜಪ್ಪ | ಪ್ರತಾಪ್ |

| | | |
|---|---|---|
| ಸುಂಕಪ್ಪ | ನಿಂಗಪ್ಪ | ಮಂಜುನಾಥ |
| ಮಲ್ಲಪ್ಪ | ಕೊಟ್ರೇಶ | ಸ್ವಾಮಿ |
| ನಾಗಪ್ಪ | ನಾಗರಾಜ | ಪ್ರಕಾಶ್ |
| ಗಂಗಪ್ಪ | ಯಂಕಪ್ಪ | ನಾಗರಾಜ್ |
| ಗೋಣೆಪ್ಪ | ತಿಮ್ಮಪ್ಪ | ಹರ್ಷ |
| ಚೌಡಪ್ಪ | ಟಿಂಗಪ್ಪ | ಮೋಹನ್ |
| ರಾಮಯ್ಯ | ನಾಗೇಂದ್ರಪ್ಪ | ಸುದೀಪ್ |
| ಕಪ್ಪತ್ತಪ್ಪ | ದುರುಗಪ್ಪ | ಪ್ರದೀಪ್ |
| ಸುಂಕಲಪ್ಪ | ರಾಮಪ್ಪ | ವಿನಯ್ |

**ಸ್ತ್ರೀಯರಲ್ಲಿ**

| ತಲೆಮಾರು–೧ | ತಲೆಮಾರು–೨ | ತಲೆಮಾರು–೩ |
|---|---|---|
| ಸುಂಕವ್ವ | ಗಂಗಕ್ಕ | ಪವಿತ್ರ |
| ನಾಗಮ್ಮ | ಲಕ್ಷ್ಮಕ್ಕ | ಕೊಟ್ರಮ್ಮ |
| ಲಕ್ಷ್ಮಜ್ಜಿ | ರೇಣುಕಮ್ಮ | ಸುಶೀಲ |
| ರಾಮವ್ವ | ಮಾರಕ್ಕ | ಕಲ್ಪನಾ |
| ಮಾರೆಮ್ಮ | ಪಾರ್ವತಿ | ಕಲಾವತಿ |
| ತಿಪ್ಪವ್ವ | ಶಾರದಕ್ಕ | ಸುಚಿತ್ರ |
| ದುರುಗವ್ವ | ಮರಿಯಮ್ಮ | ಶಾರದ |
| ಹುಲಿಗೆಮ್ಮ | ಮಲ್ಲಮ್ಮ | ಕಮಲ |
| ಕರಿಯಮ್ಮ | ರಾಧಕ್ಕ | ದೀಪ |
| ಸಾಕಮ್ಮ | ಆನಂದಮ್ಮ | ಕೀರ್ತನಾ |

ಈ ಮೇಲಿನ ಕೊರಚ ಸಮುದಾಯದ ಹೆಸರುಗಳನ್ನು ಗಮನಿಸಿದಾಗ, ಒಂದು ಮತ್ತು ಎರಡನೇ ತಲೆಮಾರುಗಳಲ್ಲಿ ಪುರುಷ ಮತ್ತು ಸ್ತ್ರೀಯರ ಹೆಸರುಗಳಲ್ಲಿ ದೈವಮೂಲದ ಹೆಸರುಗಳನ್ನು ಹೆಚ್ಚು ಹೆಚ್ಚು ಕಾಣುತ್ತೇವೆ. ಹಾಗೆಯೇ ಮೂರನೇ ತಲೆಮಾರಿನ ಸ್ತ್ರೀ ಮತ್ತು ಪುರುಷರ ಹೆಸರುಗಳನ್ನು ಗಮನಿಸಿದಾಗ ಆಧುನಿಕತೆಗೆ ಒಗ್ಗಿ ಬದಲಾವಣೆಗೊಳಪಟ್ಟಿವೆ. ಅದರಲ್ಲಿ ದೈವಮೂಲದ ಹೆಸರುಗಳು

ಕಡಿಮೆಯಾಗಿವೆ. ಹೊಸ ಹೆಸರುಗಳು ಬಂದು ಸೇರಿಕೊಂಡಿವೆ ಎಂಬುದನ್ನು ಮೇಲಿನ ಪಟ್ಟಿಗಳ ಮೂಲಕ ಗಮನಿಸಬಹುದಾಗಿದೆ.

ಪುರುಷರಲ್ಲಿ ಸಂಬಂಧವಾಚಿ ವಾರ್ಗಿಕಗಳು: ಅಪ್ಪ–ಸುಂಕಪ್ಪ, ಮಾರ್ಗದಪ್ಪ, ಅಯ್ಯ–ಮಾರಯ್ಯ, ಮಲ್ಲಯ್ಯ, ಅಣ್ಣ–ಕೊಟ್ರಣ್ಣ, ನಾಗಣ್ಣ.

ಜಾತಿವಾಚಿ ವಾರ್ಗಿಕ: ಕೊರಚ–ಕೊರಚರ ಗಂಗಪ್ಪ, ಕೊರಚರ ಮಲ್ಲಪ್ಪ

ಸ್ತ್ರೀಯರಲ್ಲಿ ಸಂಬಂಧವಾಚಿ ವಾರ್ಗಿಕ: ಅವ್ವ–ದುರುಗವ್ವ, ಮಾರವ್ವ, ಅಮ್ಮ–ರತ್ನಮ್ಮ, ನಾಗಮ್ಮ, ಅಕ್ಕ–ಕೊಟ್ರಕ್ಕ, ಪೆನ್ನಕ್ಕ.

ಸಾಮಾನ್ಯವಾಗಿ ಪುರುಷರ ಹೆಸರುಗಳಲ್ಲಿ ಅಪ್ಪ, ಅಯ್ಯ, ಅಣ್ಣ ಎಂಬ ವಾರ್ಗಿಕಗಳು ಈ ಸಮುದಾಯದ ಹೆಸರುಗಳಲ್ಲಿ ನೋಡಬಹುದು. ಹಾಗೆಯೇ ಸ್ತ್ರೀಯರಲ್ಲಿ ಅವ್ವ, ಅಮ್ಮ, ಅಕ್ಕ ವಾರ್ಗಿಕಗಳು ಬಳಕೆಯಾಗಿರುವುದು ತಿಳಿಯುತ್ತದೆ. ಕೊರಚ ಎಂಬ ಜಾತಿವಾಚಿಯೂ ಇವರ ಹೆಸರುಗಳಲ್ಲಿ ಕಂಡುಬರುತ್ತದೆ. ಇತ್ತೀಚೆಗೆ ಇದು ಕಡಿಮೆಯಾಗುತ್ತಿದೆ. ಹಾಗೆಯೇ ಮೂರನೇ, ತಲೆಮಾರಿನವರ ಹೆಸರುಗಳಲ್ಲಿ ಸಂಬಂಧವಾಚಿ ಹಾಗೂ ಜಾತಿವಾಚಿ ವಾರ್ಗಿಕಗಳು ಕಳಚಿಕೊಂಡಿವೆ.

**೩.೩.೩. ಲಂಬಾಣಿಗರು**

ಕರ್ನಾಟಕಕ್ಕೆ ವಲಸೆ ಬಂದಿರುವ ಹಲವು ಸಮುದಾಯಗಳಲ್ಲಿ 'ಲಂಬಾಣಿ' ಸಮುದಾಯವೂ ಒಂದಾಗಿದೆ. ಬಳ್ಳಾರಿ ಪರಿಸರದಲ್ಲಿಯ ಹರಪನಹಳ್ಳಿ, ಹೂವಿನಹಡಗಲಿ ತಾಲೂಕುಗಳಲ್ಲಿ ಹೆಚ್ಚಾಗಿ ಲಂಬಾಣಿ ಸಮುದಾಯದ ತಾಂಡಾಗಳು ಇರುವುದನ್ನು ಕಾಣುತ್ತೇವೆ. ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಸಿರುಗುಪ್ಪ, ಬಳ್ಳಾರಿ, ಗಂಗಾವತಿ, ಕೊಪ್ಪಳದಂತಹ ತಾಲೂಕುಗಳಲ್ಲಿ ತಾಂಡಾಗಳು ಅಲ್ಲಲ್ಲಿ ಕಂಡುಬರುತ್ತವೆ. ಕನ್ನಡ ಸಂಸ್ಕೃತಿಗೆ, ಭಾಷಾ ಪರಿಸರಕ್ಕೆ, ಇದು ಹೊರಗಿನ ಸಮುದಾಯ ವಾಗಿರುವುದರಿಂದ, ಇವರಲ್ಲಿನ ವ್ಯಕ್ತಿನಾಮಗಳು ಭಿನ್ನವಾಗಿರುವುದನ್ನು ಮುಂದೆ ನೋಡಬಹುದು.

ಲಂಬಾಣಿ ಸಮುದಾಯವು 'ಸೇವಾಲಾಲ'ರನ್ನು ವಿಶೇಷವಾಗಿ ಪೂಜೆ ಮಾಡುತ್ತಾರೆ. ಇನ್ನುಳಿದಂತೆ ಕಾಳಮ್ಮ, ಮಾಯಮ್ಮ, ದುರುಗಮ್ಮನಂತಹ ಸ್ತ್ರೀ ದೇವತೆಗಳನ್ನು ಬಳ್ಳಾರಿ ಪರಿಸರದಲ್ಲಿರುವ ಉಜ್ಜಿನಿಯ ಮರುಳಸಿದ್ಧೇಶ್ವರ, ಕೊಟ್ಟೂರಿನ ಕೊಟ್ರೇಶ, ನಾಯಕನಹಟ್ಟಿಯ ತಿಪ್ಪೇಸ್ವಾಮಿ, ಕುರುಗೋಡಿನ ಬಸವಣ್ಣ ಇನ್ನೂ ಅನೇಕ ದೈವಗಳನ್ನು ಪೂಜಿಸುತ್ತಾರೆ. ವಿವಾಹ ಮತ್ತು ಇನ್ನಿತರ ಕಾರ್ಯಕ್ರಮಗಳಲ್ಲಿ ಅವರದೇಯಾದಂತಹ ಸಂಸ್ಕೃತಿಯಿದೆ. ತಲೆಮಾರುಗಳಲ್ಲಿ ಬಳಕೆಯಾಗಿರುವ ಲಂಬಾಣಿ ಸಮುದಾಯದ ಹೆಸರುಗಳನ್ನು ಈ ಕೆಳಗಿನಂತೆ ಮಾದರಿಗಾಗಿ ನೋಡಲಾಗಿದೆ.

**ಪುರುಷರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ದೇವ್ಲಾನಾಯ್ಕ | ಕೊಟ್ರೇಶ ನಾಯ್ಕ | ಲವ |

| | | |
|---|---|---|
| ಸೇವಾಲಾಲ್‌ನಾಯ್ಕ | ನಾಗರಾಜ | ಗಾಳ್ಯಾನಾಯ್ಕ |
| ಪಕ್ಕೀರ್‌ನಾಯ್ಕ | ಲಕ್ಷ್ಮಣನಾಯ್ಕ | ಸಂತೋಷ್ |
| ರಾಮಾನಾಯ್ಕ | ನಾಗೇಂದ್ರನಾಯ್ಕ | ಪ್ರದೀಪ್ |
| ಪಾಂಡುನಾಯ್ಕ | ಹನುಮನಾಯ್ಕ | ಕೊಟ್ರೇಶ್ |
| ಪ್ರೇಮ್ಯಾನಾಯ್ಕ | ರವಿನಾಯ್ಕ | ತಿಪ್ಪೇಶ್ |
| ಷಣ್ಮುಖ ನಾಯ್ಕ | ಭೀಮಾನಾಯ್ಕ | ಕುಮಾರ್ |
| ಕೂಬ್ಯಾನಾಯ್ಕ | ಧರ್ಮನಾಯ್ಕ | ಮೋಹನ್ |
| ಪೀರ್ಯಾನಾಯ್ಕ | ಶಂಕರನಾಯ್ಕ | ಚಂದ್ರು |
| ಕುಬೇರನಾಯ್ಕ | ನೇಮಿರಾಜ್‌ನಾಯ್ಕ | ಸುರೇಶ |

**ಸ್ತ್ರೀಯರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ಲಕ್ಷ್ಮಿಬಾಯಿ | ಸಕ್ರಿಬಾಯಿ | ರೋಜಾಬಾಯಿ |
| ಸುಶೀಲಬಾಯಿ | ಸರಸ್ವತಿ | ಗೀತಾಬಾಯಿ |
| ಸೇವ್ಯಾಬಾಯಿ | ಪಾರ್ವತಿ | ಅನಿತ |
| ವಾಲ್ಕಿಬಾಯಿ | ರುಕ್ಮಿಣಿಬಾಯಿ | ಅಂಕಿತ |
| ಸುಮಂಗಲಬಾಯಿ | ಚಂದ್ರಿಬಾಯಿ | ಉಮಾ |
| ಮಂಗ್ಲಿಬಾಯಿ | ದೀಪಾಬಾಯಿ | ಸಿಂಚನ |
| ತೋಳ್ಜಿಬಾಯಿ | ದುರ್ಗಾಬಾಯಿ | ಹರ್ಷಿತಾ |
| ಪೀಠಿಬಾಯಿ | ಅಂಬಾಬಾಯಿ | ಮಂಜುಳ |
| ಹೇಮ್ಲಿಬಾಯಿ | ರುಕ್ಮಿಣಿಬಾಯಿ | ಸ್ನೇಹ |
| ಸಂಕಲಾಬಾಯಿ | ಗೌರಿಬಾಯಿ | ಪೂರ್ವಿ |

ಮೇಲಿನ ಪಟ್ಟಿಗಳಲ್ಲಿರುವ ಹೆಸರುಗಳನ್ನು ಗಮನಿಸಿದಾಗ, ಪುರುಷರ ಹೆಸರುಗಳಲ್ಲಿ ರಾಮ, ಭೀಮ, ಧರ್ಮರಾಯರಿಗೆ ಸಂಬಂಧಿಸಿದಂತ ಹೆಸರುಗಳನ್ನು ಅನುಸರಿಸಿದ್ದಾರೆ. ಹಾಗೇ ಆ ಸಮುದಾಯದ ದೈವ ಮತ್ತು ಪ್ರಾದೇಶಿಕ ದೈವದ ಹೆಸರುಗಳನ್ನು ಇಟ್ಟುಕೊಂಡಿದ್ದಾರೆ. ಮೂರನೇ ತಲೆಮಾರಿನಲ್ಲಿ ವಾರ್ಗಿಕವಾದ 'ಬಾಯಿ' ಎಂಬ ಪದವು ಕಳಚಿಕೊಂಡಿರುವುದನ್ನು ನೋಡುತ್ತೇವೆ. ಸ್ತ್ರೀಯರ

ಹೆಸರುಗಳಲ್ಲಿಯೂ ಒಂದು ಮತ್ತು ಎರಡನೇ ತಲೆಮಾರಿನವರ ಹೆಸರುಗಳಲ್ಲಿ ದೈವಮೂಲದ ಹೆಸರುಗಳನ್ನು ಕಾಣಬಹುದಾಗಿದೆ. ಮೂರನೇ ತಲೆಮಾರಿನ ಹೆಸರುಗಳಲ್ಲಿ ದೈವಮೂಲದ ಹೆಸರುಗಳು ಕಡಿಮೆಯಾಗಿದೆ.

'ಬಾಯಿ' ಎಂಬ ವಾರ್ಗಿಕವು ಮೊದಲ ಮತ್ತು ಎರಡನೇ ತಲೆಮಾರಿನ ಪುರುಷ ಮತ್ತು ಸ್ತ್ರೀಯರ ಹೆಸರುಗಳಲ್ಲಿ ಕಾಣಬಹುದು. ಮೂರನೇ ತಲೆಮಾರಿನವರಲ್ಲಿ ಕ್ರಮೇಣ ಕಡಿಮೆಯಾಗಿದೆ. ಸಂಬಂಧವಾಚಿಗಳಾದ ಅಪ್ಪ, ಅಣ್ಣ, ಅಮ್ಮ, ಬಾಯಿ ಇತ್ತೀಚಿಗೆ ಕಡಿಮೆಯಾಗಿದೆ. ಇತ್ತೀಚಿಗೆ 'ಸಿಂಗ್' ಎಂಬುದು ಹೆಸರಿನ ಉತ್ತರಭಾಗದಲ್ಲಿ ಕಂಡುಬರುತ್ತದೆ.

**೫.೫.೬. ಮಾದಿಗರು**

ಮಾದಿಗ ಸಮುದಾಯವು ಸಾಮಾಜಿಕವಾಗಿ ಹಿಂದುಳಿದ ಸಮುದಾಯವಾಗಿದೆ. ಮೊದಲು ಮಾದಿಗ, ಹರಿಜನ ಎಂಬ ವಾರ್ಗಿಕಗಳನ್ನು ಹೆಸರುಗಳಲ್ಲಿ ಕಾಣುತ್ತಿದ್ದೆವು. ಬರುಬರುತ್ತ ಈ ವಾರ್ಗಿಕಗಳು ಕಾಣಿಸಿಕೊಳ್ಳದಾದವು. ಇತ್ತೀಚಿಗೆ ಮತ್ತೆ ಈ ವಾರ್ಗಿಕಗಳು ಕಾಣಿಸಿಕೊಳ್ಳುತ್ತಿವೆ. ಸಾರ್ವಜನಿಕವಾಗಿ ಜಾತಿಯ ಹೆಸರನ್ನು ಹೇಳಿಕೊಳ್ಳುವುದು ಅವಮಾನದ ಸಂಗತಿ ಎಂಬುದಕ್ಕಿಂತ ಇಂದು, ಜಾತಿಯ ಹೆಸರನ್ನು ಹೇಳಿಕೊಳ್ಳುವುದು ಗೌರವ, ಪ್ರತಿಷ್ಠೆ ಅಭಿಮಾನದ ಸಂಕೇತವಾಗಿದೆ. ಆದ್ದರಿಂದ ಯಾವುದೇ ಮುಜಗರಗಳಿಲ್ಲದೆ ಇಂದು ಜಾತಿಯ ಹೆಸರನ್ನು ಸೂಚಿಸಿಕೊಳ್ಳುತ್ತಾರೆ. ಈ ಬಗೆಗೆ ಅವರನ್ನು ವಿಚಾರಿಸಿದಾಗ ಜಾತಿಯನ್ನು ಗುರುತಿಸಿಕೊಂಡಾಗ ಅನೇಕ ಸೌಲಭ್ಯಗಳು ದೊರೆಯುತ್ತವೆ ಎಂಬ ಕಾರಣವನ್ನು ಕೊಡುತ್ತಾರೆ. ಈ ಸಮುದಾಯವು ವಿವಾಹ, ಹಬ್ಬ, ಇನ್ನಿತರ ಕಾರ್ಯಗಳಲ್ಲಿ ಇವರದೇ ಆದತಂಹ ಪೂಜಾ ನಿಯಮಗಳನ್ನು ಪಾಲಿಸುತ್ತಾರೆ. ಮೊದಲ ದಿನಗಳಲ್ಲಿ ಚಮ್ಮಾರಿಕೆ, ತಳವಾರಿಕೆ, ಮನೆ ಒಕ್ಕಲು ಎಂಬ ಕೆಲಸಗಳನ್ನು ಮಾಡಿಕೊಂಡಿದ್ದರು. ಈಗ ಆ ಕೆಲಸಗಳನ್ನು ಕ್ರಮೇಣವಾಗಿ ಬಿಡತೊಡಗಿದ್ದಾರೆ. ಆದರೂ ಕೂಡಾ ಹಳ್ಳಿಗಳಲ್ಲಿ ಅಲ್ಲಲ್ಲಿ ಈ ಕೆಲಸಗಳನ್ನು ಮಾಡಿಕೊಂಡಿದ್ದಾರೆ. ಆರ್ಥಿಕವಾಗಿ ಅಭಿವೃದ್ಧಿಯಾಗದ ಈ ಸಮುದಾಯದಲ್ಲಿ ಸಾಕ್ಷರತೆ ಇನ್ನೂ ಕುಂಠಿತವಾಗಿಯೇ ಇದೆ ಎಂಬುದನ್ನು ಬಳ್ಳಾರಿ ಪರಿಸರದಲ್ಲಿ ಗಮನಿಸಲಾಗಿದೆ.

ಈ ಸಮುದಾಯವು ಅನೇಕ ದೈವಗಳನ್ನು ಪೂಜಿಸುತ್ತಾರೆ. ದುರುಗವ್ವ, ಸಾರೆವ್ವ, ಲೆಕ್ಕವ್ವ, ಮಾರವ್ವನಂತಹ ಸ್ತ್ರೀ ದೇವತೆಗಳನ್ನು ಮತ್ತು ಪ್ರಾದೇಶಿಕವಾಗಿ ಪ್ರಸಿದ್ಧಿಯಾದಂತಹ ದೈವಗಳನ್ನು ಪೂಜೆ ಮಾಡುತ್ತಾರೆ. ಈ ದೈವಗಳು ತಮ್ಮ ಹೆಸರುಗಳ ಮೇಲೆ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ. ತಲೆಮಾರುಗಳಲ್ಲಿ ಬಳಕೆಯಾಗಿರುವ ಕೆಲವು ಹೆಸರುಗಳನ್ನು ಮಾದರಿಗಾಗಿ ಈ ಕೆಳಗಿನಂತೆ ಗಮನಿಸಬಹುದು.

**ಪುರುಷರಲ್ಲಿ**

| **ತಲೆಮಾರು-೧** | **ತಲೆಮಾರು-೨** | **ತಲೆಮಾರು-೩** |
|---|---|---|
| ಮಾದಿಗರ ಲಕ್ಕಪ್ಪ | ಎಚ್. ನಾಗೇಂದ್ರಪ್ಪ | ಮನೋಜ್‌ಮಾದಿಗ |

| | | |
|---|---|---|
| ಮಾದಿಕರ ಲಕ್ಷ್ಮಪ್ಪ | ಸಾರೆಪ್ಪ | ಹೆಚ್. ಸುರೇಂದ್ರ |
| ಹರಿಜನ ದುರುಗಪ್ಪ | ಎ.ಕೆ. ಹುಲುಗಪ್ಪ | ಪ್ರಕಾಶ್ ಎ.ಕೆ. |
| ಸಾರೆಪ್ಪ | ಎ.ಕೆ. ಪಾಲಣ್ಣ | ಪ್ರದೀಪ್ |
| ಹನುಮಂತ ಮಾದಿಗ | ಯಂಕಪ್ಪ ಮಾದಿಗ | ಕಿರಣ್ |
| ಭೀಮಜ್ಜ | ಉಡುಸಪ್ಪ | ಜಗದೀಶ |
| ಮಾರೆಪ್ಪ | ಕೊಟ್ರಪ್ಪ | ಉಮೇಶ |
| ಚಿನ್ನಪ್ಪ | ಕೊಟ್ರಪ್ಪ | ಹುಲಿಗೇಶ |
| ಸುಂಕಲಪ್ಪ | ಕುಮಾರಪ್ಪ | ಮಾರೇಶ್ |
| ನಾಗಪ್ಪ ಮಾದಿಗ | ಗಂಡೆಪ್ಪ | ದುರುಗೇಶ್ |

**ಸ್ತ್ರೀಯರಲ್ಲಿ**

| ತಲೆಮಾರು–೧ | ತಲೆಮಾರು–೨ | ತಲೆಮಾರು–೩ |
|---|---|---|
| ಮಾದಿಗರ ಹನುಮವ್ವ | ಲಕ್ಕವ್ವ | ಶ್ವೇತಾ ಎಚ್. |
| ಮಾದರ ಸಾರಜ್ಜಿ | ಮಂಜವ್ವ | ಪಲ್ಲವಿ ಮಾದರ್ |
| ದುರುಗಮ್ಮ | ಗಂಗಮ್ಮ | ಸ್ನೇಹ |
| ಮಾರೆಮ್ಮ | ಪಾರ್ವತಿ | ಮಧುರ ಎಚ್. |
| ಕರಿಯಮ್ಮ | ಅಂಬಮ್ಮ | ಸಮಂತ |
| ಉಡುಸಲಮ್ಮ | ಪಕ್ಕೀರಮ್ಮ | ಎಚ್. ಸಂಜನಾ |
| ಬಳ್ಳಾರಿ ದುರುಗಮ್ಮ | ಮರಿಯಮ್ಮ | ಸುಮ |
| ಮಾಯಮ್ಮ ಮಾದರ್ | ಕೆಂಚಕ್ಕ | ಎಚ್. ಮಂಜುಳ |
| ಕಲ್ಲವ್ವ | ದ್ಯಾಮವ್ವ | ಎ.ಕೆ. ರೇಖಾ |
| ಗಾಳೆವ್ವ | ಗಾಳೆಮ್ಮ | ಎಚ್. ಪದ್ಮ |

ಈ ಮೇಲಿನ ಪುರುಷ ಮತ್ತು ಸ್ತ್ರೀಯರ ಹೆಸರುಗಳನ್ನು ಗಮನಿಸಿದಾಗ, ಮೊದಲೆರಡು ತಲೆಮಾರುಗಳಲ್ಲಿ ದೈವಮೂಲದ ಹೆಸರುಗಳನ್ನು ಹೆಚ್ಚಾಗಿ ಇಟ್ಟುಕೊಂಡಿರುವುದನ್ನು ನೋಡಬಹುದು. ಹಾಗೂ ವಾರ್ಗಿಕಗಳಾದ ಹರಿಜನ, ಮಾದಿಗ ಪದಗಳನ್ನು ತಮ್ಮ ಹೆಸರಿನ ಮುಂದೆ ಅಥವಾ ಹಿಂದೆ ಬಳಸಿರುವುದನ್ನು ಕಾಣುತ್ತೇವೆ. ಅವುಗಳನ್ನು ಇಂಗ್ಲಿಷ್ ಅಕ್ಷರಗಳಿಂದಲೂ ಬಳಸಲಾಗಿದೆ.

ಒಂದು ಮತ್ತು ಎರಡನೇ ತಲೆಮಾರುಗಳಲ್ಲಿ ಅಪ್ಪ, ಅಣ್ಣ, ಅವ್ವ, ಅಕ್ಕ ಎಂಬ ಸಂಬಂಧವಾಚಿಗಳನ್ನು ಕಾಣಬಹುದು. ಮೂರನೇ ತಲೆಮಾರಿನಲ್ಲಿ ಈ ಸಂಬಂಧವಾಚಿ ವಾರ್ಗಿಕಗಳು ಇಲ್ಲವೆನ್ನುವಷ್ಟು ಕಡಿಮೆಯಾಗಿವೆ. ಹಾಗೂ ಈ ತಲೆಮಾರಿನಲ್ಲಿ ಅಲ್ಲೊಂದು ಇಲ್ಲೊಂದು ದೈವಮೂಲದ ಹೆಸರುಗಳನ್ನು ಕಾಣಬಹುದು. ಪ್ರಸ್ತುತ ಹೊಸ ರೀತಿಯ ಹೆಸರುಗಳಿಗೆ ಜನರು ಗಮನಹರಿಸುವುದನ್ನು ಕಾಣುತ್ತೇವೆ.

### ೫.೫.೭. ಬ್ರಾಹ್ಮಣರು

ಕನ್ನಡ ನಾಡಿನಲ್ಲಿ ಈ ಸಮುದಾಯದವರು ಅಲ್ಪಸಂಖ್ಯಾತರಾಗಿದ್ದು, ದೇವಸ್ಥಾನವಿರುವ ಕಡೆ ಇವರು ಹೆಚ್ಚಾಗಿ ನೆಲೆಸಿರುವುದನ್ನು ಗಮನಿಸಬಹುದು. ಇವರು ಭಾರತಕ್ಕೆ ಆಗಮಿಸಿದ ಆರ್ಯಮೂಲ ಸಮುದಾಯದವರೆಂದು ಹೇಳಲಾಗುತ್ತದೆ. ಇವರು ಪ್ರಕೃತಿ ಮತ್ತು ಶಕ್ತಿ ಆರಾಧಕರಾಗಿದ್ದರು ಎಂಬುದು ಚರಿತ್ರೆಯಿಂದ ತಿಳಿಯುತ್ತದೆ. ಉತ್ತರ ಭಾರತದಲ್ಲಿ ಪ್ರಬಲರಾಗಿದ್ದ ದ್ರಾವಿಡರು ಬರುಬರುತ್ತಾ ದ್ರಾವಿಡ ಪ್ರದೇಶಗಳಿಗೂ ಅವರು ಲಗ್ಗೆ ಹಾಕಿದರು. ಇದರಿಂದಾಗಿ ದ್ರಾವಿಡ ಮೂಲ ಸಂಸ್ಕೃತಿಯ ಮೇಲೆ ಸಾಕಷ್ಟು ಪ್ರಭಾವ ಬೀರಿತು. ಬ್ರಾಹ್ಮಣ ಸಮುದಾಯದಲ್ಲಿಯೇ ಮುಂದೆ ಎರಡು ಕವಲುಗಳಾದವು. ಒಂದು ಶೈವ ಬ್ರಾಹ್ಮಣ ಮತ್ತೊಂದು ವೈಷ್ಣವ ಬ್ರಾಹ್ಮಣ. ಈ ಸಮುದಾಯವು ದ್ರಾವಿಡ ದೇಶೀ ದೈವಗಳಾದ ಮಾರಿ, ದುರ್ಗಿ ಮುಂತಾದ ಶಕ್ತಿದೇವತೆಗಳನ್ನು ಸಂಸ್ಕೃತೀಕರಣಗೊಳಿಸುವ ಮೂಲಕ ಅವುಗಳನ್ನು ತಮ್ಮ ಹೆಸರುಗಳಂತೆ ಬದಲಿಸಿಕೊಂಡಿರುವುದು ತಿಳಿಯುತ್ತದೆ. ಉದಾಹರಣೆಗೆ ಮಾರಿ–ಮಾರಿಕಾಂಬ, ದುಗಿ–ಕನಕದುರ್ಗಾಂಬ, ಅಂಬಮ್ಮ–ಅಂಬಾಭವಾನಿ ಮುಂತಾದವು.

ಶಿವ, ವಿಷ್ಣು, ದ್ರಾವಿಡ ದೇಶೀ ದೈವಗಳನ್ನು ಪೂಜಿಸುವ ಇವರು ತಮ್ಮ ಸಮುದಾಯದ ವ್ಯಕ್ತಿನಾಮಗಳಲ್ಲಿಯೂ ಪ್ರಭಾವ ಬೀರಿರುವುದನ್ನು ಕಾಣಬಹುದು. ಮಾದರಿಗಾಗಿ ತಲೆಮಾರುಗಳ ಪಟ್ಟಿಯಲ್ಲಿ ಈ ಸಮುದಾಯದ ಹೆಸರುಗಳನ್ನು ಗಮನಿಸಬಹುದು.

**ಪುರುಷರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ಭೀಮರಾವ್ | ಸತ್ಯನಾರಾಯಣ | ದೀಪಕ್ |
| ನಾರಾಯಣರಾವ್ | ನಾರಾಯಣಸ್ವಾಮಿ | ಸ್ಕಂದ |
| ಜಗನ್ನಾಥರಾವ್ | ಶ್ರೀಧರಮೂರ್ತಿ | ವಿನೋದ್ |
| ಸಂಜೀವಮೂರ್ತಿ | ಗುರುರಾಜರಾವ್ | ವಿನಯ್ |
| ವಾಸುದೇವರಾವ್ | ಶ್ರೀನಿವಾಸ | ಅಕ್ಷಯ್ |
| ವೇಣುಗೋಪಾಲ ಆಚಾರ್ | ವೇದಮೂರ್ತಿ | ವೈಭವ್ |
| ರಾಮಚಂದ್ರ ಶರ್ಮ | ಕ್ರಿಷ್ಣಪ್ಪ | ಗುಣರಾಜ್ ಪೂಜಾರ್ |

| | | |
|---|---|---|
| ಗೋಪಾಲಭಟ್ಟ | ವಾಸುದೇವನ್ | ಸುಮಂತ್ |
| ಹನುಮಂತ ಜೋಯಿಸ | ಕೃಷ್ಣಮೂರ್ತಿ ಜೋಯಿಸ | ಯಶವಂತ |
| ಶೇಷಗಿರಿ ಶಾಸ್ತ್ರಿ | ಗೋಪಾಲಚಾರ್ಯ | ರಂಜಿತ್ |

**ಸ್ತ್ರೀಯರಲ್ಲಿ**

| ತಲೆಮಾರು-೧ | ತಲೆಮಾರು-೨ | ತಲೆಮಾರು-೩ |
|---|---|---|
| ಪದ್ಮಾವತಿ ಬಾಯಿ | ಭವಾನಿ | ವತ್ಸಲಾ |
| ಲಕ್ಷ್ಮೀದೇವಿ ಬಾಯಿ | ಸೀತಾಲಕ್ಷ್ಮಿ | ಯಶಸ್ವಿನಿ |
| ರಿಂದಮ್ಮ | ಜಲಜಾಕ್ಷಿ | ದಿವ್ಯ |
| ಇಂದ್ರಮ್ಮ | ಗಾಯಿತ್ರಿ | ಭಾರತಿ |
| ವೀಣಾ | ಯಶೋಧ | ವಿಜಯಲಕ್ಷ್ಮಿ |
| ಸುಶೀಲ | ಸೌಮ್ಯ | ಸೌಮ್ಯ |
| ರಂಗಮ್ಮ | ಲಲಿತಮ್ಮ | ಸುಪ್ರಜ |
| ಕಮಲಮ್ಮ | ರುಕ್ಮಣಮ್ಮ | ಸ್ವರ್ಣ |
| ಸೀತಾಬಾಯಿ | ರಾಧಮ್ಮ | ಯಶೋಧ |
| ತುಳಸೀಬಾಯಿ | ಕೃತಿಬಾಯಿ | ಲಕ್ಷ್ಮಿ |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ, ಕಾಲಾಂತರದಲ್ಲಿ ಬ್ರಾಹ್ಮಣ ಸಮುದಾಯದ ಹೆಸರಿನ ಬದಲಾವಣೆಗಳು ತಿಳಿಯುತ್ತವೆ. ಈ ಬದಲಾವಣೆಗಳು ಆಯಾ ಕಾಲಕ್ಕೆ ಆ ಸಮುದಾಯದ ಪ್ರತಿಕ್ರಿಯಿಸಿದ ಬಗೆಯನ್ನು ಸೂಚಿಸುತ್ತದೆ.

ಮೊದಲ ಹಾಗೂ ಎರಡನೇ ತಲೆಮಾರಿನಲ್ಲಿ ದೈವಮೂಲದ ಹೆಸರುಗಳ ಜೊತೆಗೆ ವಾರ್ಗಿಕಗಳಾದ ರಾವ್, ಜೋಯಿಸ್, ಆಚಾರ್, ಭಟ್ಟ, ಶಾಸ್ತ್ರಿ ಎಂಬವುಗಳನ್ನು ನೋಡಬಹುದು. ಹಾಗೆ ಸ್ತ್ರೀಯರ ಹೆಸರುಗಳಲ್ಲಿ ಬಾಯಿ ವಾರ್ಗಿಕವನ್ನು ನೋಡಬಹುದು. ಮೂರನೆಯ ತಲೆಮಾರಿನ ಪುರುಷ ಮತ್ತು ಸ್ತ್ರೀಯರ ಹೆಸರುಗಳಲ್ಲಿ ಆಧುನಿಕ ರೀತಿಯ ಹೆಸರುಗಳನ್ನು ಕಾಣಬಹುದಾಗಿದೆ. ಹಾಗೂ ಈ ತಲೆಮಾರಿನ ಹೆಸರುಗಳಲ್ಲಿ ಸಂಬಂಧವಾಚಿ ವಾರ್ಗಿಕಗಳು ಬಹಳ ಕಡಿಮೆ ಹಾಗೂ ವೃತ್ತಿವಾಚಿ ವಾರ್ಗಿಕಗಳೂ ಕಡಿಮೆಯಾಗಿವೆ.

ಸಂಬಂಧವಾಚಿ ವಾರ್ಗಿಕಗಳು ಪುರುಷರಲ್ಲಿ: ಅಪ್ಪ – ರಾಮಚಂದ್ರಪ್ಪ ಜೋಯಿಸ

ಸ್ತ್ರೀಯರಲ್ಲಿ: ಅಮ್ಮ-ರಂಗಮ್ಮ, ಕಮಲಮ್ಮ

ಸಂಬಂಧವಾಚಿ, ಹಾಗೂ ಜಾತಿ/ವಾಚಿ ವಾಗಿಕಗಳು ಹೆಚ್ಚಾಗಿ ಕಾಣಿಸಿಕೊಳ್ಳುವುದಿಲ್ಲ. ವೃತ್ತಿವಾಚಿ ವಾರ್ಗಿಕಗಳಾದ ಆಚಾರ್ಯ, ಜೋಯಿಸ, ಭಟ್ಟ ಇಂತಹ ಪದಗಳು ಕಾಣಿಸಿಕೊಳ್ಳುತ್ತವೆ.

**೫.೫.೮. ಲಿಂಗಾಯತರು**

ಕರ್ನಾಟಕದ ಬಹುಸಂಖ್ಯಾತ ಸಮುದಾಯಗಳಲ್ಲಿ ಲಿಂಗಾಯತ ಸಮುದಾಯವೂ ಒಂದಾಗಿದೆ. ಇವರು ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ಸಬಲರಾಗಿದ್ದು ಕರ್ನಾಟಕದಾದ್ಯಂತ ನೆಲೆಸಿದ್ದಾರೆ. ಮೂಲತಃ ಇವರು ಲಿಂಗಾರಾಧಕರಾಗಿದ್ದು, ಏಕದೇವೋಪಾಸನೆಯನ್ನು ಒಪ್ಪಿಕೊಂಡವರಾಗಿದ್ದಾರೆ. ಈ ಸಮುದಾಯದಲ್ಲಿ ಎರಡು ಪಂಗಡಗಳನ್ನು ಕಾಣಬಹುದು. ಒಂದು ಶೈವಧರ್ಮ (ಶಿವಾರಾಧಕರು) ಇನ್ನೊಂದು ಬಸವಣ್ಣನಿಂದ ಸ್ಥಾಪಿತವಾದ ವೀರಶೈವಧರ್ಮ. ಇಂದು ಲಿಂಗಾಯತರನ್ನು ವೀರಶೈವರೆಂದು ಒಂದು ದೃಷ್ಟಿಯಲ್ಲಿ ನೋಡಲಾಗುತ್ತದೆ. ಇವರಲ್ಲಿ ಅನೇಕ ಉಪ ಪಂಗಡಗಳಿವೆ. ಪಂಚಚಾರ, ಸಾಧು, ಬಣಜಿಗ, ಗಾಣಿಗ, ಕುಂಬಾಳ, ಮಡಿವಾಳ ಹೀಗೆ ಅನೇಕ ಉಪಪಂಗಡಗಳಿವೆ. ಇವರು ಒಂದೇ ಸಂಸ್ಕೃತಿಯನ್ನು ಅನುಸರಿಸುತ್ತಾರೆ. ಈ ಸಮುದಾಯದವರಿಗೆ ಈಶ್ವರ, ಬಸವ ಮುಂತಾದ ದೇವರು ಮತ್ತು ಶರಣರು ಆರಾಧ್ಯದೈವವಾಗಿದ್ದು, ಅವರ ಹೆಸರುಗಳು ಕೂಡಾ ಈ ದೇವರ ಪ್ರೇರಣೆಯನ್ನು ಪಡೆದುಕೊಂಡಿವೆ. ಅಲ್ಲದೇ ಶ್ರೀಶೈಲ, ಉಜ್ಜಯಿನಿ, ಕಾಶಿ, ಕೇದಾರ, ಕಲ್ಯಾಣ ಈ ಕ್ಷೇತ್ರಗಳು ಇವರಿಗೆ ಪವಿತ್ರ ಕ್ಷೇತ್ರಗಳಾಗಿವೆ. ಶಿವ, ಪಾರ್ವತಿ ಮತ್ತು ಶಿವನ ಗಣಂಗಳು ಮತ್ತು ಅವರ ವಿವಿಧ ನಾಮಗಳು ಲಿಂಗಾಯಿತರಿಗೆ ಹೆಸರುಗಳಾಗಿರುವುದೇ ಹೆಚ್ಚು. ಹಾಗೆಯೇ ಪ್ರಾದೇಶಿಕ ದೈವಗಳಾದ ಕೊಟ್ಟೂರೇಶ್ವರ, ತಿಪ್ಪೇಸ್ವಾಮಿ, ಎರ್ರಿತಾತ, ಕುರುಗೋಡು, ಬಸವೇಶ್ವರ, ಮಠದ ಸ್ವಾಮೀಜಿಯ ಹೆಸರುಗಳು ಇವರಿಗೆ ಪ್ರೇರಣೆಯಾಗಿವೆ.

ಲಿಂಗಾಯಿತರು ಹಿಂದೆ ಗ್ರಾಮಗಳ ಗೌಡಿಕೆಯನ್ನು ನಡೆಸಿರುವುದು ಶಾಸನಗಳಿಂದ ತಿಳಿಯುತ್ತದೆ. ಗೌಡ ಎಂಬುದು ಒಂದು ವೃತ್ತಿ ಆದರೂ ಇದು ಹೆಚ್ಚು ಲಿಂಗಾಯತ ಸಮುದಾಯವನ್ನು ಪ್ರತಿನಿಧಿಸಿರುವಂತೆ ಕಾಣುತ್ತದೆ. ಉತ್ತರ ಕರ್ನಾಟಕದಾದ್ಯಂತ ಹೆಚ್ಚಾಗಿ ಗೌಡರೆಂದರೆ ಲಿಂಗಾಯಿತರೇ ಆಗಿರುವುದನ್ನು ಗಮನಿಸಬಹುದು. ಆಧುನಿಕವಾಗಿ ಲಿಂಗಾಯಿತರು ತಮ್ಮ ಹೆಸರುಗಳ ನಿರ್ದೇಶನದಲ್ಲಿ ಸ್ಥಿತ್ಯಂತರಕ್ಕೆ ಒಳಗಾಗಿರುವುದನ್ನು ಕಂಡುಬರುತ್ತದೆ. ಹೆಚ್ಚಾಗಿ ಭಾವನಾಮಗಳು, ಸಂಸ್ಕೃತೀಕರಣ ಹೆಸರುಗಳು ಪ್ರಭಾವ ಬೀರಿರುವುದನ್ನು ಕಾಣಬಹುದು. ಬಳ್ಳಾರಿ ಪರಿಸರದ ಲಿಂಗಾಯತ ಸಮುದಾಯದ ತಲೆಮಾರುಗಳಲ್ಲಿ ಬಳಕೆಯಾಗಿರುವ ಕೆಲವು ಹೆಸರುಗಳನ್ನು ಮೂರು ತಲೆಮಾರುಗಳಲ್ಲಿ ಮಾದರಿಗಾಗಿ ಗಮನಿಸಬಹುದು.

**ಪುರುಷರಲ್ಲಿ**

| **ತಲೆಮಾರು–೧** | **ತಲೆಮಾರು–೨** | **ತಲೆಮಾರು–೩** |
|---|---|---|
| ಮಹಾದೇವಪ್ಪ | ಚಂದ್ರಪ್ಪ | ಚೇತನ್ |
| ಹಾಲಸ್ವಾಮಿ | ವಿರುಪಾಕ್ಷಯ್ಯ | ಕುಮಾರ್ |

| | | |
|---|---|---|
| ಬಸವರಾಧ್ಯ | ವಪ್ಪತ್ತಯ್ಯ | ಸಂಪತ್ |
| ಸಿದ್ದನಗೌಡ ಪಾಟೀಲ | ಶರಣಯ್ಯ | ಪ್ರದೀಪ್ |
| ರೇವಣಸಿದ್ದಯ್ಯ | ನಾಗಲಿಂಗಸ್ವಾಮಿ | ಕೊಟ್ರೇಶ್ |
| ತಿಪ್ಪೇಗೌಡ | ರಾಮಲಿಂಗಪ್ಪ | ಯರಿಸ್ವಾಮಿ |
| ಸೋಮಶೇಖರಗೌಡ | ಗುರುಸಿದ್ದಪ್ಪ | ಬಸವರಾಜ |
| ವೀರಯ್ಯಸ್ವಾಮಿ | ಚನ್ನಬಸಪ್ಪ | ಶರಣ |
| ರುದ್ರಗೌಡ | ಕುರುಗೋಡಪ್ಪ | ಗವಿಸಿದ್ದೇಶ |
| ಬಸವರಾಧ್ಯ | ಶಿವಕುಮಾರೇಶ | ಸಿದ್ದೇಶ |

**ಸ್ತ್ರೀಯರಲ್ಲಿ**

| **ತಲೆಮಾರು-೧** | **ತಲೆಮಾರು-೨** | **ತಲೆಮಾರು-೩** |
|---|---|---|
| ಅಕ್ಕಮ್ಮ | ಶಕುಂತಲ | ಶಿಲ್ಪ |
| ಶರಣಮ್ಮ | ಪರ್ವತಿ | ಮೇಘನಾ |
| ಸಿದ್ದಮ್ಮ | ಸರಸ್ವತಿ | ಸುಹಾಸಿನಿ |
| ಬಸಮ್ಮ | ಶಿವಮ್ಮ | ಕಲ್ಪನಾ |
| ಕೊಟ್ರಬಸಮ್ಮ | ಸರಸ್ವತಿ | ಮಾಲಾ |
| ಈರಮ್ಮ | ರಾಧಮ್ಮ | ಅನಿತ |
| ಪಾರ್ವತಮ್ಮ | ಕಮಲಮ್ಮ | ವನಿತ |
| ತಿಪ್ಪಮ್ಮ | ಸುನಂದ | ಮೇಘರಾಣಿ |
| ರುದ್ರಮ್ಮ | ಲಕ್ಷ್ಮವ್ವ | ಶ್ಯಾಮಲ |
| ಗಂಗಮ್ಮ | ಸಾವಿತ್ರಮ್ಮ | ಅಮೃತ |

ಮೇಲಿನ ಪಟ್ಟಿಗಳಲ್ಲಿ ಹೆಸರುಗಳನ್ನು ಗಮನಿಸಿದಾಗ, ಒಂದು ಮತ್ತು ಎರಡನೇ ತಲೆಮಾರಿನ ಪಟ್ಟಿಗಳಲ್ಲಿ ದೈವಸಂಬಂಧಿ ಹೆಸರುಗಳನ್ನು ಹೆಚ್ಚಾಗಿ ಕಾಣುತ್ತೇವೆ. ಗೌಡ, ಪಾಟೀಲ ಮತ್ತು ಆರಾಧ್ಯ ಎಂಬ ವಾರ್ಗಿಕಗಳು ಈ ತಲೆಮಾರುಗಳ ಹೆಸರಿನಲ್ಲಿವೆ. ಒಂದು ಮತ್ತು ಎರಡನೇ ತಲೆಮಾರಿನ ಸ್ತ್ರೀಯರ ಹೆಸರುಗಳಲ್ಲಿ ದೈವಮೂಲದ ಹೆಸರುಗಳನ್ನು ಕಾಣುತ್ತೇವೆ. ಮೂರನೇ ತಲೆಮಾರಿನ ಪುರುಷ ಮತ್ತು ಸ್ತ್ರೀಯರ ಹೆಸರುಗಳಲ್ಲಿ ದೈವಮೂಲದ ಹೆಸರುಗಳಿರುವುದು ಬಹಳ ಕಡಿಮೆ.

ವಾರ್ಗಿಕಗಳ ವಿಚಾರಕ್ಕೆ ಬಂದಾಗ, ಸಂಬಂಧವಾಚಿ ವಾರ್ಗಿಕಗಳಾದ ಅಯ್ಯ, ಅಪ್ಪ, ಅಣ್ಣ, ವಾರ್ಗಿಕಗಳು ಒಂದು ಮತ್ತು ಎರಡನೇ ತಲೆಮಾರಿನಲ್ಲಿಯೂ ಕಡಿಮೆಯಾಗಿವೆ. ಸ್ತ್ರೀಯರ ಹೆಸರುಗಳಲ್ಲಿ ಅಮ್ಮ, ಸಂಬಂಧವಾಚಿ ವಾರ್ಗಿಕವು ಹೆಚ್ಚಾಗಿರುವುದನ್ನು ಕಾಣಬಹುದು.

**೫.೫.೯. ಮುಸ್ಲಿಮರು**

ವಿವಿಧ ಕಡೆಯಿಂದ ಕರ್ನಾಟಕಕ್ಕೆ ವಲಸೆಬಂದಿರುವ ಜನಾಂಗಗಳಲ್ಲಿ ಮುಸ್ಲಿಂ ಜನಾಂಗವು ಒಂದು. ಬೇರೆ ಬೇರೆ ಸಮುದಾಯಗಳು ಒಂದೇ ಪರಿಸರದಡಿಯಲ್ಲಿ ಬಿಡಿಯಾಗಿ ಕೂಡಿ ಬದುಕುತ್ತಿರುವ ನಮ್ಮ ಅವಿಭಕ್ತ ಸಮಾಜ ವ್ಯವಸ್ಥೆಯಲ್ಲಿ ಪ್ರತಿಯೊಂದು ಜನಾಂಗವೂ ಕೂಡಾ ವಿಶಿಷ್ಟವಾದಂತಹ ಸಂಸ್ಕೃತಿಯನ್ನು ಒಳಗೊಂಡಿದೆ. ಇಂಥ ಸಂದರ್ಭದಲ್ಲಿ ಒಂದು ಮತ್ತೊಂದರಿಂದ ಪ್ರಭಾವಿತವಾಗಿ ಸಾಂಸ್ಕೃತಿಕ ಮುಖಾಮುಖಿ ಏರ್ಪಡುವುದು ಮನುಷ್ಯ ಬದುಕಿನ ಪ್ರಕ್ರಿಯೆಯಲ್ಲಿ ಸ್ವಾಭಾವಿಕವಾದುದು.

ಪ್ರಪಂಚದ ಹಲವಾರು ರಾಷ್ಟ್ರಗಳಲ್ಲಿ ಮುಸ್ಲಿಂ ಜನಾಂಗವಿದೆ. ಅದರಂತೆ ಕರ್ನಾಟಕದಲ್ಲಿ ಇವರು ಅಲ್ಪಸಂಖ್ಯಾತರಾಗಿದ್ದಾರೆ. ಬಳ್ಳಾರಿ ಪರಿಸರದಲ್ಲಿ ಮುಸ್ಲಿಂರಿದ್ದು ಹಲವಾರು ದೈವಮೂಲದ ಹೆಸರುಗಳನ್ನು ಅವರು ಇಟ್ಟುಕೊಂಡಿರುವುದನ್ನು ನೋಡುತ್ತೇವೆ. ಈ ಸಮುದಾಯದವರು ಏಕದೇವೋಪಾಸಕರು 'ಅಲ್ಲಾನ' ಹೆಸರನ್ನು ಬಿಟ್ಟರೆ ಬೇರೆ ಹೆಸರನ್ನು ಇವರು ಹೇಳರು. ಕನ್ನಡ ಪರಿಸರದ ದೈವ ಸಮಾಜಕ್ಕಿಂತ ಇದು ಭಿನ್ನ ರೀತಿಯಲ್ಲಿದೆ. ಧಾರ್ಮಿಕ ಹಿನ್ನೆಲೆಗೆ ಸಂಬಂಧಿಸಿದಂತಹ ವ್ಯಕ್ತಿನಾಮಗಳನ್ನು ಇಲ್ಲಿ ಮಾದರಿಗಾಗಿ ನೋಡಲಾಗಿದೆ.

| **ಪುರುಷರ ಹೆಸರುಗಳು** | **ಸ್ತ್ರೀಯರ ಹೆಸರುಗಳು** |
|---|---|
| ಅಬ್ದುಲ್ ಮಾಲಿಕ್ | ಫಾತಿಮಾ |
| ಅಬ್ದುಲ್‌ಸಾಬ್ | ಆಯಿಷಾ |
| ಗಫೂರ್‌ಸಾಬ್ | ಜೈನಬ್ |
| ರೆಹಮಾನ್‌ಸಾಬ್ | ಖತೀಜಾ |
| ಮಹಮ್ಮದ್ ಸಲಾಂ | ಯುನಸ್‌ಸಲಾಂ |

ಮೇಲೆ ತಿಳಿಸಿದ ಪುರುಷರ ಹೆಸರುಗಳು ದೈವಮೂಲದವುಗಳಾಗಿವೆ. ಸ್ತ್ರೀಯರ ಹೆಸರುಗಳು ಪೈಗಂಬರ್ ಸಮಕಾಲೀನ ಅವರ ಕುಟುಂಬದವರ ಹೆಸರುಗಳಾಗಿವೆ. ಅವುಗಳನ್ನು ಅವರು ಭಕ್ತಿಯಿಂದ ಇಟ್ಟುಕೊಂಡಿದ್ದಾರೆ.

ಆಧುನಿಕತೆಯ ಪ್ರಭಾವದಿಂದಾಗಿ ಪ್ರಾಚೀನ ಹೆಸರುಗಳು ಕಾಲದಿಂದ ಕಾಲಕ್ಕೆ ಹಿಂದಕ್ಕೆ ಸರಿಯುತ್ತವೆ. ಚರಿತ್ರೆಯಲ್ಲಿ ಹೆಚ್ಚು ಪ್ರಸಿದ್ಧಿ ಪಡೆದಿರುವ 'ಹಸನ್' ಮತ್ತು ಹುಸೇನರ ಹೆಸರುಗಳನ್ನು ಪಿಂಜಾರ್ ಸಮುದಾಯದವರು ಇಟ್ಟುಕೊಂಡಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಹುಸೇನಪ್ಪ, ಹುಸೇನಮ್ಮ, ಹಸನ್‌ಪ್ಪ ಮುಂತಾದವುಗಳು.

ಹಿಂದೂ ಮುಸ್ಲಿಂ ಬಾಂದವ್ಯ ಮತ್ತು ಸಮ್ಮಿಶ್ರ ಸಂಸ್ಕೃತಿಯನ್ನು ಬಿಂಬಿಸುವ ಅನೇಕ ಅಂಶಗಳಲ್ಲಿ ವ್ಯಕ್ತಿನಾಮವೂ ಒಂದು. ಇಲ್ಲಿ ಪಿಂಜಾರರ ಹೆಸರುಗಳು ಕನ್ನಡದ ಸಂಬಂಧವಾಚಿಗಳಾದ ಅಪ್ಪ, ಅಜ್ಜಿ, ಅಣ್ಣ ಮತ್ತು ಅಮ್ಮ, ಅವ್ವ ವಾರ್ಗಿಕಗಳನ್ನು ಹೊಂದಿರುವುದನ್ನು ಗಮನಿಸಲಾಗಿದೆ. ಅವು ಈ ಕೆಳಕಂಡಂತಿವೆ.

| **ಪುರುಷರ ಹೆಸರುಗಳು** | **ಸ್ತ್ರೀಯರ ಹೆಸರುಗಳು** |
|---|---|
| ಬುಡೇನಪ್ಪ | ಪಾತವ್ವ |
| ಬುಡ್ಡಣ | ನೂರಮ್ಮ |
| ಹೊನ್ನೂರಜ್ಜ | ಅಲ್ಲೆವ್ವ |
| ಪೀರಜ್ಜ | ಬುಡ್ಡಮ್ಮ |
| ಯಮುನಪ್ಪ | ಕಾಸೆವ್ವ |

ಈ ರೀತಿಯಾಗಿ ಮುಸ್ಲಿಂ ಹೆಸರುಗಳನ್ನು ನೋಡಬಹುದು.

### ೫.೬. ವ್ಯಕ್ತಿನಾಮ ದ್ವೀಪಗಳು

ನಿಸರ್ಗ ಸೃಷ್ಟಿಯ ಪ್ರತಿಯೊಂದು ಗಿಡ–ಮರ–ಬಳ್ಳಿ, ಕಾಡು–ಮೇಡು, ಕಣಿವೆ, ಸರೀಸೃಪ, ಹಳ್ಳ–ಕೊಳ್ಳ, ಪಶು–ಪಕ್ಷಿ, ಪ್ರಾಣಿ, ಬೆಟ್ಟ–ಗುಡ್ಡ, ನದಿ–ಸಮುದ್ರ ಇವುಗಳನ್ನು ಹೊರತುಪಡಿಸಿ, ಮಾನವನ ಬದುಕೆಂಬುದೇ ಇಲ್ಲ. ಇವುಗಳಿಗೇನಾದರೂ ಹೆಸರು ಇಡದೇ ಹೋಗಿದ್ದರೆ, ಅವುಗಳ ಗುರುತಿಸುವಿಕೆ ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಯಾವುದೇ ಹೆಸರುಗಳ ಅಧ್ಯಯನವು ಪ್ರಮುಖವಾದುದಾಗಿದೆ.

ಮಾನವ ಸಮಾಜದಲ್ಲಿ ವ್ಯಕ್ತಿಗಳಿಗೆ ಹೆಸರನ್ನು ಇಡುವುದು ಸಹಜಕ್ರಿಯೆ ಎನ್ನುವ ಮಟ್ಟಿಗೆ ಒಂದು ಸಂಪ್ರದಾಯವಾಗಿ ಬೆಳೆದುಬಂದಿದೆ. ಹಿಂದಿನ ಹೆಸರುಗಳ ತಲೆಮಾರುಗಳ ಪಟ್ಟಿಯನ್ನು ಗಮನಿಸಿದಾಗ, ಧರ್ಮ ಮತ್ತು ದೈವದ ಪ್ರಭಾವವು ಪ್ರತಿಯೊಂದು ಸಮುದಾಯದ ವ್ಯಕ್ತಿನಾಮಗಳ ಮೇಲೆ ಬೀರಿರುವುದನ್ನು ನಾವು ಕಾಣಬಹುದಾಗಿದೆ. ಹೆಸರನ್ನು ಕೇಳಿದ ಕೂಡಲೇ ಆ ಹೆಸರು ಯಾವ ಸಮುದಾಯಕ್ಕೆ, ಯಾವ ಪ್ರದೇಶಕ್ಕೆ ಸೇರಿದುದು ಎಂಬುದನ್ನು ಗುರುತಿಸಲು ಸಾಧ್ಯವಾಗುತ್ತಿರುವುದು ಆಯಾ ಪ್ರದೇಶದ ಪ್ರಭಾವಿ ದೈವಗಳು ಎನ್ನಬಹುದು. ಉದಾಹರಣೆಗೆ ಮಾದೇಶ, ಮಹದೇವ, ಮಾದೇವ ಎಂಬ ಹೆಸರುಗಳನ್ನು ನೆನಪಿಸಿಕೊಂಡರೆ, ಮೈಸೂರು ಪರಿಸರದ ಮಾದೇಶ್ವರ ದೈವದ ಪ್ರೇರಣೆಯಿಂದ ಇವುಗಳು ಬಂದಿರುವುದನ್ನು ನಾವು ಗಮನಿಸಬಹುದಾಗಿದೆ. ಹಾಗೆಯೇ ಮೈಲಾರಿ, ಮೈಲಾರಪ್ಪ, ಮೈಲವ್ವ, ಶರಣಪ್ಪ, ಶರಣಮ್ಮ, ಶರಣಬಸಪ್ಪ (ಶರಣಬಸವೇಶ್ವರ) ಎಲ್ಲಪ್ಪ, ಎಲ್ಲಮ್ಮ, ಎಲ್ಲವ್ವ ಈ ಹೆಸರುಗಳನ್ನು ಗಮನಿಸಿದಾಗ ಕ್ರಮವಾಗಿ ಮೈಲಾರ, ಗುಲ್ಬರ್ಗಾ, ಸವದತ್ತಿಯ ದೈವಗಳ ಪ್ರೇರಣೆಯಿಂದ ಆಯಾ ಪ್ರದೇಶದ ಸುತ್ತಮುತ್ತಲೂ ಆ ಹೆಸರುಗಳು ದಟ್ಟವಾಗಿರುವುದನ್ನು

ಕಾಣಬಹುದಾಗಿದೆ. ಈ ರೀತಿಯಾಗಿ ಒಂದು ಧಾರ್ಮಿಕ ಕೇಂದ್ರದ ಅಥವಾ ಧಾರ್ಮಿಕ ಸ್ಥಳದ ಸುತ್ತಲೂ ಆ ದೈವದ ಹೆಸರುಗಳು ಹೆಚ್ಚಾಗಿರುವುದನ್ನು 'ವ್ಯಕ್ತಿನಾಮ ದ್ವೀಪ' ಎಂದು ಭಾವಿಸಿಕೊಂಡಿದ್ದೇನೆ.

ನಿಘಂಟುಗಳಲ್ಲಿ 'ದ್ವೀಪ' ಎಂಬುದರ ಅರ್ಥ ಈ ಕೆಳಗಿನಂತಿದೆ.

* ಕನ್ನಡ ಸಾಹಿತ್ಯ ಪರಿಷತ್‌ನ ೬ನೇ ಸಂಪುಟದಲ್ಲಿ ದೀಪ ಎಂಬುದಕ್ಕೆ ನೀರಿನಿಂದ ಸುತ್ತುವರಿದ ಭೂಭಾಗ ಎಂಬುದಾಗಿದೆ. (ಜಿ.ವಿ., ೧೯೭೯, ಪುಟ-೩೪೪೦)
* ಕನ್ನಡ ಸಾಹಿತ್ಯ ಪರಿಷತ್ ಪ್ರಕಟಿಸಿದ ಸಂಕ್ಷಿಪ್ತ ಕನ್ನಡ ನಿಘಂಟುವಿನಲ್ಲಿ ದೀಪ-ದ್ವೀಪ-ನಡುಗಡ್ಡೆ ಎಂಬರ್ಥವಿದೆ.
* ಕರ್ನಾಟಕ ಸಾಹಿತ್ಯ ಪರಿಷತ್‌ನಿಂದ ಪ್ರಕಟವಾದ ವಿ. ಕೃಷ್ಣ ಅವರ ಕನ್ನಡ-ಇಂಗ್ಲಿಷ್ ನಿಘಂಟಿನಲ್ಲಿ ದೀಪ- A tract of land completely surrounded by water ಎಂದು ಇದೆ.
* ಮೈಸೂರು ವಿಶ್ವವಿದ್ಯಾನಿಲಯದ ಇಂಗ್ಲಿಷ್-ಕನ್ನಡ ನಿಘಂಟಿನಲ್ಲಿ Island ಎಂಬುದಕ್ಕೆ ಸುತ್ತಲೂ ನೀರಿರುವ ಭೂಭಾಗ, ನಡುಗಡ್ಡೆ, ಹುಲ್ಲುಮೈದಾನದಿಂದ ಸುತ್ತುವರಿದಿರುವ ಮರಗಾಡು ಎಂಬರ್ಥಗಳಿವೆ.

ಈ ಎಲ್ಲವುಗಳನ್ನು ಗಮನಿಸಿಕೊಂಡು ಒಂದು ಪ್ರಭಾವಿ ಧಾರ್ಮಿಕ ಸಂಸ್ಥೆಯ ಸುತ್ತಮುತ್ತಲೂ ಆ ದೈವದ ನಾಮವನ್ನು ಬೇರೆ ಬೇರೆ ಸಮುದಾಯದವರು ನಿರ್ದೇಶಿಸಿಕೊಂಡಿರುತ್ತಾರೆ. ಹೀಗೆ ಆ ದೈವದ ಸುತ್ತ ದೈವ ಪ್ರಭಾವದಿಂದ ಹೆಸರುಗಳು ದಟ್ಟವಾಗಿರುವುದನ್ನು ನಾನು 'ವ್ಯಕ್ತಿನಾಮ ದ್ವೀಪ' ಎಂದು ಪರಿಭಾವಿಸಿಕೊಂಡಿದ್ದೇನೆ. ಅವುಗಳನ್ನು ಈ ಕೆಳಗಿನಂತೆ ನೋಡಬಹುದು.

**ವಿರೂಪಾಕ್ಷ (ಹಂಪೆ)**

ಹಂಪೆಯ ವಿರೂಪಾಕ್ಷ ಇಂದು ಹಲವು ಸಮುದಾಯಗಳ ಮನೆದೈವವಾಗಿದ್ದಾನೆ. ವಿಜಯನಗರದ ಮೊದಲ ಅರಸರು ಆರಾಧಿಸುತ್ತಿದ್ದ ಕುಲದೈವ ಹಂಪೆಯ ವಿರೂಪಾಕ್ಷ. ಈ ಸಾಮ್ರಾಜ್ಯದ ರಾಜಮುದ್ರೆಯಲ್ಲಿ 'ವಿರೂಪಾಕ್ಷ' ಎಂಬ ಅಂಕಿತವು ಸಾಮ್ರಾಜ್ಯದ ಕೊನೆಯ ಅರಸನವರೆಗೂ ಇತ್ತು. ಹರಿಹರ, ರಾಘವಾಂಕರ ಕಾವ್ಯಗಳಲ್ಲಿ 'ವಿರೂಪಾಕ್ಷ'ನನ್ನು ನೆನಪಿಸಿಕೊಂಡ ರೀತಿಯನ್ನು ಗಮನಿಸಿದಾಗ ಹಂಪೆಯ ವಿರೂಪಾಕ್ಷ ಪ್ರಸಿದ್ಧ ದೈವ ಎನ್ನುವುದರಲ್ಲಿ ಯಾವುದೇ ಸಂಕೋಚವಿಲ್ಲ. ಬಳ್ಳಾರಿ ಜಿಲ್ಲೆಯಾಚೆಗೂ ವಿರೂಪಾಕ್ಷ ದೈವನಾಮವನ್ನು ತಮ್ಮ ಮಕ್ಕಳಿಗೆ ಇಟ್ಟಿರುವುದನ್ನು ನಾವಿಂದು ಗಮನಿಸಬಹುದು. ಬೇರೆ ಬೇರೆ ಸಮುದಾಯದವರು ಅವರಿಗೆ ಅನಿಸಿದಂತೆ, ಈ ದೈವದ ಪ್ರೇರಣೆಯಿಂದ ತಮ್ಮ ಮಕ್ಕಳಿಗೆ ಹೆಸರುಗಳನ್ನು ಇಂದಿಗೂ ನಿರ್ದೇಶನ ಮಾಡುತ್ತಾ ಬಂದಿದ್ದಾರೆ. ಉದಾಹರಣೆಗೆ ಹಂಪಜ್ಜ, ಹಂಪಯ್ಯ, ಪಂಪಣ್ಣ, ಪಂಪಯ್ಯಸ್ವಾಮಿ, ಪಂಪಾಪತಿ, ಪಂಪ, ಹಂಪವ್ವ, ವಿರುಪಜ್ಜ, ವಿರೂಪಾಕ್ಷಯ್ಯ, ವಿರೂಪಾಕ್ಷೇಶ್ವರ, ವಿರೂಪಾಕ್ಷಿ, ವಿರುಪಣ್ಣ ಹೀಗೆ ಹೆಸರುಗಳನ್ನು ಕರೆದುಕೊಂಡಿದ್ದಾರೆ. ಜಾತ್ಯಾತೀತವಾಗಿ ಬೆಳೆದುಬಂದಿರುವ ಈ ಕ್ಷೇತ್ರದ ದೈವದ ಹೆಸರು ಎಲ್ಲಾ ಸಂಸ್ಕೃತಿಗಳಲ್ಲಿ

ಕಂಡುಬರುವುದನ್ನು ನೋಡಬಹುದಾಗಿದೆ. ಕುತೂಹಲದ ಸಂಗತಿ ಎಂದರೆ ಒಂದೇ ಹೆಸರನ್ನು ಸಮಾಜದ ವಿವಿಧ ಜನವರ್ಗಗಳು ಇಟ್ಟುಕೊಂಡರೂ, ನಿರ್ದೇಶನ ಮಾಡಿಕೊಂಡಿರುವ ಹೆಸರಿನ ರೂಪಗಳು ಬೇರೆ ಬೇರೆಯಾಗಿರುತ್ತವೆ. ಈ ಭಿನ್ನ ನಾಮರೂಪಗಳಿಂದ ಸಾಮಾಜಿಕ ಸ್ತರ ಮತ್ತು ಜಾತಿಗಳನ್ನು ಗುರುತಿಸಬಹುದು. ಸಾಮಾಜಿಕ ಸ್ತರಗಳಿಗನುಗುಣವಾಗಿಯೇ ಈ ವ್ಯತ್ಯಾಸಗಳು ಸಂಭವಿಸಿರುತ್ತವೆ. ಈ ವ್ಯತ್ಯಾಸಗಳೇ ಆಯಾ ಸಮುದಾಯವನ್ನು ಪ್ರತ್ಯೇಕಿಸಲು ನೆರವಾಗುತ್ತವೆ.

'ವಿರೂಪಾಕ್ಷ' ಎಂಬ ಹೆಸರು ವಿವಿಧ ಸಮುದಾಯಗಳಲ್ಲಿ ಯಾವ ರೂಪಗಳಲ್ಲಿ ಬಳಕೆಯಾಗುತ್ತದೆ ಎಂಬುದನ್ನು ಸ್ತ್ರೀ-ಪುರುಷರ ಹೆಸರುಗಳಲ್ಲಿನ ಸಾಧ್ಯತೆಗಳನ್ನು ತಿಳಿಯಲು ಈ ಕೆಳಗಿನ ಕೆಲವು ಉದಾಹರಣೆಗಳನ್ನು ನೋಡಬಹುದು.

ವಿರೂಪಾಕ್ಷಪ್ಪ – ಲಿಂಗಾಯತ, ಕುರುಬ, ಗೊಲ್ಲ, ಮಾದಿಗ, ನಾಯಕ, ಮಡಿವಾಳ.

ವಿರೂಪಾಕ್ಷಯ್ಯ – ಲಿಂಗಾಯತ, ಜಂಗಮ

ವಿರೂಪಾಕ್ಷಿ – ವಡ್ಡ, ಲಿಂಗಾಯತ, ಕುರುಬ, ನಾಯಕ, ಮಡಿವಾಳ, ಗೊಲ್ಲ

ವಿರೂಪಾಕ್ಷಚಾರ್ಯ – ಬ್ರಾಹ್ಮಣ

ವಿರುಪವ್ವ – ನಾಯಕ, ವಡ್ಡ, ಮಡಿವಾಳ

ಹಾಗೆಯೇ ಹಂಪಣ್ಣ, ಪಂಪಣ್ಣ, ಹಂಪವ್ವ, ಪಂಪ, ಪಂಪಾಪತಿ ಎನ್ನುವ ಹೆಸರುಗಳನ್ನು ಕೆಳವರ್ಗದವರು ಇಟ್ಟುಕೊಂಡಿರುವುದನ್ನು ಗಮನಿಸುತ್ತೇವೆ. 'ಪಂಪ' ಎನ್ನುವ ಹೆಸರು ಕನ್ನಡದ ಮೊದಲ ಕವಿ ಪಂಪನ ಪ್ರಭಾವದಿಂದಲೂ ಇದ್ದಿರಬಹುದು. ಆದರೆ ಈ ಹೆಸರುಗಳ ಪ್ರಮಾಣ ಕಡಿಮೆ ಎಂದೇ ಹೇಳಬಹುದು. ಹಂಪೆಯ ವಿರೂಪಾಕ್ಷ ಎಲ್ಲ ಸಮುದಾಯಗಳ ಹೆಸರಿನ ಮೇಲೆಯೂ ಪ್ರಭಾವ ಬೀರಿರುವುದನ್ನು ನೋಡಬಹುದಾಗಿದೆ.

**ಕೊಟ್ಟೂರು – ಬಸವೇಶ್ವರ**

ಕೊಟ್ಟೂರು ಕೂಡ್ಲಿಗಿ ತಾಲೂಕಿನ ಬಳ್ಳಾರಿ ಜಿಲ್ಲೆಯಲ್ಲಿ ಬರುವ ಪ್ರಸಿದ್ಧ ದಾರ್ಮಿಕ-ಸಂಸ್ಕೃತಿಯ ಕೇಂದ್ರವಾಗಿದೆ. ಕೊಟ್ಟೂರಿನ ಬಸವೇಶ್ವರ ದೈವವು, ಜಿಲ್ಲೆಯಾಚೆಗಿನ ನೆಲೆಗಳ ಮೇಲೆಯೂ ಪ್ರಭಾವ ಬೀರಿದೆ. ಕೊಟ್ಟೂರು ಪರಿಸರದ ಸುತ್ತಮುತ್ತ, ಅನೇಕ ಸಮುದಾಯಗಳು ತಮ್ಮ ಮಕ್ಕಳಿಗೆ ಈ ದೈವದ ಹೆಸರಿಟ್ಟಿರುವುದನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಲಾಗಿದ್ದು, ಈ ಸ್ಥಳವನ್ನು 'ವ್ಯಕ್ತಿನಾಮದ್ವೀಪ'ವೆಂದು. ಪ್ರಸ್ತುತ ಈ ಅಧ್ಯಯನದ ವ್ಯಾಪ್ತಿಯಲ್ಲಿ ಗುರುತಿಸಿ ಈ ಕೆಳಗಿನಂತೆ ಚರ್ಚಿಸಲಾಗಿದೆ.

**ಸ್ಥಳದ ಹೆಸರನ್ನು ಬಳಸಿಕೊಂಡಿರುವ ವ್ಯಕ್ತಿನಾಮಗಳು**

ಊರ ಹೆಸರನ್ನು ವ್ಯಕ್ತಿಗೆ, ವ್ಯಕ್ತಿಯ ಹೆಸರನ್ನು ಸ್ಥಳಕ್ಕೆ ಹೆಸರಿಡುವುದು ಕನ್ನಡದ ಸಂದರ್ಭಕ್ಕೆ ಹೊಸತೇನು ಅಲ್ಲ. ಇದಕ್ಕೆ ಹಿಂದಿನಿಂದಲೂ ಮಹತ್ವವಿದೆ. ಹೀಗೆ ಪರಸ್ಪರ ಒಂದರ ಹೆಸರನ್ನು

ಇನ್ನೊಂದಾಗಿ ಪಡೆಯುವ ಪ್ರಕ್ರಿಯೆಯ ಎರಡೂ ಸನ್ನಿವೇಶಗಳೂ ಕೂಡ ಮಹತ್ತರವಾದ ಸಂದರ್ಭಗಳನ್ನೇ ಹೊಂದಿರುತ್ತವೆ. ಸಾಮಾನ್ಯವಾಗಿ ಸ್ಥಳನಾಮ ಆಧಾರಿತ ವ್ಯಕ್ತಿನಾಮ, ವಾಸ್ತವವಾಗಿ ಸ್ಥಳನಾಮದ ಹೆಸರಾಗಿರದೆ, ಆ ಸ್ಥಳದ ದೈವದ ಹೆಸರೇ ಆಗಿರುತ್ತದೆ ಎಂಬುದು ಪ್ರಮುಖವಾದ ಅಂಶ. ಒಂದು ಪ್ರದೇಶದಲ್ಲಿ ಹೆಸರುವಾಸಿಯಾದ ದೈವವನ್ನು ಆ ಸ್ಥಳದ ಹೆಸರಿನ ಮೂಲಕವೇ ಗುರುತಿಸುವುದು ಕನ್ನಡ ಪರಿಸರದಲ್ಲಿ ಕಂಡುಬರುವ ಉಪಕ್ರಮವಾಗಿದೆ. ಉದಾಹರಣೆಗೆ ಕಡ್ಲಬಾಳಪ್ಪ, ಮೈಲಾರಪ್ಪ, ಕುರುಗೋಡಪ್ಪ, ಉಚ್ಚಂಗೆಮ್ಮ, ಬಳ್ಳಾರೆಮ್ಮ, ಚಳ್ಳೇರಮ್ಮ, ನಂದಿಬಂಡೆಮ್ಮ, ಗರಗಪ್ಪ, ಬೆನ್ನಳಮ್ಮ, ಕಣಿಮೆರಾಯ, ಯಡಿಯೂರಪ್ಪ ಎಂಬ ಹೆಸರುಗಳನ್ನು ಗಮನಿಸಬಹುದಾಗಿದೆ.

ಈ ಮೇಲಿನ ಹೆಸರುಗಳು ಒಂದು ಸ್ಥಳವನ್ನು ಸೂಚಿಸಿದರೂ ಸಹ ಆಯಾ ಪ್ರದೇಶದ ದೈವವನ್ನೇ ಧ್ವನಿಸುತ್ತವೆ. ಈ ಮೇಲಿನ ಹೆಸರುಗಳಂತೆಯೇ ಕೊಟ್ಟೂರು ಸ್ಥಳವನ್ನು ಮಾತ್ರ ಬಳಸಿಕೊಂಡಿರುವ ಹೆಸರುಗಳನ್ನು ಈ ಕೆಳಗಿನಂತೆ ಚರ್ಚಿಸಲಾಗಿದೆ.

| **'ಅ' ಪಟ್ಟಿ (ಪುರುಷರಲ್ಲಿ)** | **'ಬ' ಪಟ್ಟಿ (ಸ್ತ್ರೀಯರಲ್ಲಿ)** |
|---|---|
| ಕೊಟ್ರಪ್ಪ | ಕೊಟ್ರಮ್ಮ |
| ಕೊಟ್ರಯ್ಯ | ಕೊಟ್ರಕ್ಕ |
| ಕೊಟ್ರೇಶ | ಕೊಟ್ರವ್ವ |

ಜಂಗಮ ಮತ್ತು ಲಿಂಗಾಯಿತ ಜನಾಂಗದವರು ಈ ದೇವರಿಗೆ ವಿಶೇಷ ಭಕ್ತರಾಗಿದ್ದರೂ, ವಿವಿಧ ಜಾತಿ, ಜನಾಂಗದವರೂ ಕೂಡಾ ಅಧಿಕ ಪ್ರಮಾಣದಲ್ಲಿ ಈ ದೇವರಿಗೆ ಭಕ್ತರಾಗಿರುವುದರಿಂದ, ಸಹಜವಾಗಿಯೇ ಎಲ್ಲಾ ಸಮುದಾಯಗಳ ಮೇಲೆ ಪ್ರಭಾವವಿದೆ. ಈ ಮೇಲಿನ 'ಅ' ಮತ್ತು 'ಬ' ಪಟ್ಟಿಯಲ್ಲಿರುವ ಹೆಸರುಗಳನ್ನು ಸಾಮಾನ್ಯವಾಗಿ ಮೇಲ್ಜಾತಿ ಸಮುದಾಯಗಳಲ್ಲಿಯೇ ಹೆಚ್ಚು ಸಂಖ್ಯೆ ಇರುವುದನ್ನು ಗಮನಿಸಲಾಗಿದೆ. ಹಾಗೆಯೇ ಕುರುಬ, ನಾಯಕ, ಮಾದಿಗ, ಗೊಲ್ಲ, ಮೇದ, ಕುಂಬಾರ, ಲಂಬಾಣಿ, ವಡ್ಡ ಇನ್ನಿತರ ಸಮುದಾಯಗಳಲ್ಲಿ ಈ ಹೆಸರಿಟ್ಟಿರುವುದನ್ನು ಗುರುತಿಸಲಾಗಿದೆ. ಆದರೆ ಅವುಗಳ ಪ್ರಮಾಣ ಕಡಿಮೆಯಾಗಿದೆಯಂದೇ ಹೇಳಬಹುದಾಗಿದೆ. 'ಅ' ಪಟ್ಟಿಯಲ್ಲಿ 'ಕೊಟ್ರಯ್ಯ' ಎಂಬ ಹೆಸರಿನವರನ್ನು ಮೇಲ್ಜಾತಿಯಲ್ಲಿ ಹೆಚ್ಚು ನೋಡಬಹುದಾಗಿದೆ. 'ಬ' ಪಟ್ಟಿಯಲ್ಲಿರುವ ಸ್ತ್ರೀಯರ ಹೆಸರುಗಳು ಎಲ್ಲಾ ಸಮುದಾಯಗಳಲ್ಲೂ ಬಳಕೆಯಲ್ಲಿವೆ. ಸಂಖ್ಯೆಯ ದೃಷ್ಟಿಯಿಂದ ನೋಡಿದಾಗ ಈ ಹೆಸರುಗಳು ಮೇಲ್ಜಾತಿಗಳಲ್ಲಿಯೇ ಹೆಚ್ಚಾಗಿ ಕಾಣಸಿಗುತ್ತದೆ.

ತಲೆಮಾರುಗಳ ಅಂತರದಲ್ಲಿ ಈ ಹೆಸರಿನ ಪ್ರಕ್ರಿಯೆಯಲ್ಲಿ ಗಮನಿಸಿದಾಗ, ಒಂದು ಮತ್ತು ಎರಡನೆಯ ತಲೆಮಾರಿನಲ್ಲಿ ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿ ಹೆಸರುಗಳಿದ್ದು, ಮೂರನೇ ತಲೆಮಾರಿನಲ್ಲಿ ಮಾತ್ರ ಪುರುಷರ ಹೆಸರುಗಳು 'ಕೊಟ್ರೇಶ' ಎಂಬ ಹೆಸರುಗಳು ಹೆಚ್ಚಾಗಿದ್ದು, ಸ್ತ್ರೀಯರ ಹೆಸರುಗಳು ಒಂದು ಮತ್ತು ಎರಡನೇ ತಲೆಮಾರಿನಲ್ಲಿರುವಂತೆ, ಮೂರನೇ ತಲೆಮಾರಿನಲ್ಲಿಯೂ ಮುಂದುವರಿದಿರುವುದನ್ನು ನೋಡಬಹುದಾಗಿದೆ.

**ದೇವರ ಹೆಸರನ್ನು ಬಳಸಿಕೊಂಡಿರುವ ಹೆಸರುಗಳು**

ಈ ಮುಂಚೆ ಸ್ಥಳದ ಹೆಸರನ್ನು ಮಾತ್ರ ಬಳಸಿಕೊಂಡು ಹೆಸರುಗಳಿರುವುದನ್ನು ನೋಡಿದೆವು. ಅವು ಒಂದು ಮತ್ತು ಎರಡು ತಲೆಮಾರಿನವರಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತವೆ. ಆದರೆ ಇತ್ತೀಚಿಗೆ ಸ್ಥಳದ ಹೆಸರನ್ನು ಬಿಟ್ಟು ನೇರವಾಗಿ, ದೇವರ ಹೆಸರನ್ನು ಬಳಸಿಕೊಂಡು ಹೆಸರಿಟ್ಟಿರುವುದನ್ನು ಕಾಣುತ್ತೇವೆ. ಒಂದೇ ಹೆಸರನ್ನು ಭಿನ್ನ ಸಮಾಜದವರು ಅನುಸರಿಸುವಾಗ, ತಮ್ಮ ಸಾಮಾಜಿಕ ಸ್ತರಗಳಿಗೆ ಅನುಗುಣವಾಗಿ ಯಾವ ರೀತಿ ಇಟ್ಟುಕೊಳ್ಳುತ್ತಾರೆ ಎಂಬುದನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

| **'ಅ' ಪಟ್ಟಿ ಪುರುಷರಲ್ಲಿ** | **'ಬ' ಪಟ್ಟಿ ಸ್ತ್ರೀಯರಲ್ಲಿ** |
|---|---|
| ಬಸಯ್ಯ | ಬಸಮ್ಮ |
| ಬಸಪ್ಪ | ಬಸವರಾಜಮ್ಮ |
| ಬಸವೇಶ್ವರ | ಬಸವರಾಜೇಶ್ವರಿ |
| ಬಸವರಾಜ | ಬಸಕ್ಕ |
| ಬಸವೇಶ | ಬಸವ್ವ |

ಈ ಮೇಲಿನ 'ಅ' ಮತ್ತು 'ಬ' ಪಟ್ಟಿಯಲ್ಲಿರುವ ಹೆಸರುಗಳು, 'ಕೊಟ್ಟೂರು' ಸ್ಥಳವನ್ನು ಬಳಸಿಕೊಳ್ಳದೇ ಕೊಟ್ಟೂರಿನಲ್ಲಿರುವ ದೈವವಾದ 'ಬಸವೇಶ್ವರ'ನನ್ನು ಮಾತ್ರ ಬಳಸಿಕೊಂಡಿರುವ ಹೆಸರುಗಳಾಗಿವೆ. 'ಅ' ಪಟ್ಟಿಯಲ್ಲಿರುವ ಹೆಸರುಗಳಾದ ಬಸಯ್ಯ, ಬಸಪ್ಪ ಎಂಬ ಹೆಸರುಗಳು ಒಂದನೇ ತಲೆಮಾರಿನಲ್ಲಿ ಕಾಣಸಿಗುತ್ತವೆ. ಬಸವೇಶ್ವರ, ಬಸವೇಶ, ಬಸವರಾಜ ಎಂಬ ಹೆಸರುಗಳು ಎರಡು ಮತ್ತು ಮೂರನೇ ತಲೆಮಾರಿನಲ್ಲಿ ಕಾಣಸಿಗುತ್ತವೆ. ಹಾಗೆಯೇ ಬಸವೇಶ್ವರ ಮತ್ತು ಬಸವೇಶ ಎಂಬ ಹೆಸರುಗಳು ಮೇಲ್‌ಸಮುದಾಯದಲ್ಲಿ ಬಸಯ್ಯ, ಬಸಪ್ಪ, ಬಸವರಾಜ ಎಂಬ ಹೆಸರುಗಳು ಹೆಚ್ಚಾಗಿ ಕೆಳಸಮುದಾಯಗಳಲ್ಲಿ ಕಾಣುತ್ತೇವೆ. 'ಬ' ಪಟ್ಟಿಯಲ್ಲಿರುವ ಬಸವರಾಜಮ್ಮ ಬಸವರಾಜೇಶ್ವರಿ ಎಂಬ ಹೆಸರುಗಳು ಮೇಲ್‌ಸಮುದಾಯದಲ್ಲಿ ಬಸಮ್ಮ, ಬಸಕ್ಕ, ಬಸವ್ವ ಎಂಬ ಹೆಸರುಗಳು ಕೆಳಸಮುದಾಯಗಳಲ್ಲಿ ಹೆಚ್ಚಾಗಿ ನಾವಿಂದು ಕಾಣುತ್ತೇವೆ. ಕ್ಷೇತ್ರಕಾರ್ಯಕ್ಕೆ ಹೋದಂತಹ ಸಂದರ್ಭದಲ್ಲಿ ಒಂದೇ ಮನೆಯಲ್ಲಿ ಅಣ್ಣತಮ್ಮಂದಿರ ಇಬ್ಬರ ಹೆಸರೂ ಬಸವರಾಜ ಎಂದಿರುವುದನ್ನು ಗಮನಿಸಲಾಗಿದೆ. ಇದರ ಬಗೆಗೆ ವಿಚಾರಿಸಿದಾಗ, ನಮಗೆ 'ಬಸವೇಶ್ವರ' ದೈವ ಒಳ್ಳೆಯದನ್ನು ಮಾಡಿದ್ದಾನೆ. ಆದ್ದರಿಂದ ನಮ್ಮ ಇಬ್ಬರ ಮಕ್ಕಳ ಹೆಸರೂ ಬಸವರಾಜ ಎಂದು ಇಟ್ಟಿದ್ದೇನೆ ಎಂದು ಆ ಮಕ್ಕಳ ತಂದೆ ಉತ್ತರಿಸಿದ್ದಾನೆ. ದೊಡ್ಡವನಿಗೆ ದೊಡ್ಡಬಸವರಾಜ, ಸಣ್ಣವನಿಗೆ ಸಣ್ಣ ಬಸವರಾಜ ಎಂದು ಇಟ್ಟಿದ್ದಾರೆ. ಇಲ್ಲಿ ದೊಡ್ಡ ಮತ್ತು ಸಣ್ಣ ಎಂಬ ವಿಶೇಷಣಗಳನ್ನು ಬಳಸಲಾಗಿದೆ. ಹಾಗೆಯೇ ಸ್ತ್ರೀಯರ ಹೆಸರುಗಳೂ ಕೂಡಾ ಸಣ್ಣಬಸಮ್ಮ ಮತ್ತು ದೊಡ್ಡ ಬಸಮ್ಮ ಎಂದಿದೆ.

**ಸ್ಥಳ ಮತ್ತು ದೈವದ ಹೆಸರುಗಳೆರಡನ್ನು ಹೊಂದಿರುವ ಹೆಸರುಗಳು**

| 'ಅ' ಪಟ್ಟಿ ಪುರುಷರು | 'ಬ'ಪಟ್ಟಿ ಸ್ತ್ರೀಯರ ಹೆಸರುಗಳು |
|---|---|
| ಕೊಟ್ರ ಬಸಯ್ಯ | ಕೊಟ್ರ ಬಸಮ್ಮ |
| ಕೊಟ್ರ ಬಸಪ್ಪ | ಕೊಟ್ರ ಬಸವ್ವ |
| ಕೊಟ್ರ ಬಸವೇಶ | ಕೊಟ್ರ ಬಸಕ್ಕ |

ಈ ಮೇಲಿನ ಎರಡೂ ಪಟ್ಟಿಗಳಲ್ಲಿ ಸ್ಥಳದ ಹೆಸರು ಮತ್ತು ಆ ಸ್ಥಳದ ದೈವದ ಹೆಸರುಗಳೆರಡೂ ಇರುವುದನ್ನು ಗಮನಿಸಬಹುದಾಗಿದೆ. ನಿರ್ದಿಷ್ಟ ಭಾಗದಲ್ಲಿ 'ಕೊಟ್ರ' ಎಂಬ ಪದವು ಕೊಟ್ಟೂರು ಎಂಬುದನ್ನು ಸೂಚಿಸುತ್ತದೆ. ಆದರೆ ದಾಖಲೆಗಳಲ್ಲಿ 'ಕೊಟ್ಟೂರು' ಎಂದಿರದೆ, 'ಕೊಟ್ರ' ಎಂಬುದನ್ನೇ ದಾಖಲಿಸಿಕೊಂಡಿದ್ದಾರೆ. ಉದಾಹರಣೆಗೆ ಕೊಟ್ರಬಸಪ್ಪ, ಕೊಟ್ರಬಸವ್ವ ಹೀಗೆ ಕೊಟ್ಟೂರಿನ ಬಸವೇಶ್ವರ ದೈವವು ಸಾಮಾನ್ಯವಾಗಿ ಬಹುತೇಕ ಸಮುದಾಯಗಳ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

'ಬಸವೇಶ್ವರ' ಎಂಬ ದೈವಕ್ಕೆ ಸಂಬಂಧಿಸಿದಂತೆ, ಒಂದು ಅಂಶವನ್ನು ಸ್ಪಷ್ಟಪಡಿಸಿಕೊಳ್ಳುವುದು ಇಲ್ಲಿ ಉಚಿತವೆನಿಸುತ್ತದೆ. ಬಳ್ಳಾರಿ ಪರಿಸರದಲ್ಲಿರುವ ಬಸಪ್ಪ, ಬಸವರಾಜ, ಬಸಯ್ಯ, ಬಸಕ್ಕ, ಬಸಮ್ಮ, ಬಸವರಾಜಮ್ಮ ಈ ಎಲ್ಲಾ ಹೆಸರುಗಳೂ ಕೊಟ್ಟೂರು ಬಸವೇಶ್ವರನನ್ನು ಸೂಚಿಸುತ್ತವೆಯೇ? ಎಂಬುದನ್ನು ನಾವಿಲ್ಲಿ ಪ್ರಶ್ನಿಸಬೇಕಾದ ಅಂಶವಾಗಿದೆ. ಕೊಟ್ಟೂರಪ್ಪ, ಕೊಟ್ರಬಸಪ್ಪ, ಕೊಟ್ರೇಶ, ಕೊಟ್ರಯ್ಯ ಎಂಬ ಹೆಸರುಗಳು ನಿಶ್ಚಿತವಾಗಿ ಕೊಟ್ಟೂರಿನ ಬಸವೇಶ್ವರ ದೈವವನ್ನೇ ಸೂಚಿಸುತ್ತವೆ. ಆದರೆ ಈ ಮೇಲಿನ 'ಕೊಟ್ಟೂರು' ಸ್ಥಳವನ್ನು ಹೊರತುಪಡಿಸಿ ಇರುವ ಹೆಸರುಗಳು. ಸಮಾಜ ಸುಧಾರಕ, ದೈವತ್ವಕ್ಕೇರಿದ ಬಸವಣ್ಣ, ಶಿರಿಬಿಯ ಮೂಗಬಸವೇಶ್ವರ, ಕುರುಗೋಡಿನ ದೊಡ್ಡ ಬಸವೇಶ್ವರ, ಹಂಪೆಯ ಬಸವಣ್ಣ ಈ ದೈವಗಳ ಪ್ರಭಾವವಿರುವ ಹೆಸರುಗಳೂ ಕೂಡಾ ಬಳ್ಳಾರಿ ಪರಿಸರದಲ್ಲಿ ಕಾಣುತ್ತೇವೆ. ಕೊಟ್ಟೂರಿನ ಸುತ್ತಮುತ್ತಲಿರುವ ಹೆಸರುಗಳು ಬಸವೇಶ್ವರ ದೈವವನ್ನು ಸೂಚಿಸುವ ಹೆಸರುಗಳು ಹೆಚ್ಚಾಗಿವೆ ಎಂದು ಕ್ಷೇತ್ರಕಾರ್ಯದ ಮೂಲಕ ಸ್ಪಷ್ಟಪಡಿಸಿಕೊಳ್ಳಲಾಗಿದೆ.

**ನಾಯಕನಹಟ್ಟಿಯ ತಿಪ್ಪೇರುದ್ರಸ್ವಾಮಿ**

ಮಾನವನಾಗಿ ಜನಿಸಿ, ಭಕ್ತಿಯನ್ನು ಮೆರೆದು, ಪವಾಡಗಳಿಂದಲೇ ದೈವತ್ವಕ್ಕೇರಿದ ತಿಪ್ಪೇರುದ್ರಸ್ವಾಮಿ ಇಂದು ಹಲವು ಸಮುದಾಯಗಳ ಮನೆ ದೈವವಾಗಿದ್ದಾನೆ. ಆತನ ಪ್ರಭಾವವು, ಚಿತ್ರದುರ್ಗ ಜಿಲ್ಲೆಯ ಜೊತೆಗೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ, ಹಗರಿಬೊಮ್ಮನಹಳ್ಳಿ, ಸಂಡೂರು, ಹೂವಿನಹಡಗಲಿ, ಬಳ್ಳಾರಿ ತಾಲೂಕುಗಳಲ್ಲಿ ಇರುವುದನ್ನು ಕಾಣಬಹುದಾಗಿದೆ.

'ನಾಯಕನಹಟ್ಟಿ ತಿಪ್ಪೇಸ್ವಾಮಿ' ಎಂದೇ ಹೆಚ್ಚು ಪ್ರಸಿದ್ಧಿ ಹೊಂದಿರುವ ಈ ದೈವಕ್ಕೆ ಸುತ್ತಮುತ್ತಲಿನ ನೂರಾರು ಮೈಲಿಗಳ ದೂರದವರೆಗೂ, ಒಕ್ಕಲು ಭಕ್ತರು ಇದ್ದಾರೆ. ಒಕ್ಕಲು ಮತ್ತು ಹರಕೆ

ಮಾಡಿಕೊಳ್ಳುವ ಅನೇಕ ಜನರು ತಮ್ಮ ಮಕ್ಕಳಿಗೆ ತಿಪ್ಪೇಸ್ವಾಮಿ, ತಿಪ್ಪಯ್ಯ, ತಿಪ್ಪಣ್ಣ, ತಿಪ್ಪೇರುದ್ರಸ್ವಾಮಿ, ತಿಪ್ಪೇರುದ್ರ, ತಿಪ್ಪವ್ವ, ತಿಪ್ಪಮ್ಮ, ತಿಪ್ಪೇಶ ಎಂದೆಲ್ಲಾ ಹೆಸರಿರುವುದನ್ನು ನಾವು ಗಮನಿಸಬಹುದಾಗಿದೆ. ಜಾತ್ಯಾತೀತವಾಗಿ ಬೆಳೆದುಬಂದಿರುವ ಈ ಕ್ಷೇತ್ರದ ದೈವದ ಹೆಸರು ಎಲ್ಲಾ ಸಂಸ್ಕೃತಿಗಳಲ್ಲಿ ಕಾಣಬರುತ್ತಿರುವುದು ಕುತೂಹಲಕರವಾದ ಸಂಗತಿಯಾಗಿದೆ. ಬ್ರಾಹ್ಮಣ ಸ್ತ್ರೀ ವ್ಯಕ್ತಿನಾಮವನ್ನು ಹೊರತುಪಡಿಸಿ, ಸಮಾಜದ ಎಲ್ಲಾ ಜಾತಿಯ ಪುರುಷ ಮತ್ತು ಸ್ತ್ರೀಯರಲ್ಲಿ 'ತಿಪ್ಪೇಸ್ವಾಮಿ' ಹೆಸರು ಬಳಕೆಯಲ್ಲಿರುವುದನ್ನು ಕ್ಷೇತ್ರಕಾರ್ಯದ ಮೂಲಕ ಗಮನಿಸಲಾಗಿದೆ. ಮೇಲ್ಜಾತಿ ಸಮುದಾಯಗಳಲ್ಲಿ ಈ ದೈವದ ಹೆಸರಿನ ಬಳಕೆ ಅಲ್ಪಪ್ರಮಾಣದಲ್ಲಿದ್ದರೆ, ಕೆಳಜಾತಿ ಸಮುದಾಯಗಳಲ್ಲಿ ವಿಪುಲವಾಗಿರುವುದು ಕಂಡುಬರುತ್ತದೆ. ಒಂದು ಮತ್ತು ಎರಡನೇ ತಲೆಮಾರಿನವರಲ್ಲಿ ಈ ಹೆಸರುಗಳು ಅಧಿಕವಾಗಿದ್ದು, ಮೂರನೆಯ ತಲೆಮಾರಿನವರಲ್ಲಿ ಈ ಹೆಸರು ಇರಬಹುದಾದರು, ಅವುಗಳ ಸಂಖ್ಯೆ ಒಂದು ಮತ್ತು ಎರಡನೆಯ ತಲೆಮಾರಿನವರ ಸಂಖ್ಯೆಯನ್ನು ಮೀರುವುದಿಲ್ಲ.

ಗಮನಿಸಬೇಕಾದ ಸಂಗತಿ ಎಂದರೆ ಒಂದೇ ಹೆಸರನ್ನು ಸಮಾಜದ ವಿವಿಧ ಜನವರ್ಗಗಳು ಇಟ್ಟುಕೊಂಡರೂ ನಿರ್ದೇಶನ ಮಾಡಿಕೊಂಡಿರುವ ಹೆಸರಿನ ರೂಪಗಳು ಬೇರೆ ಬೇರೆಯಾಗಿರುತ್ತವೆ. ಈ ಭಿನ್ನ ಹೆಸರುಗಳಿಂದ ಸಾಮಾಜಿಕ ಸ್ತರ ಮತ್ತು ಜಾತಿಗಳನ್ನು ಗುರುತಿಸಬಹುದು. ಸಾಮಾಜಿಕ ಸ್ತರಗಳಿಗನುಗುಣವಾಗಿಯೇ ಈ ವ್ಯತ್ಯಾಸಗಳು ಸಂಭವಿಸಿರುತ್ತವೆ. ಈ ವ್ಯತ್ಯಾಸಗಳೇ ಆಯಾ ಸಮುದಾಯವನ್ನು ಗುರುತಿಸಲು ಸಾಧ್ಯವಾಗುತ್ತವೆ. ವಿವಿಧ ಸಮುದಾಯಗಳಲ್ಲಿ 'ತಿಪ್ಪೇಸ್ವಾಮಿ' ಎಂಬ ಹೆಸರು ಹೇಗೆ ಭಿನ್ನ ರೂಪಗಳನ್ನು ಪಡೆದುಕೊಂಡಿದೆ ಎಂಬುದನ್ನು ಈ ಕೆಳಗಿನ ಸ್ತ್ರೀ–ಪುರುಷರ ಹೆಸರುಗಳಿಂದ ಗಮನಿಸಬಹುದು.

| **ಬಳಕೆಗೊಂಡ ರೂಪ** | **ಸಮುದಾಯಗಳಲ್ಲಿ** |
|---|---|
| ತಿಪ್ಪಯ್ಯ | ಜಂಗಮ |
| | ನಾಯಕ |
| | ಕುರುಬ |
| | ಲಿಂಗಾಯತ |
| | ಗೊಲ್ಲ |
| | ಮಾದಿಗ |
| ತಿಪ್ಪೇಸ್ವಾಮಿ | ನಾಯಕ |
| | ಲಿಂಗಾಯತ |
| | ಮಾದಿಗ |

| | |
|---|---|
| | ಮಡಿವಾಳ |
| | ಗೊಲ್ಲ |
| | ಜಂಗಮ |
| ತಿಪ್ಪೇರುದ್ರಸ್ವಾಮಿ | ಲಿಂಗಾಯತ |
| | ಜಂಗಮ |
| ತಿಪ್ಪಣ್ಣ | ನಾಯಕ |
| | ಕೊರವ |
| | ಕೊರಚ |
| | ಗೊಲ್ಲ |
| | ಕುರುಬ |
| | ಮಡಿವಾಳ |
| ತಿಪ್ಪೇಶಾಚಾರಿ | ವಿಶ್ವಕರ್ಮ |
| ತಿಪ್ಪೇಶಾಚಾರ್ಯ | ಬ್ರಾಹ್ಮಣ |
| ತಿಪ್ಪಾರೆಡ್ಡಿ | ರೆಡ್ಡಿ |
| ತಿಪ್ಪೇಶರಾವ್ | ಲಿಂಗಾಯತ |
| | ಮರಾಠ |
| ತಿಪ್ಪೇರುದ್ರಯ್ಯ | ಜಂಗಮ |
| | ನಾಯಕ |
| ತಿಪ್ಪೇರುದ್ರಪ್ಪ | ಲಿಂಗಾಯತ |
| | ನಾಯಕ |
| | ಮಾದಿಗ |
| ತಿಪ್ಪೇರುದ್ರ | ಮಾದಿಗ |
| | ನಾಯಕ |
| ತಿಪ್ಪಾನಾಯಕ | ನಾಯಕ |

| | |
|---|---|
| ತಿಪ್ಪನಾಯ್ಕ | ಲಂಬಾಣಿ |
| ತಿಪ್ಪೇಶಗೌಡ | ಒಕ್ಕಲಿಗ |
| | ಲಿಂಗಾಯತ |
| ಸ್ತ್ರೀಯರಲ್ಲಿ | |
| ತಿಪ್ಪಮ್ಮ | ನಾಯಕ |
| | ಲಿಂಗಾಯತ |
| | ಒಕ್ಕಲಿಗ |
| | ಭೋವಿ |
| | ಮಾದಿಗ |
| | ಗೊಲ್ಲ |
| | ಕುರುಬ |
| | ಮಡಿವಾಳ |
| ತಿಪ್ಪವ್ವ | ನಾಯಕ |
| | ಮಾದಿಗ |
| | ಲಿಂಗಾಯತ |
| ತಿಪ್ಪಾಬಾಯಿ | ಲಂಬಾಣಿ |
| | ಮರಾಠ |

ಹೀಗೆ ಒಂದೇ ಹೆಸರಿನ ವಿವಿಧ ರೂಪಗಳನ್ನು ಬೇರೆ ಬೇರೆ ಸಮುದಾಯಗಳಲ್ಲಿ ನೋಡಬಹುದಾಗಿದೆ.

**ಹುಲಿಗೆಮ್ಮ (ಹುಲಿಗಿ)**

ಹೊಸಪೇಟೆಯ ಹತ್ತಿರವಿರುವ ಹುಲಿಗಿಯ ಹುಲಿಗೆಮ್ಮ ಪ್ರಸಿದ್ಧಿಯನ್ನು ಪಡೆದ ದೇವತೆಯಾಗಿದ್ದಾಳೆ. ಮಹಾರಾಷ್ಟ್ರದಿಂದ ಈಕೆಯ ಭಕ್ತರು ಪೂಜೆಗೆಂದು ಬರುತ್ತಾರೆ. ಈಕೆಯ ಪ್ರಭಾವವು ಸುತ್ತಮುತ್ತಲ ಎಲ್ಲ ಪ್ರದೇಶಗಳ ಮೇಲೆ ಬೀರಿದೆ. ಮಂಗಳವಾರ ಮತ್ತು ಶುಕ್ರವಾರಗಳಂದು ದೇವಿಯ ದರ್ಶನಕ್ಕೆಂದು ಬೇರೆ ಬೇರೆ ಭಾಗದ ಜನರು ಕಿಕ್ಕಿರಿದು ಸೇರಿರುತ್ತಾರೆ. ಪ್ರಾಣಿಬಲಿ, ಮಡಿಸ್ನಾನ, ಹರಕೆ, ಎಲೆಪೂಜೆ, ಅನೇಕ ಕಾರ್ಯಗಳನ್ನು ಭಕ್ತರು ತಾವಂದುಕೊಂಡಂತೆ ಪೂರೈಸುತ್ತಾರೆ. ತಲೆಮಾರುಗಳ ಪಟ್ಟಿಯನ್ನು ಗಮನಿಸಿದಾಗ ಈ ದೇವಿಯ ಹೆಸರುಗಳು ಸುಮಾರು ೪೦ಕ್ಕಿಂತ ಹೆಚ್ಚು ವಯಸ್ಸಿನವರ ಹೆಸರುಗಳು

ಅತ್ಯಧಿಕವಾಗಿವೆ. ಬರುಬರುತ್ತಾ ಕ್ರಮೇಣವಾಗಿ ಆಧುನಿಕ ಮನೋಭಾವದಿಂದಾಗಿ ನೇರವಾಗಿ ದೇವಿಯ ಹೆಸರನ್ನು ಇಡುವುದು ಕಡಿಮೆಯಾಗಿದೆ ಎಂಬುದನ್ನು ಕ್ಷೇತ್ರಕಾರ್ಯದ ಮೂಲಕ ತಿಳಿದುಕೊಳ್ಳಲಾಗಿದೆ. ಮಕ್ಕಳಾಗದ ಸಂದರ್ಭದಲ್ಲಿ ದೇವಿಗೆ ಪೂಜೆಮಾಡಿ ಹರಕೆ ಹೊತ್ತುಕೊಂಡು ಮಕ್ಕಳಾದಲ್ಲಿ ದೇವಿಯ ಹೆಸರನ್ನು ಇಂದಿಗೂ ಕೂಡಾ ಇಡುವುದನ್ನು ಕಾಣಬಹುದಾಗಿದೆ.

ಅನೇಕ ಸಮುದಾಯಗಳು ಈಕೆಯನ್ನು ಮನೆದೈವ, ಇಷ್ಟದೈವ, ಕುಲದೈವವನ್ನಾಗಿ ಸ್ವೀಕರಿಸಿದ್ದಾರೆ. ಮತ್ತು ಮಕ್ಕಳಿಗೆ ಆಕೆಯ ಹೆಸರನ್ನು ಇಟ್ಟಿದ್ದಾರೆ. ಉದಾಹರಣೆಗೆ ಹುಲುಗಪ್ಪ–ಹುಲುಗವ್ವ, ಹುಲಿಗೇಶ–ಹುಲಿಗೆವ್ವ, ಹೂಲೆಪ್ಪ –ಹೂಲೆವ್ವ, ಹುಲಿಯಪ್ಪ ಎಂಬುದಾಗಿ ನಾಮ ನಿರ್ದೇಶನ ಮಾಡಿದ್ದಾರೆ. ಹೆಚ್ಚಾಗಿ ಕೆಳಸಮುದಾಯಗಳಲ್ಲಿಯೇ ಈ ದೇವಿಯ ಹೆಸರನ್ನು ಅನುಕರಿಸಿರುವುದು ಕಂಡುಬರುತ್ತದೆ.

**ಮರುಳಸಿದ್ದೇಶ್ವರ (ಉಜ್ಜಿನಿ)**

ಪಂಚಪೀಠಗಳಲ್ಲಿ ಒಂದಾದ ಉಜ್ಜಿನಿಯ ಕೂಡ್ಲಿಗಿ ತಾಲೂಕಿನಲ್ಲಿದೆ. ಉಜ್ಜಿನಿಯ ಮರುಳಸಿದ್ದೇಶ್ವರ ದೈವದ ಪ್ರಭಾವ ಸುತ್ತಮುತ್ತಲ ಪ್ರದೇಶಗಳ ಹಲವು ಸಮುದಾಯಗಳ ಮೇಲೆ ಬೀರಿರುವುದನ್ನು ಉಜ್ಜಿನಿ ಪರಿಸರದ ಸುತ್ತಮುತ್ತಲ ಹೆಸರುಗಳನ್ನು ಗಮನಿಸಿ ಹೇಳಬಹುದು. ಉದಾಹರಣೆಗೆ ಮರುಳಸಿದ್ದೇಶ್ವರ, ಸಿದ್ದೇಶ್ವರ, ಮರುಳೇಶ ಎಂಬ ಹೆಸರುಗಳು ಮೇಲ್‌ಸಮುದಾಯಗಳಲ್ಲಿ ಇದ್ದರೆ ಕೆಳಸಮುದಾಯದವರು ಸ್ಥಳದ ಹೆಸರನ್ನೇ ನಿರ್ದೇಶಿಸಿಕೊಂಡಿದ್ದಾರೆ. ಉದಾಹರಣೆಗೆ ಉಜ್ಜಿನಿ, ಉಜ್ಜಿನಪ್ಪ, ಮರುಳಪ್ಪ, ಸಿದ್ದಪ್ಪ, ಉಜ್ಜಿನವ್ವ ಎಂಬ ಹೆಸರುಗಳನ್ನು ನಾಮನಿರ್ದೇಶನ ಮಾಡಿಕೊಳ್ಳುತ್ತಾರೆ.

ಹೀಗೆ ಅನೇಕ ವ್ಯಕ್ತಿನಾಮ ದ್ವೀಪಗಳನ್ನು ಗುರುತಿಸಬಹುದಾಗಿದೆ. ಸಂಡೂರಿನ ಕುಮಾರಸ್ವಾಮಿ ಪ್ರಭಾವದಿಂದ ಕುಮಾರ, ಕುಮಾರಪ್ಪ, ಕೊಮರೆಪ್ಪ, ಕುಮಾರಸ್ವಾಮಿ ಎಂದು ಚೇಳಗುರಿಕಿ ಎರ್ರಿತಾತ ಬಳ್ಳಾರಿ ದುರುಗಮ್ಮ, ಸವದತ್ತಿ ಎಲ್ಲಮ್ಮ, ಮೈಲಾರದ ಮೈಲಾರ ಲಿಂಗೇಶ್ವರ ಇನ್ನು ಅನೇಕ ವ್ಯಕ್ತಿನಾಮ ದ್ವೀಪಗಳನ್ನು ನೋಡಬಹುದಾಗಿದೆ.

**೫.೭. ಸ್ಥಳನಾಮಗಳ ಸಾಮಾಜಿಕ ದೃಷ್ಟಿಕೋನ**

ಸ್ಥಳನಾಮಗಳನ್ನು ಸೂಕ್ಷ್ಮವಾಗಿ ನೋಡುವುದರ ಮೂಲಕ ಸಾಂಸ್ಕೃತಿಕ ಪ್ರಕ್ರಿಯೆಗಳನ್ನು ತಿಳಿಯಲು ಸಾಧ್ಯವಿದೆ. ಸ್ಥಳನಾಮಗಳ ಸುತ್ತ ಹೆಪ್ಪುಗಟ್ಟಿರುವ ಸಮಸ್ಯೆಗಳ ಪರಿಹಾರಕ್ಕೆ ಐತಿಹಾಸಿಕ ಮತ್ತು ಸಾಮಾಜಿಕ ವಿದ್ಯಮಾನಗಳು ಕೀಲಿಕೈ ಆಗುತ್ತವೆಂಬುದನ್ನು ಮರೆಯಲಾಗದು. ಜನಪದರ ಮನೋಧರ್ಮಕ್ಕೆ ಹಾಗೂ ಅವರ ಪುರಾಣ ನಿರ್ಮಾಣ ಸಾಮರ್ಥ್ಯಕ್ಕೆ ಅವು ಸಾಕ್ಷಿಯಾಗುತ್ತವೆಂದು ದೇ. ಜವರೇಗೌಡ ಹೇಳುತ್ತಾರೆ.

ಸಮಾಜದಲ್ಲಿನ ವಿಭಿನ್ನ ರೀತಿಯ ಸಂಸ್ಕೃತಿಯ ಚಹರೆಗಳನ್ನು ಸ್ಥಳನಾಮಗಳು ಹೇಗೆ ಗುರುತಿಸಿ, ಮಾರ್ಗವನ್ನು ನಿರ್ಮಿಸುತ್ತಾ, ಪ್ರತಿನಿಧಿಯಾಗಿ, ಸಾಕ್ಷ್ಯಾಧಾರಗಳಾಗಿ ನಿಲ್ಲುತ್ತವೆಂಬುದನ್ನು ವಿವಿಧ ಸಾಮಾಜಿಕ ಆಯಾಮಗಳಿಂದ ಚರ್ಚಿಸಲಾಗಿದೆ.

**ಜಾತಿಯಾಧಾರಿತ ಸ್ಥಳನಾಮಗಳು**

ಸಾಮಾಜಿಕ ರಚನೆಯಲ್ಲಿ ಮಾನವನಿಗೆ ಲಿಂಗ, ವರ್ಗ, ಜಾತಿ ಮುಂತಾದ ಅಂಶಗಳಿಂದ ಈ ಮೂಲಕ ಸ್ಥಳನಾಮಾಧ್ಯಯನವು ಇಂದಿಗೂ ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತದೆ. "ಲಿಖಿತ ಆಧಾರಗಳ ಕೊರತೆಯಿದ್ದಲ್ಲಿ ಒಂದು ಜನಾಂಗವು ನೆಲೆಸಿದ್ದ ಒಂದು ಪ್ರದೇಶದ ಸ್ಥಳನಾಮಗಳಲ್ಲಿನ ಸಮಾನರೂಪಗಳನ್ನು ಪರಿಶೀಲಿಸಬೇಕು." (ರಘುಪತಿಭಟ್ಟ ಕೆಮ್ಮೂರು, ೧೯೮೯ ಪು.೩) ಇದರಿಂದ ಆಯಾ ನಾಡಿನ ಹಲವಾರು "ಸಾಂಸ್ಕೃತಿಕ ಸ್ತರಗಳ ನಾನಾ ಜನಾಂಗಗಳ ಅಸ್ತಿತ್ವವು ಸ್ಥಳನಾಮಗಳಲ್ಲಿ ಅಭಿವ್ಯಕ್ತಿಗೊಂಡಿರುವುದನ್ನು ಕಾಣಬಹುದಾಗಿದೆ" (ದೇಜಗೌ, ೧೯೯೦, ಪುಟ–೨೩). ಇಂತಹ ನಾಮಗಳು ನೇರವಾಗಿ ಅಲ್ಲದಿದ್ದರೂ, ಸಂಸ್ಕೃತಿಯ ಪಳೆಯುಳಿಕೆಗಳಂಥ ಅವಶೇಷಗಳಾಗಿರುವುದರಿಂದ, ಅವು ಪರೋಕ್ಷವಾಗಿಯಾದರು ಜನತೆ ಮತ್ತು ನಿರ್ದಿಷ್ಟ ಕಾಲದ ಸಮಾಜದ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ. ಈ ಬಗೆಯ ಸಾಮಾಜಿಕ ಅಧ್ಯಯನದಿಂದ ಸಾಂಸ್ಕೃತಿಕ ಸಂಗತಿಗಳು ಗೊತ್ತಾಗುತ್ತವೆ.

ಮನುಷ್ಯರು ನಿಸರ್ಗದತ್ತವಾದಂತಹ ಕಲ್ಲು, ಗುಡ್ಡ, ದಿನ್ನೆ, ಬೆಟ್ಟ, ಪೊಟರೆಗಳಲ್ಲಿ ತಮ್ಮ ವಾಸದ ನೆಲೆಯನ್ನು ಗುರುತಿಸಿಕೊಂಡರು. ಆದುದರಿಂದ ಗ್ರಾಮನಾಮಗಳ ಇತಿಹಾಸದಲ್ಲಿ ನಿಸರ್ಗವಾಚಿ ಸ್ಥಳನಾಮಗಳು ಮೊದಲು ಉಗಮಗೊಂಡವು. ಇದು ಗ್ರಾಮ ಅಥವಾ ಸ್ಥಳನಾಮದ ಪ್ರಥಮ ಘಟ್ಟವೆಂದು ಕಲ್ಬುರ್ಗಿ ಎಂ.ಎಂ. ಅವರು ಅಭಿಪ್ರಾಯಪಡುತ್ತಾರೆ. ಎರಡನೇ ಘಟ್ಟದಲ್ಲಿ ಜಾತಿಯ ನೆಲೆಯಲ್ಲಿ ಸ್ಥಳನಾಮಗಳು ಉಗಮಗೊಂಡಿರುವುದನ್ನು ನೋಡಬಹುದಾಗಿದೆ. ಇಲ್ಲಿ ಸಮುದಾಯಗಳ ಹಿನ್ನೆಲೆಯಲ್ಲಿ ದೈವಮೂಲ ಸ್ಥಳನಾಮಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

**ಬ್ರಾಹ್ಮಣರು:** ಇವರು ಸಾಮಾಜಿಕವಾಗಿ ಸಬಲರಾದಂತಹ ಸಮುದಾಯವಾಗಿದ್ದು, ಅವರ ಸ್ಥಾನಮಾನವೇನೆಂಬುದು ನಮಗೀಗಾಗಲೇ ತಿಳಿದಿದೆ. ತಮ್ಮ ಅಸ್ತಿತ್ವವನ್ನು ಸ್ಥಳನಾಮಗಳ ಮೇಲೆಯೂ ಸ್ಥಾಪಿಸಿಕೊಂಡಿರುವುದು ತಿಳಿಯುತ್ತದೆ. ಅಗ್ರಹಾರ, ಹಾರುವ, ಪಾರುವ, ಬೊಮ್ಮ, ಭಟ್ಟ ಎಂಬ ಪದಗಳು ಬ್ರಾಹ್ಮಣರ ವಾಸದ ನೆಲೆಯನ್ನು ಸೂಚಿಸುತ್ತವೆ. ಅಂತಹ ಸ್ಥಳನಾಮಗಳನ್ನು ಈ ಕೆಳಗಿನಂತೆ ನೋಡಬಹುದು. ಬ್ರಾಹ್ಮಣ ಸಮುದಾಯವು ಪ್ರತ್ಯೇಕವಾಗಿ ವಾಸಿಸುತ್ತಿರುವುದು ಕಂಡುಬರುತ್ತದೆ. ಅವರು ತಮ್ಮ ವಾಸ್ತವ್ಯಗಳಿಗೆ ವೈಷ್ಣವ ಸಂಬಂಧಿ ದೈವಮೂಲದ ಹೆಸರುಗಳನ್ನು ಇಟ್ಟಿರುವುದು ಕಂಡುಬರುತ್ತದೆ. ಉದಾಹರಣೆಗೆ ವೆಂಕಟೇಶ್ವರ ನಗರ, ರಾಘವೇಂದ್ರ ಕಾಲನಿ, ವಿಜಯರಾಯನ ಕಟ್ಟೆ, ಸತ್ಯನಾರಾಯಣ ಪೇಟೆ.

'ಬೊಮ್ಮ' ಎಂಬ ನಿರ್ದಿಷ್ಟದಿಂದ ಆರಂಭವಾಗುವ ಸ್ಥಳನಾಮಗಳನ್ನು ಬ್ರಾಹ್ಮಣರ ನೆಲೆಗಳೆಂದು ಗುರುತಿಸುವಲ್ಲಿ ಕೆಲವೊಂದು ಗೊಂದಲಗಳಿವೆ. ಬ್ರಹ್ಮವು ಸಂಸ್ಕೃತದಿಂದ ತದ್ಭವಗೊಂಡು ಬೊಮ್ಮ ಆಗಿರಬೇಕು. ಮುಂದೆ ಕನ್ನಡ ನಾಡಿನಲ್ಲಿ 'ಬೊಮ್ಮ' ಸಂಬಂಧಿ ಗ್ರಾಮನಾಮಗಳು ಹುಟ್ಟಿಕೊಂಡಿರಬಹುದು. ಗೋಪಾಲಕೃಷ್ಣ ವಿ. ಅವರು ಕೋಲಾರ ಜಿಲ್ಲೆಯಲ್ಲಿ ಬರುವ

'ಬೊಮ್ಮದಾಸರಹಳ್ಳಿ' ಎಂಬುದನ್ನು 'ಬೊಮ್ಮ' ಎಂಬುದು ದಾಸರಲ್ಲಿ ಒಂದು ಪಂಗಡ" (ಗೋಪಾಲಕೃಷ್ಣ ವಿ. ೧೯೮೭, ಪುಟ-೬೦) ಎಂದು ಹೇಳುತ್ತಾ ಜನಾಂಗಿಕ ಅಂಶದಲ್ಲಿ ಚರ್ಚಿಸಿದ್ದಾರೆ. ಕ್ಷೇತ್ರಮಾಹಿತಿಯ ಪ್ರಕಾರ ಇವುಗಳು ಬ್ರಾಹ್ಮಣ ಸಮುದಾಯಗಳ ವಾಸ್ತವ್ಯವೆಂದೇ ತಿಳಿಯುತ್ತವೆ. 'ಬೊಮ್ಮ'ದಿಂದ ಉಂಟಾಗಿರುವ ಸ್ಥಳನಾಮಗಳು ಈ ಕೆಳಗಿನಂತಿವೆ.

ಬೊಮ್ಮಗಟ್ಟ, ಬೊಮ್ಮನಹಾಳ್, ಹಗರಿಬೊಮ್ಮನಹಳ್ಳಿ, ಬೊಮ್ಮಲಾಪುರ ಮುಂತಾದವುಗಳಿವೆ. ಹೀಗೆ ಬ್ರಾಹ್ಮಣ ಸಮುದಾಯ ತಮ್ಮ ವಾಸ್ತವ್ಯಗಳಿಗೆ ಒಂದಲ್ಲ ಒಂದು ಬಗೆಯಲ್ಲಿ ಸಮುದಾಯದ ಪ್ರಾತಿನಿಧಿಕ ಸ್ಥಳನಾಮಗಳನ್ನು ನಿರ್ದೇಶಿಸಿಕೊಂಡಿದ್ದಾರೆ.

**ಕ್ಷತ್ರಿಯರು:** ಕ್ಷತ್ರಿಯ ಎಂಬ ಪದವನ್ನು ಹೊಂದಿರುವಂತಹ ಸ್ಥಳನಾಮಗಳು ಕಂಡುಬರುವುದಿಲ್ಲ. ಇಲ್ಲಿ ಪಾತ್ರಗುಣವನ್ನು ಹೊಂದಿದ ಅರಸರು, ಕೆಲವು ಪೌರಾಣಿಕ ವೀರರು, ಕ್ಷಾತ್ರಬಲವುಳ್ಳ ವ್ಯಕ್ತಿಗಳನ್ನು ವೀರರು ಎಂದು ಕರೆದವರನ್ನು ಹೆಸರಿಸುತ್ತಾ, ಕ್ಷತ್ರಿಯರಿಗೆ ಸಂಬಂಧಿಸಿದ ಸ್ಥಳನಾಮಗಳೆಂದು ಈ ಕೆಳಕಂಡಂತೆ ಗಮನಿಸಬಹುದು.

| | |
|---|---|
| ರಾಮಘಡ | ಪಾಂಡವಗಲ್ಲು |
| ರಾಮದುರ್ಗ | ಕೃಷ್ಣಾಪುರ |
| ರಾಮನಮಲೆ | ಮದಕರಿಪುರ |
| ರಾಂಪುರ | ಶ್ರೀರಾಮ ರಂಗಾಪುರ |
| ಧರ್ಮಾಪುರ | ಸೀತಾರಾಮಪುರ |
| ರಾಯದುರ್ಗ | ಕಡ್ಡಿರಾಮಾಪುರ |
| ರಾಜನಹಾಳ್ | ರಾಮಸಾಗರ |
| ರಾಜನಮಟ್ಟಿ | ಬುಕ್ಕಸಾಗರ |
| ಕೃಷ್ಣನಗರ | ಓಬಳಾಪುರ |
| ಹನುಮನಹಳ್ಳಿ | ಕೃಷ್ಣನಗರ ಕ್ಯಾಂಪ್ |
| ಲಕ್ಷ್ಮಣತೀರ್ಥ | ದೇವಲಾಪುರ |
| ಮಲಪನಗುಡಿ | ಅನಂತಶಯನಗುಡಿ |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ, ಬಳ್ಳಾರಿ ಪರಿಸರದಲ್ಲಿ ವಿಜಯನಗರ ಸಾಮ್ರಾಜ್ಯದ ಅರಸರು ದಾನಕೊಟ್ಟೋ, ಕೆರೆ ಕಾಲುವೆಗಳನ್ನು ಕಟ್ಟಿಸಿಯೋ, ತಮ್ಮ ಕುಟುಂಬದವರ ಹೆಸರು, ಉಳಿಯಲೆಂದು, ಕುಟುಂಬ ಸದಸ್ಯರ ಅಥವಾ ಮಂತ್ರಿಗಳ ಹೆಸರಿನಲ್ಲಿ ಊರುಗಳನ್ನು ಸ್ಥಾಪನೆ

ಮಾಡಿದ್ದಾರೆ. ಅಂತಹ ಹೆಸರುಗಳನ್ನು ಈ ಮೇಲೆ ನೋಡಬಹುದು. ಮುಖ್ಯವಾಗಿ ಶ್ರೀಕೃಷ್ಣದೇವರಾಯನ ಆಡಳಿತಾವಧಿಯಲ್ಲಿ ಅನೇಕ ಸ್ಥಳನಾಮಗಳಿಗೆ ಅವರ ಕುಟುಂಬ ಸದಸ್ಯರ ಹೆಸರುಗಳನ್ನು ಇಡಲಾಯಿತು. ಉದಾಹರಣೆಗೆ ತನ್ನ ಹೆಂಡತಿಯರ ಹೆಸರಿನಲ್ಲಿ ನಾಗಲಾಪುರ, ನಾಗೇನಹಳ್ಳಿ, ತಿರುಮಲಾಪುರ ಇಂತಹ ಹೆಸರುಗಳನ್ನು ಗಮನಿಸಬಹುದು. ಜನಪದ ದೈವವೆಂದು ಇಂದಿಗೂ ಪೂಜಿಸುತ್ತಿರುವ ಕಮ್ಮಟದುರ್ಗದ ಅರಸ ಕುಮಾರರಾಮನ ಹೆಸರಿನಲ್ಲಿ ಅನೇಕ ಸ್ಥಳನಾಮಗಳಿರುವುದನ್ನು ನಾವು ನೋಡಬಹುದು. ಆತನ ಧೀಮಂತ ವ್ಯಕ್ತಿತ್ವದಿಂದಾಗಿ, ಜನರಿಗೆ ಅನೇಕ ಉಪಕಾರಗಳನ್ನು ಮಾಡಿದಕ್ಕಾಗಿ ಕುಮಾರರಾಮ ಇಂದಿಗೂ ಪ್ರಸ್ತುತ. ಉದಾಹರಣೆಗೆ ರಾಮನಮಲೆ, ರಾಮಘಡ ಮುಂತಾದ ಸ್ಥಳಗಳು ಆತನ ಹೆಸರಿನಲ್ಲಿರುವುದನ್ನು ಗಮನಿಸಬಹುದು.

**ಲಿಂಗಾಯತರು:** ಲಿಂಗಾಯತ ಊರುಗಳಲ್ಲಿ ಮುಖ್ಯವಾಗಿ ಎರಡು ರೀತಿಯಲ್ಲಿ ಗುರುತಿಸಬಹುದು. ೧೨ನೇ ಶತಮಾನದಲ್ಲಿ ಆರಂಭವಾದ ವೀರಶೈವ ಧರ್ಮದಿಂದ ಉಂಟಾದ ಸ್ಥಳನಾಮಗಳು ಹಾಗೂ ಈ ಧರ್ಮಕ್ಕಿಂತ ಮುಂಚೆ ಇದ್ದ ಶೈವ ಪಂಥದಿಂದ ನಿರ್ದೇಶಿಸಲ್ಪಟ್ಟ ಸ್ಥಳನಾಮಗಳು. ಶೈವಪಂಥದ ದೈವಗಳಾದ ವೀರಭದ್ರ, ಶಿವ, ಪರಮೇಶ್ವರ, ಲಿಂಗ, ನಂದಿ ಮುಂತಾದ ಹೆಸರುಗಳಿಂದ ಶೈವ ಸ್ಥಳನಾಮಗಳಿವೆ. ಅಂತಹುಗಳಲ್ಲಿ ಈ ಕೆಳಕಂಡಂತೆ ಗಮನಿಸಬಹುದು. ಉದಾಹರಣೆಗೆ

| **'ಅ' ಪಟ್ಟಿ** | **'ಬ' ಪಟ್ಟಿ** |
|---|---|
| ನಂದಿಪುರ (ಹೆಚ್.ಬಿ. ಹಳ್ಳಿ) | ತಾಳೆಬಸಾಪುರ (ಹೊಸಪೇಟೆ) |
| ನಂದಿಹಳ್ಳಿ (ಕೂಡ್ಲಿಗಿ) | ಬಸವನದುರ್ಗ (ಹೊಸಪೇಟೆ) |
| ನಂದಿಹಳ್ಳಿ (ಹೊಸಪೇಟೆ) | ಬಸವನಪುರ (ಆದೋನಿ) |
| ನಂದಿಬಂಡೆ (ಹೆಚ್.ಬಿ.ಹಳ್ಳಿ) | ಅಯ್ಯನಹಳ್ಳಿ (ಹೊಸಪೇಟೆ) |
| ಪರಮದೇವನಹಳ್ಳಿ (ಬಳ್ಳಾರಿ) | ಎಂ.ಬಿ. ಅಯ್ಯನಹಳ್ಳಿ (ಕೂಡ್ಲಿಗಿ) |
| ಮಡ್ಡಿಲಿಂಗದಹಳ್ಳಿ | ಬಸವನಬಾಗೇವಾಡಿ (ಬಿಜಾಪುರ ಜಿಲ್ಲೆ) |
| ಮಲ್ಲಿಕಾರ್ಜುನಹಳ್ಳಿ | ಬಸವಣ್ಣ ಕಾಲುವೆ (ಹೊಸಪೇಟೆ) |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ 'ಅ' ಪಟ್ಟಿಯಲ್ಲಿರುವ ಸ್ಥಳನಾಮಗಳು ಶೈವ ಸಂಬಂಧೀ ಸ್ಥಳನಾಮಗಳಾಗಿವೆ. 'ಬ' ಪಟ್ಟಿಯಲ್ಲಿರುವ ಹೆಸರುಗಳು ವೀರಶೈವ ಸಂಬಂಧಿ ಸ್ಥಳನಾಮಗಳಾಗಿರುವುದು ತಿಳಿಯುತ್ತದೆ.

ಮುಖ್ಯವಾಗಿ ಇಲ್ಲಿ 'ಬಸವ' ಎಂಬ ಪದದಿಂದ ಪ್ರಾರಂಭವಾಗುವ ಸ್ಥಳಗಳು ೧೨ನೇ ಶತಮಾನ ಬಸವಣ್ಣನ ಪ್ರೇರಣೆಯಿಂದ ಬಂದವುಗಳೋ ಅಥವಾ ನಾಲ್ಕು ಕಾಲಿನ ಬಸವನಿಂದ ಬಂದವುಗಳೋ ಎಂಬುದನ್ನು ನಿರ್ಧರಿಸಬೇಕಾಗಿದೆ. ಉದಾಹರಣೆಗೆ ಇಲ್ಲಿ ಬಸವನದುರ್ಗ,

ತಾಳಿಬಸಾಪುರ ತಾಂಡ ಇಲ್ಲಿ ಹೆಸರಿಸಿರುವ ಬಸವ ಬಸವಣ್ಣನ ಪ್ರೇರಣೆಯಿಂದ ಸ್ಥಾಪಿತವಾದವುಗಳಲ್ಲ ಎಂದೆನಿಸುತ್ತದೆ. ನಗರಗಳಲ್ಲಿ ಇತ್ತೀಚೆಗೆ ಸ್ಥಾಪಿತವಾಗಿರುವ ಹೆಸರುಗಳು ಹೆಚ್ಚು ಬಸವಣ್ಣನ ಪ್ರೇರಣೆಯಿಂದ ಬಂದವುಗಳೆಂದು ಹೇಳಬಹುದು. ಉದಾಹರಣೆಗೆ ಬಸವೇಶ್ವರ ನಗರ, ಬಸವೇಶ್ವರ ಕ್ಯಾಂಪ್, ಬಸವಣ್ಣ ಕಾಲುವೆ ಮುಂತಾದವುಗಳು. ಹೀಗೆ ಲಿಂಗಾಯತರಿಗೆ ಸಂಬಂಧಿಸಿದಂತಹ ಸ್ಥಳಗಳನ್ನು ನೋಡಬಹುದು.

**ವೈಶ್ಯರು:** ಇವರು ವ್ಯಾಪಾರಿಗಳಾಗಿದ್ದು, ಕರ್ನಾಟಕದ್ಯಂತ ವಾಸ ಮಾಡುತ್ತಿದ್ದಾರೆ. ಪ್ರಾಚೀನ ಕರ್ನಾಟಕದಲ್ಲಿ ವ್ಯಾಪಾರಿಗಳ ಸಂಘವಿದ್ದು, ಈ ವೈಶ್ಯ ಪಟ್ಟಣ ಶೆಟ್ಟಿಗಳ ಕುರಿತಾಗಿ ಕೆಲವು ಶಾಸನಗಳು ಉಲ್ಲೇಖಿಸಿವೆ. ಶ್ರೀಮಂತರಾದ ಶೆಟ್ಟರು ಗ್ರಾಮಗಳನ್ನು ನಿರ್ಮಿಸಿದ ಉದಾಹರಣೆಗಳನ್ನು ನೋಡಬಹುದು. ಸೋಮಶೆಟ್ಟಿಹಳ್ಳಿ (ಕೋಲಾರಜಿಲ್ಲೆ), ಶಂಕರಶೆಟ್ಟಿ ಹಳ್ಳಿ (ಮೈಸೂರು ಜಿಲ್ಲೆ), ಶ್ರೀರಾಮಶೆಟ್ಟಿ ಹಳ್ಳಿ (ಸಂಡೂರು ತಾಲೂಕು) ಸಂಡೂರು ತಾಲೂಕಿನಲ್ಲಿ ಮಾತ್ರ ಈ ಸಮುದಾಯದ ಕುರಿತ ಹಳ್ಳಿಯಿದೆ. ಮೇಲಿನ ಎರಡು ಸ್ಥಳಗಳನ್ನು ಮಾದರಿಗಾಗಿ ನೀಡಲಾಗಿದೆ.

ಕುರುಬ, ಗೊಲ್ಲ, ಅಗಸ, ವಡ್ಡ, ಉಪ್ಪಾರ, ಕೊರಚ ಸಮುದಾಯಗಳಿಗೆ ಸಂಬಂಧಿಸಿದಂತೆ ದೈವಮೂಲ ಹೆಸರುಗಳಿರುವುದು ಕಂಡುಬಂದಿಲ್ಲ. ಜಾತಿವಾರು ಗ್ರಾಮನಾಮಗಳಿವೆ. ಉದಾಹರಣೆಗೆ ಮೇಲೆ ಉದಾಹರಿಸಿದ ಜಾತಿಗಳಿಗೆ ಸಂಬಂಧಿಸಿದಂತೆ ಕ್ರಮವಾಗಿ ಕುರುವತ್ತಿ (ಹೂವಿನಹಡಗಲಿ), ಕುರುಗೋಡು (ಬಳ್ಳಾರಿ ತಾಲೂಕು), ಕುರುವಳ್ಳಿ (ಸಿರುಗುಪ್ಪ), ಕುರಿಗನೂರು (ಸಿರುಗುಪ್ಪ), ಕುರುಕುಂದೆ (ಆಲೂರು ತಾಲೂಕು), ಗೊಲ್ಲರಹಟ್ಟಿ (ಕೂಡ್ಲಿಗಿ ತಾಲೂಕು), ಗೊಲ್ಲರಹಳ್ಳಿ (ಹೊಸಪೇಟೆ), ಗೊಲ್ಲ ಲಿಂಗಮ್ಮನಹಳ್ಳಿ (ಸಂಡೂರು), ಅಗಸಕಲ್ಲು (ಆಲೂರು), ಅಗಸನೂರು (ಸಿರುಗುಪ್ಪ), ಅಗಸನೂರು (ಆದೋನಿ), ಉಪ್ಪಾರಳ್ಳಿ (ಹೊಸಪೇಟೆ), ಉಪ್ಪಾರಹೊಸಹಳ್ಳಿ (ಬಳ್ಳಾರಿ), ಕೊರಚರಹಟ್ಟಿ (ಕೂಡ್ಲಿಗಿ), ಕೊರಚರಬಂಡೆ (ನಿರ್ವಸಿತ), ಕೊರಚರ ಈಚಲು ಆಲೂರು(ನಿರ್ವಸಿತ)

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ, ನೇರವಾಗಿ ಜಾತಿಯ ಹೆಸರನ್ನೇ ಸೂಚಿಸುವ ಗ್ರಾಮನಾಮಗಳಾಗಿವೆ. ಇತ್ತೀಚೆಗೆ ನಗರಗಳಲ್ಲಿ ಆಯಾ ಜಾತಿಯವರು ವಾಸಿಸುವ ನೆಲೆಗೆ ಅವರ ನಾಯಕರ ಹೆಸರನ್ನು ಇಡುವುದು ಕಂಡುಬರುತ್ತದೆ. ಉದಾಹರಣೆಗೆ

ಕುರುಬರ ಓಣಿಗೆ – ಕನಕನಗರ

ಬ್ಯಾಡರ ಓಣಿಗೆ – ವಾಲ್ಮೀಕಿನಗರ

ಗೊಲ್ಲರ ಓಣಿಗೆ – ಕೃಷ್ಣನಗರ

ಮಡಿವಾಳರ ಓಣಿಗೆ – ಮಾಚಯ್ಯನಗರ

ಮಾದರ ಓಣಿಗೆ – ಅಂಬೇಡ್ಕರ್‌ನಗರ

ಲಿಂಗಾಯತರ ಓಣಿಗೆ – ಬಸವೇಶ್ವರ ಬಡಾವಣೆ

ವಿವಿಧ ಸಮುದಾಯಗಳ ಓಣಿಗಳಿಗೆ ಆಯಾ ಸಮುದಾಯದ ನಾಯಕರ ಹೆಸರುಗಳನ್ನು ಇಟ್ಟುಕೊಂಡಿರುವುದು ಗೊತ್ತಾಗುತ್ತದೆ.

ಹೀಗೆ ವ್ಯಕ್ತಿ ಮತ್ತು ಸ್ಥಳನಾಮಗಳ ಸಾಮಾಜಿಕ ಅಧ್ಯಯನವು, ಜನತೆ ಮತ್ತು ನಿರ್ದಿಷ್ಟ ಕಾಲದ ಸಮಾಜದ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ. ನಾಮವಿಜ್ಞಾನವೆಂದರೆ ಕೇವಲ ಒಂದು ಊರು ಅಥವಾ ಸ್ಥಳನಾಮವು ಇದೇ ಮೂಲದಿಂದ ಹುಟ್ಟಿದೆ ಎಂದು ಹೇಳುವುದಲ್ಲ; ಬದಲಾಗಿ ಅವುಗಳು ಯಾವೆಲ್ಲ ಸಂಗಾತಿಗಳೊಡನೆ ಸೇರಿವೆ ಎಂಬುದನ್ನು ಹುಡುಕುತ್ತಾ, ಒಂದು ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲಿಕ್ಕೆ ಸಾಧ್ಯವಾಗುತ್ತದೆ.

### ೫.೮. ಮೌಖಿಕ ದೃಷ್ಟಿಕೋನ

ಜನಪದರಿಗೂ, ಹೆಸರುಗಳಿಗೂ ಗಾಢವಾದ ಸಂಬಂಧವಿದೆ. ಹೆಸರುಗಳನ್ನು ಕೇವಲ ಶಿಷ್ಟ ಭಾಷಿಕ ಘಟಕಗಳೆಂದು ಅಧ್ಯಯನ ಮಾಡದೆ, ಮೌಖಿಕ ಘಟಕಗಳನ್ನಾಗಿ ಮಾಡಿಕೊಂಡು ಮತ್ತೊಂದು ದೃಷ್ಟಿಕೋನದಿಂದ ಅಧ್ಯಯನ ಮಾಡುವ ಅಗತ್ಯವಿದೆ. ಜನಪದರು ಮಾತನಾಡುತ್ತಲೇ ಗಾದೆ, ಒಗಟು, ಒಡಪು, ಐತಿಹ್ಯಗಳನ್ನು ಸಂದರ್ಭಕ್ಕೆ ತಕ್ಕಂತೆ ಮಾತನಾಡಬಲ್ಲವರಾಗಿದ್ದಾರೆ. ಅವರ ಆ ನುಡಿಗಳಿಗೆ ಅಪಾರವಾದ ಮೌಲ್ಯವಿದೆ. ಅವುಗಳನ್ನು ಆಡುವವರ ಪ್ರಮಾಣ ಇಂದು ಕುಸಿಯುತ್ತಿದೆ. ಮೌಖಿಕ ಪರಂಪರೆಯಲ್ಲಿರುವ ಅಗಾಧವಾದ ಮಾಹಿತಿಯನ್ನು ಸಾಧ್ಯವಾದಷ್ಟು ಮಟ್ಟಿಗೆ ಉಳಿಸಿಕೊಂಡು ಬರುವ ಕೆಲಸವನ್ನು ನಾವು ಮಾಡಬೇಕಾಗಿದೆ.

ನಾಮಶಾಸ್ತ್ರ ಭಾಷಾಶಾಸ್ತ್ರದ ಒಂದು ಘಟಕ. ಇದು ಜಾನಪದದ ಅಧ್ಯಯನಕ್ಕೆ ಪೂರಕವಾಗಿ ನಿಲ್ಲುತ್ತದೆಯೆಂದರೆ ತಪ್ಪಾಗಲಾರದು. ಅನೇಕ ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಭಾಷಾಶಾಸ್ತ್ರದಲ್ಲಿ ಅಧ್ಯಯನ ಕೈಗೊಂಡು ಹೆಸರು ಮಾಡಿದ್ದಾರೆ. ಅದರಂತೆ ಅನೇಕ ಭಾಷಾಶಾಸ್ತ್ರಜ್ಞರು ಇಂದು ಜಾನಪದ ಕ್ಷೇತ್ರದಲ್ಲಿ ಆಸಕ್ತಿಯನ್ನು ತಳೆದಿದ್ದಾರೆ. ನಾಮಶಾಸ್ತ್ರ ಮತ್ತು ಜಾನಪದ ಎರಡರಿಂದಲೂ ಉತ್ಪನ್ನಗೊಳ್ಳುವ ಹೊಸ ಆಯಾಮಗಳನ್ನು ಪ್ರತ್ಯೇಕ ಅಧ್ಯಯನಕ್ಕೆ ಒಳಪಡಿಸಬಹುದು. ಭಾಷಾಶಾಸ್ತ್ರದ ತತ್ವಗಳು, ಸಿದ್ಧಾಂತಗಳನ್ನು ಮೌಖಿಕ ಸಾಮಗ್ರಿಗಳ ಮುಖೇನ ತುಲನೆ ಮಾಡಿ ನೋಡಿ, ಮೌಖಿಕ ಭಾಷಾಧ್ಯಯನದ ಮಾದರಿಗಳನ್ನು ನೀಡುತ್ತಿದ್ದಾರೆ. ನಾಮಶಾಸ್ತ್ರವೂ ಕೂಡಾ ಭಾಷಾಶಾಸ್ತ್ರದ ಘಟಕವಾಗಿರುವುದರಿಂದ, ಜನಪದ ಸಾಮಗ್ರಿಯಲ್ಲಿ ಇದನ್ನು ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ. ಜಾನಪದ ಮತ್ತು ಭಾಷಾಶಾಸ್ತ್ರ ಹಲವಾರು ವಿಷಯಗಳಲ್ಲಿ ಸಮಾನ ಆಸಕ್ತಿಯನ್ನು ಹೊಂದಿವೆ. ಆಡುನುಡಿಯ ಬಗೆಗೆ ಎರಡಕ್ಕೂ ವಿಶೇಷ ಒಲವಿದೆ. ಕ್ಷೇತ್ರಮಾಹಿತಿಯಲ್ಲದೆ ಇವೆರಡರ ವಿಶ್ಲೇಷಣೆ ಮಾಡುವುದು ಕಷ್ಟವಾಗುತ್ತದೆ. ಹೀಗಾಗಿ ಇವೆರಡೂ ಅಂತರ್‌ಶಿಸ್ತಿನ ಅಧ್ಯಯನಕ್ಕೆ ಒಳ್ಳೆಯ ನಿದರ್ಶನಗಳಾಗಿವೆ.

ಪ್ರಮುಖವಾಗಿ ಇಲ್ಲಿ ಐತಿಹ್ಯ, ಗಾದೆ, ಒಗಟು, ಒಡಪು, ಹಾಡುಗಳು ಮುಂತಾದ ಮೌಖಿಕ ಪರಂಪರೆಯಲ್ಲಿ ದಾಖಲಾದ ಮಾಹಿತಿಗಳಿಂದ ವ್ಯಕ್ತಿ ಮತ್ತು ಸ್ಥಳನಾಮಗಳ ಸಾಮಾಜಿಕ ಸಂಗತಿಗಳ

ಕಡೆ ಗಮನಹರಿಸಬಹುದು. "ಸಾಮಾಜಿಕ ಭಾಷಾವಿಜ್ಞಾನ ಸಂಶೋಧನೆಯಲ್ಲಿ ಜಾನಪದ ಭಾಷಾಶಾಸ್ತ್ರ ಕೂಡಾ ಒಂದಾಗಿದೆ" (ವಿಲಿಯಂ ಬ್ರೈಟ್ ಅವರ ಮಾತು) ಇದರಿಂದ ಈ ರೀತಿಯ ಅಧ್ಯಯನ ಅಗತ್ಯ ಮತ್ತು ಅನಿವಾರ್ಯವಾಗಿದೆ.

**೫.೮.೧. ದೇವತೆಗಳ ಬಗೆಗಿರುವ ಐತಿಹ್ಯಗಳು**

**ಬಸವೇಶ್ವರ (ಅಮಲಾಪುರ):** ಕೂಡ್ಲಿಗಿಯಿಂದ ಹತ್ತು ಕಿ.ಮೀ. ದೂರದಲ್ಲಿ ಅಮಲಾಪುರ ಗ್ರಾಮವಿದೆ. ಆ ಗ್ರಾಮದವರು ಕಾನಾಡುವಿನ ಶ್ರೀ ಶರಣಬಸವೇಶ್ವರನಿಗೆ ಅಪಾರ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಹೀಗೆ ಅವರಲ್ಲಿ ಭಕ್ತಿ ಹೆಚ್ಚಾದುದಕ್ಕೆ ಒಂದು ಐತಿಹ್ಯವನ್ನು ನಿರೂಪಿಸುತ್ತಾರೆ. ಅದು ಈ ಕೆಳಗಿನಂತಿದೆ.

ಅಮಲಾಪುರ ಗ್ರಾಮದಲ್ಲಿನ ಬಸವಣ್ಣ ವಿಗ್ರಹದ ಕಂಠ ಪ್ರದೇಶದಲ್ಲಿ ಬಿರುಕು ಕಾಣಿಸಿಕೊಂಡಿತಂತೆ. ಶಿರಸ್ಸು ಕಳಚಿಬೀಳುವ ಸ್ಥಿತಿಯಲ್ಲಿತ್ತು. ಅದೊಂದು ಊರಿಗೆ ಆಪತ್ಕಾಲದ ಸೂಚನೆಯೆಂದು ಊರಿನ ಜನರು ಭಯಗೊಂಡರು. ಗ್ರಾಮದ ಹಿರಿಯರೆಲ್ಲ ಸೇರಿ ಕಾನಾಮಡುವಿನ ಶರಣರ ಹತ್ತಿರ ಅದಕ್ಕೆ ಪರಿಹಾರ ಕಂಡುಕೊಳ್ಳಲು ಬಂದರು. ಅವರ ಕೋರಿಕೆಯ ಮೇರೆಗೆ ಶರಣರು ಅಮಲಾಪುರದ ಬಸವೇಶ್ವರ ದೇವಸ್ಥಾನಕ್ಕೆ ಬಂದರು. ಅಂದು ಅಮಲಾಪುರ ಜನರಿಗೆ ಉತ್ಸವದ ದಿನ. ಬಸವಣ್ಣನ ಗುಡಿಯ ಬಾಗಿಲು ತೆರೆಯುವುದಕ್ಕೂ ಮೊದಲು ಪೂಜಿಸಿದರು. ಶರಣರೇ ಒಳಗೆ ಹೋಗಿ ಬಾಗಿಲು ಮುಚ್ಚಿಕೊಂಡು ಅವರ ಪವಾಡದಿಂದ ಅದನ್ನು ಕೂಡಿಸಿದರೆಂದು ತಿಳಿದ ಭಕ್ತರು ಇಂದಿಗೂ ಕೂಡಾ ಕಾನಾಮಡುವಿನ ಶರಣರ ಸನ್ನಿಧಿಗೆ ಸೇವೆ ಸಲ್ಲಿಸುವುದು ಕಂಡುಬರುತ್ತದೆ.

**ಒಪ್ಪತ್ತೇಶ್ವರ ಸ್ವಾಮಿ:** ಹೊಸಪೇಟೆ ತಾಲೂಕಿನ ಗರಗ ನಾಗಲಾಪುರದಲ್ಲಿರುವ ಒಪ್ಪತ್ತೇಶ್ವರ ಸ್ವಾಮಿಯ ಕುರಿತು ಐತಿಹ್ಯ ಹೀಗಿದೆ. ವಿಜಯನಗರ ಸಾಮ್ರಾಜ್ಯದ ದೊರೆ ಪ್ರೌಢದೇವರಾಯನ ಕಾಲದಲ್ಲಿ ಅನೇಕ ಜನ ಅವತಾರ ಪುರುಷರು, ಪವಾಡ ಪುರುಷರು, ಚಿಂತನಾಶೀಲರು, ಭಕ್ತಿಪಥದಲ್ಲಿ ನಡೆದು ನಾಡಿನ ಜನತೆಗೆ ಆದ್ಯಾತ್ಮಿಕ ಜ್ಞಾನಧಾರೆ ಎರೆದಿರುವುದನ್ನು ಅವರು ಮಾಡಿರುವ ಕಾರ್ಯಗಳ ಮೂಲಕ ನಮಗೆ ಗೊತ್ತಾಗುತ್ತದೆ.

ಪ್ರೌಢದೇವರಾಯ ನಿಧನರಾದ ಮೇಲೆ ಸದಾಶಿವರಾಯ ರಾಜ್ಯಭಾರ ವಹಿಸಿಕೊಂಡರು. ಪ್ರೌಢದೇವರಾಯನ ಅನ್ಯೋನ್ಯತೆಯಲ್ಲಿ ಬೆಳೆದಿದ್ದ ನೂರಾರು ಜನ ವಿರಕ್ತರು ಅವರ ಅಗಲಿಕೆಯಿಂದ ಶೋಕಿತರಾಗಿ ನಾಡಿನೆಲ್ಲಡೆ ಒಬ್ಬೊಬ್ಬರಾಗಿ ಸಂಚಾರ ಹೊರಟರು. ಅವರಲ್ಲಿ ಒಬ್ಬರಾದ ಶ್ರೀಗುರು ಒಪ್ಪತ್ತಯ್ಯ ಸ್ವಾಮಿಯನ್ನು, ಒಪ್ಪತ್ತೇಶ್ವರ, ಒಪ್ಪತ್ತಿನ ಅಯ್ಯ, ಒಪ್ಪತ್ತಯ್ಯ ಎಂಬುದಾಗಿ ಮುಂತಾದ ಪರ್ಯಾಯ ನಾಮಗಳಿಂದ ಕರೆಯಲ್ಪಡುತ್ತಿದ್ದರು. ಕಲ್ಯಾಣ ಕಾರ್ಯಗಳನ್ನು ಕೈಗೊಂಡು ಅಂದಿನ ಮ್ಯಾಸರಹಟ್ಟಿ ಗ್ರಾಮದಲ್ಲಿ ನೆಲೆಸಿದರು. ಕಥೆ, ವೇದ, ಪುರಾಣ, ಪ್ರವಚನ ಮೂಲಕ ಆದ್ಯಾತ್ಮಿಕ ಮೌಲ್ಯ ಸಾರಿ ಸಮಸ್ತ ಜನತೆಗೆ ಐಕ್ಯತೆ ಮತ್ತು ಶಾಂತಿಯನ್ನು ಎಲ್ಲಡೆ ಭಕ್ತಿಯ ಪರಿಸರ ನಿರ್ಮಾಣ ಮಾಡಿದರು. ಜನತೆ ಅವರನ್ನು ಭಕ್ತಿ ಗೌರವದಿಂದ ಕಂಡು ತಮ್ಮ ಬದುಕನ್ನು ಹಸನಾಗಿಸಿಕೊಂಡರು.

ಸುತ್ತಮುತ್ತಲಿನ ಗ್ರಾಮಗಳಿಗೂ ಅವರ ಭಕ್ತಿ, ಆದರ್ಶವಾದದ ಕೀರ್ತಿ ಹಬ್ಬತೊಡಗಿತು. ಕಾಲಾನಂತರದಲ್ಲಿ ಒಪ್ಪತ್ತಿನ ಅಯ್ಯ ಅಭಯಾರಣ್ಯದಂತಿದ್ದ ಮ್ಯಾಸರಹಟ್ಟಿ ಗ್ರಾಮದಲ್ಲೇ ಜೀವಂತ ಸಮಾಧಿಯಾದರು.

ವಿಜಯನಗರ ಸಾಮ್ರಾಜ್ಯದ ದೊರೆ ಪ್ರೌಢದೇವರಾಯನ ಮಗ ಸದಾಶಿವರಾಯ ತನ್ನ ರಾಣಿಯೊಂದಿಗೆ ಒಂದು ದಿನ ವಾಯುವಿಹಾರಕ್ಕೆಂದು ಮ್ಯಾಸರಹಟ್ಟಿ ಅರಣ್ಯಕ್ಕೆ ಬಂದಾಗ ಮಹಾರಾಣಿಗೆ ಅನತಿ ದೂರದಲ್ಲಿ ಒಂದು ಜ್ಯೋತಿಯ ಪ್ರಖರವಾದ ಬೆಳಕು ಕಾಣಿಸಿತು. ತನ್ಮತೆಯಿಂದ ಜ್ಯೋತಿಯನ್ನು ಹಿಂಬಾಲಿಸುತ್ತಾ ಮಹಾರಾಣಿ ನಡೆದಳು. ಅದು ಒಪ್ಪತ್ತಿನ ಅರಣ್ಯದ ಜೀವಂತ ಸಮಾದಿಯ ಸ್ಥಳಕ್ಕೆ ಬಂದು ಮಾಯವಾಯಿತು. ತುಂಬಾ ಅಚ್ಚರಿಯಿಂದ ಕೆಲ ಕ್ಷಣಗಳಲ್ಲೇ ನಡೆದ ಈ ಘಟನೆಯಿಂದ ರೋಮಾಂಚಿತಳಾದ ಮಹಾರಾಣಿ ತನ್ನ ದೊರೆಗೆ ಈ ವಿಷಯ ತಿಳಿಸಿದಳು. ನಂತರ ಪರಿಪೂರ್ಣ ವಿಷಯ ತಿಳಿದ ಮಹಾರಾಜ ಸಮಾಧಿ ಸ್ಥಳದಲ್ಲಿ ಮಠ ಕಟ್ಟಿಸಿದನು. ಈ ಸಂದರ್ಭದಲ್ಲಿ ತನ್ನ ತಾಯಿ ನಾಗಲಾಂಬಿಕೆಯ ಸವಿನೆನಪಿಗಾಗಿ ಮ್ಯಾಸರಹಟ್ಟಿ ಗ್ರಾಮಕ್ಕೆ 'ನಾಗಲಾಪುರ'ವೆಂದು ನೂತನ ನಾಮಕರಣ ಮಾಡಿದ ಎಂದು ಹೇಳಲಾಗುತ್ತದೆ. (ವಕ್ತೃ: ಪಾಲಯ್ಯ ಜಿ., ೭೦, ನಾಗಲಾಪುರ)

**ಆಂಜನೇಯ ಸ್ವಾಮಿ (ಕಡಲಬಾಳು):** ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿರುವ ಈ ಗ್ರಾಮವು ಬಾಚಿಗೊಂಡನಹಳ್ಳಿಗೆ ಹೋಗುವ ಮಾರ್ಗ ಮಧ್ಯೆ ಸಿಗುವ ಒಂದು ಸಣ್ಣ ಹಳ್ಳಿಯೇ ಕಡಲುಬಾಳು. ಈ ಗ್ರಾಮದಲ್ಲಿ ಆಂಜನೇಯಸ್ವಾಮಿ ನೆಲೆಸಿರುವುದಕ್ಕೆ ಕಡಲಬಾಳು ಆಂಜನೇಯಸ್ವಾಮಿ ಎಂದು ಕರೆಯುತ್ತಾರೆ. ಈ ಗ್ರಾಮದ ಆಂಜನೇಯ ಸ್ವಾಮಿಯ ಬಗೆಗಿರುವ ಐತಿಹ್ಯಗಳನ್ನು ಸಂಶೋಧಕ ಉಮಾಪತಿ ಬಿ. ಅವರು ತಮ್ಮ ಕಡಲಬಾಳು ಆಂಜನೇಯಸ್ವಾಮಿ: ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ಪ್ರಬಂಧದಲ್ಲಿ ಸಂಗ್ರಹಿಸಿದ್ದಾರೆ. ಅದನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

"ಕಡಲಬಾಳು ಗ್ರಾಮದ ಮುಂದೆ ಹರಿಯುವ ಹಳ್ಳದ ಪಶ್ಚಿಮಕ್ಕಿನ ಮೂಲೆಯಲ್ಲಿ ಒಂದು ತಿರುವಿನ ಮಡುವಿದೆ. ಆಗಿನ ಕಾಲದಲ್ಲಿ ಈ ಹಳ್ಳದಲ್ಲಿ ಬಹಳ ಪ್ರಭಾವವಿರುತ್ತಿದ್ದರಿಂದ ಆಳವಾಗಿ ನೀರು ಈ ಮಡುವಿನಲ್ಲಿತ್ತು. ಆ ಊರಿನ ದಾಸಯ್ಯನೊಬ್ಬನು ತನ್ನ ಕಾರ್ಯತರ ನಿಮಿತ್ತದಿಂದ ಈ ಮಡುವು ಇರುವ ಕಡೆಗೆ ಹೋದಾಗಲೆಲ್ಲ ಆ ಮಡುವಿನೊಳಗಿಂದ 'ನನ್ನನ್ನು ಕರೆದುಕೊಂಡು ಹೋಗು' ಎಂಬ ಧ್ವನಿ ಅವನಿಗೆ ಕೇಳಿಬರುತ್ತಿತ್ತು. ಅವನು ಅದನ್ನು ಎಷ್ಟೋ ದಿನ ಲಕ್ಷ್ಯಕ್ಕಿಟ್ಟಿರಲಿಲ್ಲ. ಆಮೇಲೆ ಒಂದು ದಿನ ಅವನ ಕನಸಿನಲ್ಲಿ ಮಾರುತಿ ಕಾಣಿಸಿಕೊಂಡು, ನಾನು ಆ ಮಡುವಿನಲ್ಲಿದ್ದೇನೆ. ನಾನು ಕಡಲಿನಲ್ಲಿ ಬಾಳಿದವ, ಉಸುಕಿನ ಮೇಲೆ ಮಲಗಿದಾಗ ಪ್ರವಾಹದಲ್ಲಿ ಕೊಚ್ಚಿಕೊಂಡು ಭೂಗರ್ಭದಲ್ಲಿ ಇಲ್ಲಿಗೆ ಬಂದು ಸೇರಿ, ಇಲ್ಲೇ ಕಲ್ಲು ಮೂರ್ತಿಯಾಗಿ ಈ ಮಡುವಿನಲ್ಲಿದ್ದೇನೆ. ಕಾರಣ ನನ್ನನ್ನು ಹೊರ ತೆಗೆದು, ಒಂದು ಬಂಡಿಯಲ್ಲಿ ಕರೆದೊಯ್ಯಿರಿ ಆ ಬಂಡಿ ಹೋಗುವಾಗ ನಿಮ್ಮೂರಿನ ಒಂದು ಸ್ಥಳದಲ್ಲಿ ಮುರಿದು ಬೀಳುತ್ತದೆ. ಆ ಜಾಗದಲ್ಲಿ ನನ್ನನ್ನು ಸ್ಥಾಪಿಸಿ ಗುಡಿಗಟ್ಟಿಸಿ ನನಗೂ ಪೂಜೆ ಮಾಡಿರಿ. ನಿಮ್ಮ ಗ್ರಾಮದ ಜನರನ್ನೆಲ್ಲಾ ಸಂರಕ್ಷಣೆ ಮಾಡುತ್ತೇನೆ" ಎಂದು ಸ್ಪಷ್ಟವಾಗಿ ಹೇಳಿದನು. ದಾಸಯ್ಯ ಈ ಸಮಾಚಾರವನ್ನು ಮರುದಿನ ಗ್ರಾಮದ ಮುಖ್ಯಸ್ಥರ ಮುಂದೆ

ಹೇಳಲಾಗಿ, ಗ್ರಾಮದ ಮುಖ್ಯಸ್ಥರೆಲ್ಲರೂ ಒಂದು ಬಂಡಿಯನ್ನು ತೆಗೆದುಕೊಂಡು ದಾಸಯ್ಯ ತೋರಿಸಿದ ಸ್ಥಳಕ್ಕೆ ಹೋದರು. ಆಗ ದಾಸಯ್ಯ ಆ ಮಡುವಿನಲ್ಲಿ ಮುಳುಗಿ ಮಾರುತಿಯ ವಿಗ್ರಹವನ್ನು ಎರಡು ಕೈಯಲ್ಲಿ ವಿಗ್ರಹವನ್ನು ಹೊತ್ತುಕೊಂಡು ಮೇಲೆದ್ದನು. ಆಗ ಊರಿನವರೆಲ್ಲರೂ ಸೇರಿ ಮಾರುತಿ ಗುಡಿ ಇರುವ ಸ್ಥಳಕ್ಕೆ ಬಂದ ಕೂಡಲೆ, ಮಾರುತಿಯ ವಿಗ್ರಹ ಕೆಳಗೆ ಬಿತ್ತು. ಕಾರಣ ಅಲ್ಲಿಯೇ ಆ ಮಾರುತಿಯನ್ನು ಸ್ಥಾಪನೆ ಮಾಡಿ ಒಂದು ಸಣ್ಣ ಗುಡಿ ಕಟ್ಟಿಸಿ ಪೂಜೆ ಮಾಡತೊಡಗಿದರು.

ಈ ಮಾರುತಿ ದಾಸಯ್ಯನ ಕನಸಿನಲ್ಲಿ ಇನ್ನೊಂದು ವಿಷಯವನ್ನು ಹೇಳಿದನು. ತನ್ನ ವಿಗ್ರಹ ಸಿಕ್ಕ ಸ್ಥಳದಲ್ಲಿ ಅದೇ ಮಡುವಿನಲ್ಲಿ ನನ್ನ ಅಣ್ಣನಾದ ಇನ್ನೊಂದು ತನಗಿಂತಲೂ ದೊಡ್ಡದಾದ ಮಾರುತಿ ವಿಗ್ರಹವಿದೆ. ಅದಕ್ಕಾಗಿ ಆಗಾಗ್ಗೆ ತನಗೆ ತನ್ನ ಅಣ್ಣನ ಭೇಟಿ ಮಾಡಿಸಬೇಕೆಂದು ಹೇಳಿದನು. ಈ ಕಾರಣಕ್ಕಾಗಿ ಈ ಮಾರುತಿಯ ಯಾವುದೇ ಉತ್ಸವ ಹೊರಟಾಗ ಉತ್ಸವ ಮೂರ್ತಿ ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು, ಆ ಮಡುವಿನ ಹತ್ತಿರ ಒಯ್ದು ಅಲ್ಲಿ ಮಂಗಳಾರತಿ ಮಾಡಿ ವಾಪಸ್ಸು ಬರುವ ಪದ್ಧತಿಯಿದೆ. ಮತ್ತೊಂದು ಐತಿಹ್ಯದ ಪ್ರಕಾರ ಕಡಲಬಾಳು ಮೂಲತಃ ಈಗಿರುವ ಸ್ಥಳದಲ್ಲಿ ಇರಲಿಲ್ಲ. ಈಗಿರುವ ಸ್ಥಳದಿಂದ ಉತ್ತರಕ್ಕೆ ಒಂದು ಕಿ.ಮೀ. ಸ್ಥಳದಲ್ಲಿ ಲಾಚಿಗೊಂಡನಹಳ್ಳಿ ರಸ್ತೆಯ ಪಕ್ಕ ಸಣ್ಣ ಗುಡ್ಡ (ರಾಮದೇವರ ಗುಡ್ಡ)ದ ಹತ್ತಿರ ಇತ್ತು. ಆ ಗ್ರಾಮಕ್ಕೆ ರಾಮಪುರ ಎಂಬ ಹೆಸರಿತ್ತು. ಆಗ ಅಲ್ಲಿ ಕೆಲವು ಮನೆಗಳು ಮಾತ್ರ ಇದ್ದವು ಎಂಬುದಕ್ಕೆ ಹೊಲದಲ್ಲಿ ಕೆಲಸ ಮಾಡುವಾಗ ಮನೆಯಲ್ಲಿ ಉಪಯೋಗಿಸುವ ವಸ್ತುಗಳು ಸಿಕ್ಕ ನಿದರ್ಶನಗಳಿವೆ.

ಒಮ್ಮೆ ಈ ಊರಿಗೆ ಚಿಗರೆ ಚರ್ಮದ ಹಲಗೆಗಳನ್ನು ಧರಿಸಿದ ಬಾಲಕರಿಬ್ಬರು ದೇಶಾಂತರವಾಗಿ ಬಂದು ಊರೆಲ್ಲಾ ಅಲೆದಾಡಿದರು. ನಿವಾರು? ಎಂಬುದನ್ನು ಯಾರೂ ವಿಚಾರಿಸಿರಲಿಲ್ಲ. ಭಿಕ್ಷಾಟನೆಗೆ ಬಂದವರು ಇರಬಹುದೆಂದು ಊರಿನ ಜನರು ತಿಳಿದುಕೊಂಡಿದ್ದರು. ಈ ಬಾಲಕರು ಮೂರು ನಾಲ್ಕು ದಿವಸ ಊರೆಲ್ಲಾ ಅಲೆದಾಡಿದರೂ ಒಂದು ತೊಟ್ಟು ನೀರು, ಆಹಾರ ಸೇವಿಸದಿರುವುದನ್ನು ಊರಿನ ಜನರು ಗಮನಿಸಿದರು. ಊರಿನ ಕೆಲವು ಹಿರಿಯರೆಲ್ಲಾ ಸೇರಿ, ಊರಿನ ಜನತೆಗೆ ಕೇಳಿದರು. ನೀವೇನಾದರು ಕುಡಿಯಲಿಕ್ಕೆ ಮತ್ತು ತಿನ್ನಲಿಕ್ಕೆ ಏನಾದರು ಕೊಟ್ಟಿದ್ದೀರಾ ಅಥವಾ ಆ ಬಾಲಕರು ಯಾರ ಮನೆಗಾದರು ಭಿಕ್ಷೆ ಕೇಳಲಿಕ್ಕೆ ಹೋಗಿದ್ದರೆ? ಎಂಬ ಪ್ರಶ್ನೆಗಳನ್ನು ಕೇಳಿದಾಗ ಊರಿನ ಎಲ್ಲ ಜನರಿಂದ, ನಾವು ಏನನ್ನೂ ಕೊಟ್ಟಿಲ್ಲ ಮತ್ತು ಬಾಲಕರು ಯಾರ ಮನೆಗಳಿಗೂ ಭಿಕ್ಷೆಗೆ ಬಂದಿಲ್ಲ ಎಂಬ ಉತ್ತರ ಬಂತು.

ಗ್ರಾಮದ ಜನರು ಕೊಟ್ಟ ಉತ್ತರದಿಂದ ಊರಿನ ಪ್ರಮುಖರೆಲ್ಲರೂ ಬೆರಗಾದರು. ನೋಡಲು ಚಿಕ್ಕ ಬಾಲಕರಿದ್ದಾರೆ. ಮೂರ್‍ನಾಲ್ಕು ದಿವಸಗಳಿಂದ ಏನನ್ನೂ ತಿಂದಿಲ್ಲ, ನೀರನ್ನು ಕುಡಿದಿಲ್ಲ ಆದರೂ, ಈ ಬಾಲಕರ ಮುಖಗಳು ಮಾತ್ರ ಕಳೆಕುಂದಿಲ್ಲ. ಹಸಿವೆ ಎಂಬುದೇ ಇವರಿಗೆ ಗೊತ್ತಿಲ್ಲವೆಂದ ಮೇಲೆ ಈ ಬಾಲಕರು ಯಾರು ಎಂದು, ತಿಳಿದುಕೊಳ್ಳಬೇಕು ಎಂದು ಇಡೀ ಗ್ರಾಮದ ಜನತೆ ಒಂದು ಕಡೆ ಸಭೆ ಸೇರಿ ಆ ಬಾಲಕರನ್ನು ವಿಚಾರಿಸಿದಾಗ, ಅವರು ಮಾತನಾಡಲೂ

ಇಲ್ಲ. ಊಂ ಗುಡಲಿಲ್ಲ. ಹಾಗೆಯೇ ನೆಲದ ಕಡೆ ನೋಡಿಕೊಂಡು ನಿಂತಿದ್ದರು. ಅದರಲ್ಲಿ ಒಬ್ಬ ಬಾಲಕ ಪಕ್ಕದಲ್ಲಿ ಹಸುವಿನ ಹಾಲು ಕರೆಯುತ್ತಿದ್ದ ಹೆಣ್ಣುಮಗಳನ್ನು ದಿಟ್ಟಿಸಿ ನೋಡುತ್ತಿದ್ದನು. ಆಗ ಹಿರಿಯರೊಬ್ಬರು ಹಾಲು ಕುಡಿಯುತ್ತೀರಾ? ಎಂದು ಕೇಳಿದಾಗ ಬಾಲಕರಿಬ್ಬರೂ ತಲೆದೂಗಿದರು. ಕರೆದ ಹಾಲನ್ನು ತಂಬಿಗೆಯಲ್ಲಿ ಹಾಲು ಕೊಡಲಿಕ್ಕೆ ಹೋದಾಗ ಕೈಯಲ್ಲಿ ತೆಗೆದುಕೊಳ್ಳದೆ ನೆಲದಲ್ಲಿ ಮಣ್ಣಿನಿಂದ ದೋಣಿ ಮಾಡಿ, ಅದರಲ್ಲಿ ಹಾಲನ್ನು ಹಾಕಲು ಕೈಸನ್ನೆ ಮಾಡಿ ತೋರಿಸಿದರು. ಅವರು ಹೇಳಿದಂತೆ ನೆಲದಲ್ಲಿ ಮಣ್ಣಿನ ದೋಣಿ ಮಾಡಿ ಹಾಲನ್ನು ಅದರಲ್ಲಿ ಹಾಕಿದರು. ಆದರೆ ನೆಲ ಹಾಲನ್ನು ಹೀರಿಕೊಳ್ಳಲಿಲ್ಲ. ಆಗ ಬಾಲಕರಿಬ್ಬರೂ ನೆಲದ ಮೇಲೆ ಮಂಡಿಯೂರಿ ಹಾಲನ್ನು ಕುಡಿದರು. ನೆಲದಲ್ಲಿ ಹಾಕಿದ ಹಾಲು ಬತ್ತದೇ ಇರುವುದನ್ನು ಗಮನಿಸಿದ, ಊರಿನ ಹಿರಿಯರು ನೀವು ಸಾಧಾರಣ ಬಾಲಕರಲ್ಲ ಇವರಲ್ಲಿ ಮಹಾನ್ ಶಕ್ತಿ ಅಡಗಿದೆ ಎಂದು, ಅವರು ಯಾರು? ಹೇಗಾದರು ಮಾಡಿ ತಿಳಿದುಕೊಳ್ಳಬೇಕೆಂದು ನಿರ್ಧರಿಸಿದರು. ಅದರಂತೆ ಈ ಬಾಲಕರನ್ನು ಕುರಿತು ನೀವು ಯಾರು? ನಿಮ್ಮ ಕೊರಳಲ್ಲಿ ಕಟ್ಟಿಕೊಂಡಿರುವುದೇನು? ಇಲ್ಲಿಕೇಗೆ ಬಂದಿರಿ ನಿಮ್ಮ ಉದ್ದೇಶವೇನು? ಮತ್ತು ನಮ್ಮಿಂದ ನಿಮಗೆ ಏನಾಗಬೇಕು ಎಂಬುದನ್ನು ದಯವಿಟ್ಟು ತಿಳಿಸಬೇಕು. ನೀವು ಹೇಳಿದ ಪ್ರಕಾರ ನಡೆದುಕೊಳ್ಳುತ್ತೇವೆ ಎಂದರು. ಊರಿನ ದೈವದವರು ಆ ಬಾಲಕರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

ಆಗ ಬಾಲಕರಿಬ್ಬರು ಇಡೀ ದೈವಕ್ಕೆ ಎರಡು ಕೈಗಳನ್ನು ಜೋಡಿಸಿ ಕೈಮುಗಿದರು. ಅದರಲ್ಲಿ ಒಬ್ಬ ಬಾಲಕ ಹೀಗೆಂದನು. "ದೈವ ಪ್ರೇರಣೆಯಿಂದ ನಾವು ಈ ಗ್ರಾಮಕ್ಕೆ ಬಂದಿದ್ದೇವೆ. ನನ್ನ ಹೆಸರು ಹಾಲಭೂತಿ ನನ್ನ ಪಕ್ಕದಲ್ಲಿರುವವನ ಹೆಸರು ರಕ್ತಭೂತಿ. ನಾವಿಬ್ಬರೂ ಅಣ್ಣತಮ್ಮಂದಿರು ನಾವು ಎಲ್ಲಿ ಜನಿಸಿದವು ಎಂಬುದು ಗೊತ್ತಿಲ್ಲ. ನಾವು ಎಲ್ಲಿಂದ ಬಂದಿದ್ದೇವೆ ಎನ್ನುವುದು ಸಹಾ ಗೊತ್ತಿಲ್ಲ. ನಮಗೆ ಬಂಧು, ಬಳಗ ಯಾರೂ ಇಲ್ಲ. ನಮಗೆ ನೀವೆ ಬಂಧುಗಳು, ಆಶ್ರಯದಾತರಾದ ನಮಗೆ ಮಾರ್ಗದರ್ಶನ ನೀಡುತ್ತಾ ನಿಮ್ಮಿಂದ ಮಹತ್ತರ ಕಾರ್ಯ ಮಾಡಿಸಲು ಇಲ್ಲಿಗೆ ಬಂದಿದ್ದೇವೆ. ನಿಮ್ಮೂರಿನಲ್ಲಿ ಆಂಜಿನೇಯನ ಮೂರ್ತಿಯನ್ನು ಸ್ಥಾಪಿಸಲು ದೈವ ಪ್ರೇರಣೆಯಾಗಿದೆ. ಇದರಿಂದ ನಿಮ್ಮೂರಿಗೆ ಒಳ್ಳೆಯದಾಗಿ ನಿಮ್ಮೂರು ದೈವ ಪ್ರಸಿದ್ಧಿಯನ್ನು ಪಡೆಯುತ್ತದೆ" ಎಂದನು. ಈ ಮಹಾನ್ ಬಾಲಕರ ವಾಣಿಯನ್ನು ಕೇಳಿದ ಇಡೀ ಗ್ರಾಮವೇ ಒಪ್ಪಿ ಆ ಬಾಲಕನಿಗೆ ಆಂಜಿನೇಯನನ್ನು ಸ್ಥಾಪಿಸಲು ಒಪ್ಪಿಗೆ ಕೊಟ್ಟರು. ಮರುದಿನ ಬೆಳಿಗ್ಗೆ ಇಡೀ ಗ್ರಾಮವೇ ಶೃಂಗಾರಗೊಂಡಿತು. ಬೀದಿಗಳನ್ನೆಲ್ಲಾ ತಳಿರು ತೋರಣಗಳಿಂದ ಅಲಂಕೃತಗೊಳಿಸಿದರು. ಮತ್ತೆ ದೈವಸ್ತರೆಲ್ಲಾ ಸಭೆ ಸೇರಿದರು. ಆಂಜಿನೇಯ ಮೂರ್ತಿಯನ್ನು ಬಾಲಕರು ಎಲ್ಲಿಂದ ತರುತ್ತಾರೋ ಎಂಬ ಕುತೂಹಲ ಎಲ್ಲರಲ್ಲಿಯೂ ಇತ್ತು. ಆಗ ಬಾಲಕನೊಬ್ಬನು ಜನರನ್ನು ಕುರಿತು ನಿಮ್ಮೂರಿನ ಹಳ್ಳದ ತಿರುವಿನಲ್ಲಿರುವ ಮಡುವಿನಲ್ಲಿ ಮೂರು ದಿನಗಳ ಕಾಲ ಮುಳುಗಿ ಆಂಜಿನೇಯನ ಮೂರ್ತಿಯನ್ನು ಹೊತ್ತು ತರುತ್ತೇವೆ. ಅದನ್ನು ಒಂದು ಬಂಡಿಯಲ್ಲಿ ತೆಗೆದುಕೊಂಡು ಹೋಗಿರಿ, ಬಂಡಿಯ ಅಚ್ಚು ಎಲ್ಲಿ ಮುರಿದು ಬೀಳುತ್ತದೆಯೋ ಅಲ್ಲಿಯೇ ಆಂಜಿನೇಯನ ಮೂರ್ತಿಯನ್ನು ಸ್ಥಾಪನೆ ಮಾಡಿರಿ ಎಂದನು. ಬಾಲಕನು ಹೇಳಿದಂತೆ

ಊರಿನ ದೈವಸ್ಥರು ವಾದ್ಯಗಳ ಸಮೇತ ಬಂಡಿಯೊಂದಿಗೆ ಹಳ್ಳದ ತಿರುವಿನ ಮಡುವಿನ ಹತ್ತಿರ ಹೋದರು. ಬಾಲಕರಿಬ್ಬರೂ ದೈವಕ್ಕೆ ನಮಸ್ಕರಿಸಿ, ಹಳ್ಳದ ಗುಂಡಿಯಲ್ಲಿ ಮುಳುಗಿದರು. ಎರಡು ದಿನ ಆದರೂ ಬಾಲಕರು ಮೇಲೆ ಬರಲೇ ಇಲ್ಲ. ಜನರಿಗೆ ಚಿಂತೆಯಾಯಿತು. ಮೂರು ದಿನಗಳ ನಂತರ ನೀರಿನ ಮೇಲೆ ಗುಳ್ಳೆಗಳು ಬರಲು ಪ್ರಾರಂಭವಾದವು. ಗುಳ್ಳೆಗಳು ಬರುಬರುತ್ತಾ ದೊಡ್ಡ ಆಕಾರ ತಾಳುತ್ತಿರುವುದನ್ನು ನೋಡಿ ಬಾಲಕರು ಮೇಲೆ ಬರಬಹುದೆಂದು ಊಹಿಸಿದರು.

ಕುತೂಹಲದಿಂದ ಎಲ್ಲರೂ ನೋಡುತ್ತಿದ್ದಂತೆ, ಆ ಬಾಲಕರು ಹನುಮನ ಶಿಲಾಮೂರ್ತಿಯನ್ನು ಹೊತ್ತುಕೊಂಡು ಮಡುವಿನ ಮೇಲಕ್ಕೆದ್ದು ಬಂದರು. ಜನರು ಸಂತೋಷದಿಂದ ಕುಣಿದಾಡಿದರು. ಆ ಮೂರ್ತಿಯನ್ನು ದಂಡೆ ಮೇಲಿಟ್ಟು ಪೂಜೆ ಮಾಡಿದ ನಂತರ ತಾವು ತಂದ ಬಂಡಿಯಲ್ಲಿ ಏರಿಕೊಂಡು ಊರಿನ ಕಡೆ ಪ್ರಯಾಣ ಬೆಳೆಸಿದರು. ಆದರೆ ಮೂರ್ತಿಯನ್ನು ಹೊತ್ತು ತಂದ ಬಂಡಿಯ ಅಚ್ಚು ಈಗಿರುವ ದೇವಸ್ಥಾನದ ಜಾಗದಲ್ಲೇ ಮುರಿದು ಬಿದ್ದಿತು. ಬಾಲಕನು ಹೇಳಿದಂತೆ ಮೂರ್ತಿಯನ್ನು ಅಲ್ಲಿಯೇ ಇರಿಸಿ, ದಕ್ಷಿಣ ದಿಕ್ಕಿಗೆ ಮುಖಮಾಡಿ ನಿಲ್ಲಿಸಿದರು. ಆದರೆ ಆಂಜಿನೇಯನ ನಿತ್ಯಪೂಜೆ ಮಾಡಲಿಕ್ಕೆ ಯಾರೂ ಮುಂದೆ ಬರಲಿಲ್ಲ. ಕೊನೆಗೆ ಊರಿನ ದೈವಸ್ಥರ ತೀರ್ಮಾನದಂತೆ, ಆಂಜಿನೇಯನ ಮೂರ್ತಿ ಹೊತ್ತು ತಂದ ಬಾಲಕರೆ ಪೂಜೆ ಮಾಡಲು ನಿರ್ಧರಿಸಲಾಯ್ತು. ಆ ಬಾಲಕರು ಸಂತೋಷದಿಂದ ಅದಕ್ಕೆ ಒಪ್ಪಿದರು. ಅವರು ಕಟ್ಟಿಕೊಂಡಿದ್ದ ಹಲಗೆಗಳನ್ನು ಒಂದು ಮರಕ್ಕೆ ನೇತುಹಾಕಿದರು. ಮೂರ್ತಿ ಸ್ಥಾಪಿಸಿದ ಜಾಗದಲ್ಲಿ ಮೊದಲು ಊರು ಇರಲಿಲ್ಲ. ಆ ಪ್ರದೇಶ ಗಿಡ ಮರಗಳಿಂದ ಆವೃತ್ತವಾಗಿತ್ತು. ಮೂರ್ತಿ ಸ್ಥಾಪಿಸಿದ ನಂತರ ಊರನ್ನು ದೇವರಿರುವ ಸ್ಥಳಕ್ಕೆ ಸ್ಥಳಾಂತರಿಸಲಾಯಿತು. ಆ ಬಾಲಕರಿಬ್ಬರೂ ಆಂಜಿನೇಯನ ಪೂಜೆ ಮಾಡಲು ಖಾಯಂ ಆಗಿ ನೇಮಕವಾದ್ದರಿಂದ ಆ ಬಾಲಕರಿಗೆ ಅದೇ ಊರಿನಲ್ಲಿ ಕನ್ಯೆಯರನ್ನು ತೆಗೆದು ಲಗ್ನ ಮಾಡಿದರು. ಹೀಗೆ ಆಂಜಿನೇಯನ ಮುಖ್ಯ ಪೂಜೆ ಆ ಬಾಲಕರಿಂದಲೇ ಪ್ರಾರಂಭವಾದುದರಿಂದ ಅವರಿಗೆ ಪೂಜಾರಿ ಮನೆತನದವರೆಂದು ಕರೆದರು. ಈ ಊರಿನಲ್ಲಿ ಆಂಜಿನೇಯನ ಪೂಜೆ ಮಾಡುತ್ತಿರುವ ಪೂಜಾರ ವಂಶ ಆ ಬಾಲಕರಿಂದಲೇ ಬೆಳೆದುಬಂದಿದೆ.

ಪೂಜಾರ ಮನೆತನದವರು ಇಂದಿಗೂ ಕೂಡಾ ಮೊದಲ ಮಗನ ಮದುವೆ ಸಂದರ್ಭದಲ್ಲಿ, ರಕ್ತಭೂತ ಮತ್ತು ಹಾಲುಭೂತ ಹಲಗೆಗಳನ್ನು ಅದ್ದೂರಿಯಿಂದ ಮಾರುತಿ ಸಿಕ್ಕ ಮಡುವಿನ ಹತ್ತಿರ ಹೊರಡಿಸುತ್ತಾರೆ. ಆಗ ಅವರ ಪೈಕಿ ಇಬ್ಬರು ಹಿರಿಯರು ಸ್ನಾನಮಾಡಿ ಹೊಸ ಬಟ್ಟೆಯನ್ನು ತೊಟ್ಟು ಆ ಹಲಗೆಗಳಿಗೂ ಸ್ನಾನ ಮಾಡಿಸುತ್ತಾರೆ. ರಕ್ತಭೂತ ಎಂಬ ಹೆಸರಿನ ಹಲಗೆಯನ್ನು ಕೊರಳಲ್ಲಿ ಕಟ್ಟಿಕೊಂಡ ಮನುಷ್ಯ ತನ್ನ ಕೈಯನ್ನು ಕಡಿದುಕೊಂಡು ಆ ಹಲಗೆಯ ಮೇಲೆ ರಕ್ತ ಸುರಿಸುತ್ತಾನೆ. ಹಾಲಭೂತ ಎಂಬ ಹೆಸರಿನ ಹಲಗೆಯನ್ನು ಕೊರಳಲ್ಲಿ ಕಟ್ಟಿಕೊಂಡ ಮನುಷ್ಯನ ಹಲಗೆಯ ಮೇಲೆ ಹಾಲನ್ನು ಹಾಕಿದ ನಂತರ ಅದನ್ನು ಕೊರಳಲ್ಲಿ ಕಟ್ಟಿಕೊಳ್ಳುತ್ತಾನೆ. ಆ ಎರಡು ಹಲಗೆಗಳಿಗೂ ಹೊಸ ಬಟ್ಟೆಯನ್ನು ಹೊದಿಸಿರುತ್ತಾರೆ. ನಂತರ ಅವರಿಬ್ಬರನ್ನೂ ವಾದ್ಯಗಳ ಸಮೇತ ಮೆರವಣಿಗೆಯಲ್ಲಿ ಊರಿನೊಳಕ್ಕೆ ಕರೆದುಕೊಂಡು ಬರುತ್ತಾರೆ. ಆ ಹಲಗೆಗಳನ್ನು ಕಟ್ಟಿಕೊಂಡ ಇಬ್ಬರ ವ್ಯಕ್ತಿಗಳ ಮೇಲೆ

ದೇವರು ಆವೇಶವಾಗಿ ಬರುತ್ತಾನೆ. ಅವರನ್ನು ಹಿಡಿಯುವುದೇ ಕಷ್ಟವಾಗುತ್ತದೆ. ಈ ಪದ್ಧತಿ ಪುರಾತನ ಕಾಲದಿಂದ ಇಂದಿಗೂ ನಡೆದುಕೊಂಡು ಬಂದಿದೆ. (ಉಮಾಪತಿ ಬಿ., ೨೦೦೨, ಪುಟ-೧೩-೧೭)

**ಕಾಳಮ್ಮ (ಕಾಳಿಕಾದೇವಿ ಗುಡಿ):** ಕೆಂಚಮಲ್ಲನಹಳ್ಳಿ ಗ್ರಾಮದ ಊರ ಹೊರಗೆ ಈ ಗುಡಿ ಇದೆ. ಮಳೆಗಾಲದಲ್ಲಿ ಬಹಳ ದಿನ ಮಳೆ ಬಾರದಿದ್ದಾಗ, ಊರಿನ ಪ್ರಮುಖರು ಸೇರಿಕೊಂಡು ಕುರಿಯನ್ನು ಬಲಿಕೊಟ್ಟು ಒಂದು ಕುರುಹು ಕೇಳುತ್ತಾರೆ. ಈ ಸಂದರ್ಭದಲ್ಲಿ ಮಳೆ ಬಂದರೆ ಕಾಳಮ್ಮನಿಗೆ ಕುರಿ ಬಲಿಕೊಟ್ಟಿದ್ದಕ್ಕೆ ಮಳೆ ಬಂತು, ಎಂದು ಹೇಳುವುದು ವಾಡಿಕೆ. ಇಂದಿಗೂ ಆ ಸಂಪ್ರದಾಯ ಸ್ಮರಿಸಬಹುದು. ಹಿಂದೆ ಕಾಳಿಕಾದೇವಿಯ ಜಾತ್ರೆ ಆಗುತ್ತಿದ್ದು, ಕಾಳಿಕಾದೇವಿಯ ರಥೋತ್ಸವವನ್ನು ದೊಡ್ಡ ತಮ್ಮಪ್ಪರ ಹೊಲದಲ್ಲಿನ ಬನ್ನಿ ಮರದವರೆಗೆ ಎಳೆಯಲಾಗುತ್ತಿತ್ತೆಂದು ಊರಿನ ಹಿರಿಯರೊಬ್ಬರು ನಿರೂಪಿಸುತ್ತಾರೆ.

**ಕಾಡುಸಿದ್ದೇಶ್ವರ:** ಸಿರುಗುಪ್ಪ ತಾಲೂಕಿನ ತೆಕ್ಕಲಕೋಟೆಯಲ್ಲಿ ಬಂದು ನೆಲೆಸಿದ್ದು, ಜೀವ ಸಮಾಧಿಯಾದ ಒಬ್ಬ ತಾತನೆ ಈ ಮೇಲಿನ ದೈವ ಸ್ವರೂಪಿ. ಆ ವ್ಯಕ್ತಿ ಬಂದು ಇಲ್ಲಿನ ಸ್ಮಶಾನದಲ್ಲಿ ವಾಸದಿಂದ ಕೊನೆಯವರೆಗೆ ಕಾಡಿ(ಸ್ಮಶಾನ)ನಲ್ಲಿಯೇ ಇದ್ದನಂತೆ. ಆದ್ದರಿಂದ ಆತನಿಗೆ ಕಾಡುಸಿದ್ಧೇಶ್ವರ ಎಂದು ಹೆಸರು ಬಂತು. ಈ ಕಾಡ ಸಿದ್ಧೇಶ್ವರ ೭೭೫ ವರ್ಷ ಬದುಕಿದ್ದ ಎಂಬ ನಂಬಿಕೆಯಿದೆ. ಅದಕ್ಕೆ ಅವನ ಕುರುಹುಗಾಗಿ ೭೭೫ ಬಾವಿಗಳು ತೆಕ್ಕಲಕೋಟೆಯಲ್ಲಿವೆ ಎಂದು ಹೇಳುತ್ತಾರೆ. ಒಮ್ಮೆ ಒಬ್ಬ ಮುದುಕಿ ಹೀಗೆ ಅಂದಳಂತೆ (ಹದ್ದು ಬಾಳಿದಂಗೆ, ಸಿದ್ದ ಬಾಗಿದಂಗೆ) ಹದ್ದು ಬಾಳಿದಂಗ ಬಾಳಿದ ಸಿದ್ದಪ್ಪ ನಿನ್ನ ಸದ್ದು ಅಡಗಿಲ್ಲಲ್ಲೋ ಎಂದಳಂತೆ. ಅದಕ್ಕೆ ಮರುದಿನ ಐಕ್ಯರಾದಂತೆ ಎಂದು ಸಿದ್ಧೇಶ್ವರನ ಬಗ್ಗೆ ವಿವರಣೆ ನೀಡುತ್ತಾರೆ.

**ಕುಮಾರಸ್ವಾಮಿ:** ಸಂಡೂರಿನ ಎಂಟು ಕಿ.ಮೀ. ದೂರದಲ್ಲಿ ಗುಡ್ಡದ ಮೇಲೆ ಕುಮಾರಸ್ವಾಮಿ ದೇವಸ್ಥಾನವಿದೆ. ಈ ಸ್ವಾಮಿಯ ಬಗೆಗೆ ಅನೇಕ ಐತಿಹ್ಯಗಳಿವೆ.

ಕುಮಾರಸ್ವಾಮಿ ಒಬ್ಬ ಕಟ್ಟಾ ಬ್ರಹ್ಮಚಾರಿ. ಈತನಿಗೆ ಮದುವೆಯಾಗಲೇ ಇಲ್ಲ. ಈ ವಿಚಾರವನ್ನು ತಿಳಿದುಕೊಳ್ಳಲಿಕ್ಕೆ ಒಂದು ಸುಂದರವಾದ ಕಥೆಯೇ ಇದೆ. ಯೌವ್ವನಕ್ಕೆ ಬಂದ ಕುಮಾರನಿಗೆ ಮದುವೆ ಮಾಡಲು ತಾಯಿ ಕನ್ಯಗಾಗಿ ಹುಡುಕಾಟ ಪ್ರಾರಂಭಿಸಿದಳು. ದಕ್ಷಿಣ ದೇಶದ ಕನ್ಯಾಕುಮಾರಿಯನ್ನು ನೋಡಿ ಬಂದು ಮಗನಿಗೆ ತಿಳಿಸಿ, ಮದುವೆಗೆ ಅವನ ಮನ ಒಲಿಸಲು ಯತ್ನಿಸುತ್ತಾಳೆ. ಮಗ ಹೀಗೆ ಕೇಳಿದ ಕನ್ಯಾ ನೋಡಲಿಕ್ಕೆ ಹೇಗಿದ್ದಾಳೆ? ತಾಯಿ ನನ್ನಂತೆ ಬಹಳ ಸುಂದರಿಯಾಗಿದ್ದಾಳೆ ಎಂದಳಂತೆ. ಈ ಮಾತು ಕೇಳಿದ ಕುಮಾರ ಹೀಗೆಂದ ನಿನ್ನಂತೆ ಇದ್ದರೆ ನನಗೆ ತಾಯಿಯಂತೆ, ನನಗೆ ಮದುವೆ ಬೇಡ ಎಂದನಂತೆ. ಪಾರ್ವತಿಯು ಹಾಗಲ್ಲ ಮಗ, ಎಂದು ಎಷ್ಟು ಬೇಡಿಕೊಂಡರೂ ಮಗ ಕೇಳಲಿಲ್ಲ. ಒಂದೇ ಹಠ ಹಿಡಿದ. ನನಗೆ ಮದುವೆ ಬೇಡವೇ ಬೇಡ ಅಂದ. ಇದನ್ನು ಕೇಳಿದ ತಾಯಿಗೆ ಸಾಕಾಗಿ ಹೋಯ್ತು. ಕೊನೆಗೆ ತಾಯಿಗೆ ಸಿಟ್ಟು

ಬಂತು. ತಾನು ಹೆತ್ತು, ಹೊತ್ತು ಮೊಲೆಕುಡಿಸಿ ಸಾಕಿ, ದೊಡ್ಡವನನ್ನಾಗಿ ಮಾಡಿದ್ದಕ್ಕೆ ನನಗೆ ನೀನು ಕೊಡುವ ಪ್ರತಿಫಲ ಇದೇ ಏನು? ಎಂದು ಹಂಗಿಸಿದಳು. ಅದಕ್ಕೆ ಕುಮಾರ "ನನಗೆ ನಿನ್ನ ಹಂಗೇ ಬೇಡ ತೆಗೆದುಕೋ ನೀನು ಕೊಟ್ಟ ಹಾಲನ್ನು" ಎಂದು ಕಾರಿಕೊಂಡ. ಹಾಲಿನ ಜೊತೆಗೆ ರಕ್ತವೂ ಹೊರಬಿತ್ತು. ಹಾಲಿನ ಭಾಗವೆಲ್ಲ ವಿಭೂತಿಯ ಕಣಿವೆಯಾಯ್ತು. ರಕ್ತದ ಭಾಗವೆಲ್ಲ ಜಾಜಿ ಕಣಿವೆಯಾಯಿತು. ಈಗಲೂ ಕುಮಾರಸ್ವಾಮಿಯ ಬೆಟ್ಟದಲ್ಲಿ ಇಂತಹ ಕೆಲಭಾಗಗಳನ್ನು ಗುರುತಿಸುತ್ತಾರೆ. ಅಂದಿನಿಂದ ಕುಮಾರಸ್ವಾಮಿಗೆ ಸ್ತ್ರೀಯ ದರ್ಶನವೇ ಬೇಡವಾಯಿತು. ಆದ್ದರಿಂದ ಇಂದಿಗೂ ಸ್ತ್ರೀಯರಿಗೆ ಆತನ ದೇವಸ್ಥಾನದಲ್ಲಿ ಪ್ರವೇಶವಿಲ್ಲದಂತೆ ನಿಷೇದವು ಇತ್ತು. ಇತ್ತೀಚೆಗೆ ಅದು ಸಡಿಲಗೊಂಡಿದೆ. ಎಲ್ಲ ಸ್ತ್ರೀಯರು ದೇವಸ್ಥಾನಕ್ಕೆ ಒಳಹೋಗಲು ಈಗಲೂ ಹೆದರುತ್ತಾರೆ. (ವಕ್ತೃ, ಕಂಪ್ಲೆಪ್ಪ, ೬೫, ಸಂಡೂರು)

ಮತ್ತೊಂದು ಐತಿಹ್ಯದ ಪ್ರಕಾರ "ಕುಮಾರಸ್ವಾಮಿಯ ದೇವಾಲಯದ ಮುಂಭಾಗದಲ್ಲಿಯ ವಿಶಾಲವಾದ ಕೊಳವನ್ನು ಅಗಸ್ತ್ಯ ಮಹರ್ಷಿಗಳು ಸ್ಥಾಪಸಿದರೆಂದು ಪ್ರತೀತಿ. ಕುಮಾರಸ್ವಾಮಿ ಬ್ರಹ್ಮಚಾರಿಯಾಗಿದ್ದು, ಅಗಸ್ತ್ಯರಿಗೆ ಶಿವ ಸ್ವರೂಪ ಜ್ಞಾನವನ್ನು ಶಿವಪೂಜಾ ವಿಧಾನವನ್ನು ಹಾಗೂ ಅನೇಕ ವಿಚಾರಗಳನ್ನೂ ಬೋಧಿಸಿದರು. ಆಗ ಅಗಸ್ತ್ಯನು ಈ ತೀರ್ಥವನ್ನು ನಿರ್ಮಾಣ ಮಾಡಿದನಂತೆ. ಅಗಸ್ತ್ಯ ಮಹರ್ಷಿಗೆ ಬ್ರಹ್ಮಚಾರಿಯಾದ ಕುಮಾರಸ್ವಾಮಿ, ವಿಚಾರಗಳನ್ನು, ಶಿವಜ್ಞಾನವನ್ನು ಬೋಧಿಸುವ ಸನ್ನಿವೇಶದಲ್ಲಿ ಸ್ತ್ರೀಯರು ನೋಡಬಾರದೆಂದು, ಇಂದಿಗೂ ಒಂದು ವೇಳೆ ನೋಡಿದರೆ ಅಂತಹ ಸ್ತ್ರೀ 'ಏಳು ಜನ್ಮಗಳಲ್ಲಿ ವಿಧವೆಯಾಗಿ ಬಾಳಲಿ' ಎಂದು ಶಾಪಕೊಟ್ಟಿರುವನಂತೆ. ಆದ್ದರಿಂದ ಕೈಬೆರಳಿಕೆಯಷ್ಟು ಸ್ತ್ರೀಯರು ಮಾತ್ರ ಆ ದೇವಸ್ಥಾನಕ್ಕೆ ಪ್ರವೇಶ ಮಾಡಿದವರಿದ್ದಾರೆ. ಹೆಚ್ಚಿನ ಸ್ತ್ರೀಯರು ಇಂದಿಗೂ ಕೂಡ ಪ್ರವೇಶ ಮಾಡದೇ ಇರುವ ಸಂದರ್ಭವನ್ನು ನಾವು ಗಮನಿಸಬಹುದು.

**ಕೋಟೆಯ ಹನುಮಂತ ದೇವರು:** ಹರಪನಹಳ್ಳಿಯ ಪಾಳೆಗಾರಿಕೆಯನ್ನು ಸ್ಥಾಪಿಸಿದ ದಾದೇನಾಯಕ ಒಮ್ಮೆ ಬೇಟೆಯಾಡುತ್ತಿದ್ದಾಗ, ನಾಯಿಯನ್ನು ಹೆದರಿಸಿದ ಒಂದು ಮೊಲಕ್ಕೆ ಬೆನ್ನು ಹತ್ತಲು, ಅದು ಹುತ್ತದಲ್ಲಿ ಅಡಗಿದರು. ಆಗ ಹುತ್ತವನ್ನು ಬಗೆಯಲು ಅಲ್ಲಿ ಒಂದು ಮೂರ್ತಿಶಿಲ್ಪ ಗೋಚರಿಸಿತು. ಅದೇ ಹರಪನಹಳ್ಳಿಯ ಈಗಿನ ಕೋಟೆ ಹನುಮಂತ ದೇವರು.

**ಕೌದಿಮಹಾಂತೇಶ್ವರ:** ಬಾಚಿಗೊಂಡನಹಳ್ಳಿಯ ಒಂದು ವಿಶೇಷವೆಂದರೆ ಉತ್ತರದ ತೋಂಟಾದಾರ್ಯರನ್ನು ತುಂಗಭದ್ರಾ ನದಿಯಿಂದ ಆಚೆಗೆ ದಾಟಿಸಿ, ಉತ್ತರ ಕರ್ನಾಟಕದಲ್ಲಿ ಖ್ಯಾತಿಯನ್ನು ಬೆಳಗಿದ ವಿಶೇಷ ತೋಂಟದಾರ್ಯರ ಪೀಠ ಪರಂಪರೆಯಲ್ಲಿ ಜೀವ ಸಮಾಧಿಯಾದವರು ಬೇರೆ ಯಾರೂ ಇಲ್ಲ ಅವರೊಬ್ಬರೆ. ಅವರ ಪರಂಪರೆ ಮಠವೂ ಸಹಾ ಇರುವುದು ಕಂಡುಬರುತ್ತದೆ. ಮಹಾಂತೇಶ್ವರನಿಗೆ ಕೌದಿಮಹಾಂತೇಶ್ವರ ಎಂಬ ಹೆಸರು ಬರಲು ಹೀಗೆ ಕಾರಣವೆಂದು ಹೇಳುತ್ತಾರೆ. ಊರ ಹೊರಗೆ ಇರುವ ಸ್ಮಶಾನದಲ್ಲಿ ಸತ್ತವರ ಹೆಣವನ್ನು ಕೌದಿಯಲ್ಲಿ ತರುತ್ತಿದ್ದರು. ಆ ಹೆಣವನ್ನು ಹೂತು ಬಂದರೆ, ಅಲ್ಲಿರುವ ಕೌದಿಯನ್ನು ಹೊದ್ದುಕೊಂಡು ಆತ ಇರುತ್ತಿದ್ದನಂತೆ ಅದಕ್ಕಾಗಿ ಕೌದಿ ಮಹಾಂತೇಶ್ವರ ಎಂದು ಕರೆಯುತ್ತಾರೆಂದು ಹೇಳುತ್ತಾರೆ.

**ಖಂಡುಗ ಭಂಡಾರದಯ್ಯ:** "ಮೈಲಾರನಿಗೆ ಇರುವ ಹಲವು ನಾಮಾವಳಿಯಲ್ಲಿ ಇದೂ ಸಹ ಒಂದು. ಮೈಲಾರಲಿಂಗನ ಸಂಪ್ರದಾಯದಲ್ಲಿನ ಭಕ್ತರಿಗೆ 'ಭಂಡಾರ' ಎಂದರೆ ಬಹಳ ಪವಿತ್ರ. ಇದು ಅರಿಸಿನಪುಡಿ ಎಂಬ ಕಲ್ಪನೆ ಇರದೆ, ಮೈಲಾರನ ಪವಿತ್ರ ಭಸ್ಮವೆಂದು ತಮ್ಮ ಹಣೆಗೆ ಬಳಿದುಕೊಳ್ಳುವುದು ಬಹುದೊಡ್ಡ ಸಂಪ್ರದಾಯವಿದೆ.

ಮೈಲಾರಲಿಂಗ ರಾಕ್ಷಸರೊಡನೆ ಯುದ್ಧ ಮಾಡುತ್ತಿದ್ದ ಕಾಲದಲ್ಲಿ, ಮೈಯಿಗೆ ಲೇಪಿಸಿಕೊಂಡ ಹಳದಿ ವರ್ಣದ ಪುಡಿ ಮತ್ತು ಪೀತವರ್ಣದ ಬಟ್ಟೆಯ ಸಂಕೇತವಾಗಿದೆ. ಇದರಿಂದ ರಾಕ್ಷಸರನ್ನು ಸಂಹರಿಸಲು ಸಹಕಾರಿಯಾದ ಕಾರಣ ಭಂಡಾರವನ್ನು ಭಕ್ತರು ಬಳಿದುಕೊಳ್ಳುತ್ತಾರೆ. ಮೈಲಾರ ಭೂಲೋಕದಲ್ಲಿ ಬರುವಾಗ ತನ್ನೊಂದಿಗೆ ತಂದನೆಂದು ಆತನನ್ನು ಖಂಡುಗ ಭಂಡಾರಯ್ಯ, ಭಂಡಾರದಯ್ಯ ಎಂಬುದಾಗಿ ಕರೆಯುತ್ತಾರೆ.

**ಗಾಳೆಮ್ಮ:** ಹೊಸಪೇಟೆಯಿಂದ ಏಳೆಂಟು ಕಿ.ಮೀ. ದೂರದಲ್ಲಿರುವ 'ಗಾಳೆಮ್ಮನಗುಡಿ' ಗ್ರಾಮದ 'ಗಾಳೆಮ್ಮ' ದೇವತೆಯ ಬಗೆಗೆ ವಿದ್ವಾಂಸರಾದ ಸುಬ್ಬಣ್ಣ ರೈ.ಎ. ಅವರು ತಮ್ಮ ಗ್ರಂಥದಲ್ಲಿ ದಾಖಲಿಸಿರುವುದನ್ನು ಇಲ್ಲಿ ಹೇಳಲಾಗಿದೆ.

ಹಿಂದೆ ಈ ಪ್ರದೇಶದಲ್ಲಿ ಗುಡಿಯಾಗಲಿ, ದೇವತೆಯಾಗಲಿ ಇದ್ದಿಲ್ಲ. ಇದ್ದಕ್ಕಿದ್ದಂತೆ ಒಂದು ರಾತ್ರಿ ಬೆಳಗಾಗಬೇಕಾದ ಸಮಯದಲ್ಲಿ ಗಾಳಿ, ಮಳೆಗೆ, ಮೇಲಿಂದ ಇಳಿದು ಬಂದ ಹಾಗೆ ಇಲ್ಲೊಂದು ದೇವತೆ ಪ್ರತ್ಯಕ್ಷವಾಯಿತು. ಯಾರಿಗೂ ಕಾಣಿಸದ ಹಾಗೆ ಗಾಳಿಯ ರೂಪದಲ್ಲಿ ಬಂದು ನೆಲೆಯಾದ ದೇವತೆಯನ್ನು ಜನ ಗಾಳೆಮ್ಮನೆಂದು ಕರೆದು ಪೂಜಿಸತೊಡಗಿದರಂತೆ. ಹೀಗೆ ಈಕೆಯ ಬಗೆಗಿರುವ ಐತಿಹ್ಯಗಳನ್ನು ಈ ಕೆಳಗೆ ನೋಡಬಹುದು.

ಹಿಂದೆ ಈ ಗುಡಿಯಲ್ಲಿರುವ ಪ್ರದೇಶವು ಭಾರೀ ಕಾಡಾಗಿತ್ತು. ಇಲ್ಲಿ ಜನರು ಓಡಾಡುತ್ತಿರಲಿಲ್ಲ. ಸುಮಾರು ನೂರು ವರ್ಷಗಳ ಹಿಂದೆ ಇರಬಹುದಾದ ಒಬ್ಬಾತ ಅಲ್ಲಿನ ಅಡವಿಗೆ ಕಟ್ಟಿಗೆ ಕಡಿಯಲೆಂದು ಬಂದ. ಮಧ್ಯಾಹ್ನದ ವೇಳೆಗೆ ಆತನಿಗೆ 'ಅಮ್ಮ'ನು (ಗಾಳೆಮ್ಮ) ಓರ್ವ ಹೆಣ್ಣಿನ ರೂಪದಲ್ಲಿ ಕಾಣಿಸಿಕೊಂಡು, ತನಗೆ ಯಾರೂ ದಿಕ್ಕಿಲ್ಲವೆಂದು, ನನಗೆ ಒಂದು ನೆಲೆಯನ್ನು ಕಾಣಿಸಬೇಕೆಂದೂ ಕೇಳುತ್ತಾಳೆ. ಆಕೆ ದೇವತೆಯೆಂದೂ ತಿಳಿದ ಆತನು ಆತನ ಮನೆಯವರೆಲ್ಲರೂ ಅಲ್ಲಿನ ಕಲ್ಲೊಂದನ್ನು 'ಅಮ್ಮ'ನೆಂದು ಪೂಜಿಸುತ್ತಾರೆ. ದಿನಗಳೆದಂತೆ ಆ ಕುಟುಂಬದವರು ಶ್ರೀಮಂತರಾಗುತ್ತಾರೆ. ಹೀಗೆ ಕಟ್ಟಿಗೆ ಮಾರುವವನು ಈ ರೀತಿ ಮುಂದುವರಿದಿದ್ದನ್ನು ನೋಡಿದ ಇತರ ಜನರೂ ಕಷ್ಟಬಂದಾಗ ದೇವಿಯ ಹತ್ತಿರ ಬರತೊಡಗುತ್ತಾರೆ. ಕಾಲಕ್ರಮದಲ್ಲಿ ಭಕ್ತರ ಸಂಖ್ಯೆ ಹೆಚ್ಚಿದಾಗ ದೇವಿಗೆ ಗುಡಿಯೊಂದನ್ನು ಕಟ್ಟಲಾಗಿದೆ. ಹೀಗೆ ಗಾಳೆಮ್ಮನ ಬಗೆಗೆ ಐತಿಹ್ಯವಿದೆ. ಇಂದು ಆ ಗುಡಿಯು ಶಾಸಕ ಆನಂದಸಿಂಗ್ ಅವರ ಸಹಾಯದಿಂದ, ಜೀರ್ಣೋದ್ಧಾರ ಮಾಡಲಾಗಿದೆ. ಪ್ರತಿ ಮಂಗಳವಾರ ಮತ್ತು ಶುಕ್ರವಾರ ದೇವತೆಯ ಗುಡಿ ಮುಂದೆ ಪೂಜೆಗಾಗಿ ಸಾವಿರಾರು ಭಕ್ತರು ಸೇರುತ್ತಿರುವುದನ್ನು ಗಮನಿಸಬಹುದಾಗಿದೆ.

**ಗೋಣಿ ಬಸವೇಶ್ವರ (ಕೂಲಹಳ್ಳಿ):** ಕೂಲಹಳ್ಳಿ ಗ್ರಾಮವು ಹರಪನಹಳ್ಳಿ ತಾಲೂಕಿನಲ್ಲಿದೆ. ಗೋಣಿ ಬಸವೇಶ್ವರ ನೆಲೆಸಿದ ಗ್ರಾಮವಾದ್ದರಿಂದ ಈ ದೈವವನ್ನು ಕೂಲಹಳ್ಳಿ ಗೋಣಿಬಸವೇಶ್ವರ ಎಂತಲೂ ಕರೆಯುತ್ತಾರೆ. ಕೈಲಾಸದಿಂದ ಐದು ಮಂದಿ ಗಣಾಧೀಶ್ವರ ಭೂಲೋಕಕ್ಕೆ ಬಂದರು. ಅವರಲ್ಲಿ ಮದ್ದಾನಸ್ವಾಮಿ ಒಬ್ಬನು. ಐದು ಮಂದಿ ಪಂಚಗಣಾಧೀಶ್ವರರು ಮೊದಲು ಕೂಡ್ಲಿಗಿ ಹತ್ತಿರದ ಕುಪ್ಪಿನ ಕೆರೆಗೆ ಬಂದಿಳಿದರು. ನಂತರ ಕೊಟ್ಟೂರಿಗೆ ಬಂದರು. ಅಲ್ಲಿಂದ ಈತ ಬಾಗುಳಿಗೆ ಬಂದನು. ಅಲ್ಲಿ ಪ್ರತಿದಿನ ಲಿಂಗಪೂಜೆ ಮಾಡಿಕೊಳ್ಳುತ್ತಿದ್ದನು. ಅದನ್ನು ನೋಡಿದ ಜನರು ಆತನಿಗೆ ಪ್ರತಿದಿನ ಒಬ್ಬರಂತೆ ಪತ್ರೆ ತರಲು ಹೋಗುತ್ತಿದ್ದರು.

ಬಾಗುಳಿಯ ಒಬ್ಬ ರಾಜ ಇದ್ದ. ಆತನ ಹೆಸರು ಸೋಮೇಶ್ವರ ಮಹಾರಾಜ. ಆತನಿಗೆ ಕನಕ ಎಂಬ ಮಗಳಿದ್ದಳು. ಆಕೆಯು ಬಹಳ ಸುಂದರವಾಗಿದ್ದಳು. ಶೃಂಗಾರ ತೋಟದಲ್ಲಿ ವನವಿಹಾರ ಮಾಡುತ್ತಿದ್ದಳು. ಪತ್ರೆ, ಪುಷ್ಪ ತರಲು ಹೋಗಿದ್ದ ಮದ್ದನಸ್ವಾಮಿಯ ಮೇಲೆ ಕನಕವ್ವನ ಮನಸ್ಸು ಬಿತ್ತು. ಈ ವಿಷಯ ಕೊಟ್ಟೂರೇಶ್ವರನಿಗೆ ಗೊತ್ತಾಯ್ತು. ಕೊಟ್ಟೂರೇಶ್ವರ ಮದ್ದಾನಸ್ವಾಮಿಯನ್ನು ಕರೆದು ಮದುವೆಯಾಗುವುದಕ್ಕೆ ಸಲಹೆ ಮಾಡಿದನಂತೆ. ಆದ್ದರಿಂದ ಮದುವೆಯೂ ಆಯ್ತು. ಕನಕವ್ವ ಗರ್ಭ ಧರಿಸಿದಳು. ಬಸವೇಶ್ವರಿನಿಗೆ ಜನ್ಮವಿತ್ತಳು. ಗಣಾಧೀಶ್ವರರು ತಮ್ಮ ತಮ್ಮ ಊರುಗಳನ್ನು ಆರಿಸಿಕೊಂಡರು. ಬಾಗಳಿಯಲ್ಲಿ ಕರೇಗೌಡ್ರು ಮನೆಗೆ, ಬಸವೇಶ್ವರನನ್ನು ದನಕಾಯುವುದಕ್ಕೆ ನೇಮಿಸುತ್ತಾರೆ. ಆತ ದನ ಕಾಯಬೇಕಾದರೆ ಅಡವಿಗೆ ಹೋಗಬೇಕಾಗಿತ್ತು. ಅಡವಿಯಲ್ಲಿ ಹುಲಿ, ಹಾವುಗಳೊಂದಿಗೆ ಆಟ ಆಡುತ್ತಿದ್ದನಂತೆ. ಹಾಗೆ ಅವುಗಳೊಂದಿಗೆ ಸಂಭಾಷಣೆಯು ಮಾಡುತ್ತಿದ್ದನಂತೆ. ಅವನ ಜೊತೆಗೆ ದನಕಾಯುತ್ತಿದ್ದ ಹುಡುಗರು ಬಂದು ಅಲ್ಲಿ ನಡೆದಿರುವ ವಿಷಯಗಳನ್ನು ಬಂದು ಊರೊಳಗೆ ಹೇಳುತ್ತಿದ್ದರು. ಆದರೆ ಊರಿನವರು ಯಾರೂ ತಲೆಕೆಡಿಸಿಕೊಂಡು ಪರಿಶೀಲನೆ ಮಾಡಿರಲಿಲ್ಲ. ಸೋಮವಾರ ಹೊಲದಲ್ಲಿ ಬೇಸಾಯ ಮಾಡುವುದಿಲ್ಲ ಇದು ಹಿಂದಿನಿಂದಲೂ ನಡೆದು ಬಂದ ಸಂಪ್ರದಾಯವಾಗಿತ್ತು. ಆದರೆ ಬಸವೇಶ್ವರ ಮಾತ್ರ ಸೋಮವಾರ ಬೇಸಾಯಕ್ಕೆ ಹೋಗುತ್ತಿದ್ದನು. ಅವನು ಕಾಯಕವೇ ಕೈಲಾಸ ಎಂದು ಹೇಳುತ್ತಿದ್ದನು.

ಬಸವೇಶ್ವರನು ಹೋರಿ-ಹುಲಿಯನ್ನು ಜೋಡಿಯಾಗಿ ಹೂಡಿಕೊಂಡು ಬೇಸಾಯ ಮಾಡುತ್ತಿರುವುದನ್ನು ಊರಿನ ಜನರು ಗಮನಿಸುತ್ತಾರೆ. ಇದರಿಂದ ಏನೋ ವಿಚಾರ ಹೊಳೆದಂತಾಗಿ, ಊರಿನ ಜನರು ಸೋಮವಾರ ಬೇಸಾಯ ಮಾಡಿರೋದು ತಪ್ಪು ಎಂದು ಆತನೊಂದಿಗೆ ಗಲಾಟೆ ಮಾಡುತ್ತಾರೆ. ಕೊನೆಗೆ ನಮ್ಮ ಮನೆಗೆ ಬೇಡ ಎಂದು ಗೌಡ್ರು ಬಿಡಿಸಿ ಕಳಿಸುತ್ತಾರೆ. ಅದೇ ವೇಳೆಯಲ್ಲಿ ಬಾಗಳಿಯಿಂದ ಕೆಲವರು ಕಪ್ಪಗುಡ್ಡಕ್ಕೆ ಹೊರಟಿದ್ದರು. ಔಷಧಿ ಕಲಿಯಬೇಕೆಂದು ಹನ್ನೆರಡು ನೂರು ಮಂದಿ ಸಿದ್ದರ ಜೊತೆಗೆ ಬಸವೇಶ್ವರನೂ ಹೋದನು. ಇದರಿಂದಾಗಿ ಎಲ್ಲ ತರಹದ ಗಿಡಮೂಲಿಕೆಗಳನ್ನು ಕೊಡುವುದರ ಬಗೆಗೆ ಕಲಿತನು. ಮಕ್ಕಳಿಲ್ಲದವರಿಗೆ ಮಕ್ಕಳನ್ನು, ಕಣ್ಣು ಇಲ್ಲದವರಿಗೆ ಕಣ್ಣು, ಕಾಲಿಲ್ಲದವರಿಗೆ ಕಾಲು, ಆತ ಕಲಿತ ವಿದ್ಯೆಯಿಂದ ಸಮಸ್ಯೆಗಳನ್ನು ಪರಿಹರಿಸಿದನು. ಇದೆಲ್ಲಾ ಚಿಗಟೇರಿ ಶಿವಯ್ಯನಿಗೆ ಗೊತ್ತಾಯಿತು. ಅವನು ಬಹಳ ಅಸೂಹೆಪಟ್ಟ. ಬಸವೇಶ್ವರನನ್ನು

ಕಾಡುವುದಕ್ಕೂ ಪ್ರಾರಂಭಿಸಿದನು. ಅವನನ್ನು ಗೋಣಿಬಸವೇಶ್ವರ ಕೊಂದು ಹಾಕಿದನಂತೆ. ನಂತರ ಅಲ್ಲಿಯೇ ಜೀವಸಮಾಧಿ ಆದನಂತೆ. ಹೀಗೆ ಕೂಲಹಳ್ಳಿಯಲ್ಲಿ ನೆಲೆಸಿ, ಅಂತಃಶಕ್ತಿಯನ್ನು ಗೋಣಿ ಬಸವೇಶ್ವರ ದೇವಾಲಯದಲ್ಲಿ ಕಾಣಬಹುದು.

**ಜಟ್ಟಿಲಿಂಗೇಶ್ವರ:** ಇದು ಉಜ್ಜಿನಿಯ ಮರುಳಸಿದ್ದೇಶ್ವರ ಸ್ವಾಮಿಯ ಗುಡಿ ಹಿಂದಕ್ಕೆ ಎಂದರೆ ದಕ್ಷಿಣ ದಿಕ್ಕಿನ ಕಡೆಗೆ ಉತ್ತರಾಭಿಮುಖವಾಗಿದೆ. ಈ ಗುಡಿಯಲ್ಲಿ ಒಂಬತ್ತು ಚಪ್ಪಟೆಯಾದ ಶಿಲಾವಿಗ್ರಹಗಳು ಒಂದೇ ಸಾಲಿನಲ್ಲಿವೆ. ಶ್ರೀ ಮರುಳಸಿದ್ದೇಶ್ವರ ಗುಡಿಗೆ ಪೂಜೆಗಾಗಿ ಹೋಗುವ ಭಕ್ತರು ಮೊದಲು ಲಿಂಗೇಶ್ವರನಿಗೆ ಪೂಜೆ ಸಲ್ಲಿಸುತ್ತಾರೆ. ಇದರ ಬಗೆಗಿನ ಐತಿಹ್ಯ ಹೀಗಿದೆ ತನ್ನ ಶಿಷ್ಯನಾದ ಲಿಂಗೇಶ್ವರ ಸತ್ಯ ಮಾರ್ಗದಲ್ಲಿ ನಡೆಯುತ್ತಿರುವುದನ್ನು ಮೆಚ್ಚಿದ ಮರುಳಸಿದ್ದರು ಆತನಿಗೆ ಯಾವಾಗಲೂ ಭಕ್ತರಿಂದ ಪ್ರಥಮಪೂಜೆ ಸಲ್ಲಲೆಂದು ವರ ನೀಡಿದರೆಂಬ ಕಾರಣಕ್ಕೆ ಇಂದು ಉಜ್ಜಿನಿಗೆ ಬಂದ ಎಲ್ಲ ಜನಾಂಗದವರು ಮೊದಲು ಜಟ್ಟಿಂಗ ಲಿಂಗೇಶ್ವರನಿಗೆ ಪೂಜೆ ಸಲ್ಲಿಸಿದ ನಂತರ ಮರುಳಸಿದ್ದೇಶ್ವರನಿಗೆ ಪೂಜೆ ಸಲ್ಲಿಸುತ್ತಾರೆ.

**ತಳವಾರಪ್ಪನ ಕಲ್ಲು:** ಹಂಪಿಯ ವಿರೂಪಾಕ್ಷ ದೇವಾಲಯದ ಒಳಕ್ಕೆ ಪ್ರವೇಶ ಮಾಡುವಾಗ, ಭ್ರಷ್ಟಪ್ಪಯ್ಯನ ಗೋಪುರ ದಾಟಿದರೆ, ರಾಯರ ಗೋಪುರದ ಆವರಣದಲ್ಲಿ ಒಂದು ಕಲ್ಲಿದೆ. ಅದನ್ನು ಚೊಕ್ಕಪ್ಪನ ಕಲ್ಲು ಎಂದು ಕರೆಯುತ್ತಾರೆ. ಅಲ್ಲದೇ 'ತಳವಾರಪ್ಪನ ಕಲ್ಲು' ಎಂತಲೂ ಕರೆಯುತ್ತಾರೆ. ಇದಕ್ಕೆ ಕುಂಕುಮ ಎಣ್ಣೆಯನ್ನು ಹಾಕಿ ಮುಗಿಯುತ್ತಾರೆ. ಕಲ್ಲಿನ ಬಗೆಗೆ ಐತಿಹ್ಯ ಹೀಗಿದೆ. "ಹಂಪಮ್ಮ ಪಂಪಾಪತಿಯ ಶಯನಗೃಹವನ್ನು ಸ್ವಚ್ಛಗೊಳಿಸುವ ಕೆಲಸವನ್ನು ತಳವಾರಪ್ಪ ಎಂಬ ಅಗಸನು ಮಾಡುತ್ತಿದ್ದನಂತೆ. ಒಮ್ಮೆ ಜಾತ್ರೆಯ ದಿವಸ ರಾತ್ರಿ ವೇಳೆ ಎಂದಿನಂತೆ ಪೂಜಾರಿ ಹಂಪಮ್ಮ ಪಂಪಾಪತಿ ವಿಗ್ರಹಗಳನ್ನು ಶಯನಗೃಹಕ್ಕೆ ಸೇರಿಸಿ ಬಾಗಿಲು ಹಾಕುತ್ತಾರೆ. ಹಾಗೆ ಮಾಡುವುದು ಪದ್ಧತಿ. ಶಯನಗೃಹದಲ್ಲಿ ಯಾರೂ ಇರುವಂತಿಲ್ಲ. ಎಂದಿನಂತೆ ಪೂಜಾರರು ಪೂಜಿಸಿ ಶಯನಗೃಹದ ಬಾಗಿಲು ಬಿಗಿಮಾಡಿ ಪೂಜಾರರು ಹಿಂದಿರುಗುತ್ತಾರೆ. ಈ ದಿವಸ ಹಂಪಮ್ಮ ಪಂಪಾಪತಿಯರು ವಿಗ್ರಹ ರೂಪ ಬಿಟ್ಟು ನಿಜರೂಪದಲ್ಲೇ ಅಲ್ಲೇ ಬಂದು ಮಲಗುತ್ತಾರೆ ಎಂದು ಅಲ್ಲಿದ್ದ ತಳವಾರಪ್ಪನಿಗೆ ಯಾಕೋ ಅನ್ನಿಸಿತು, ಅವರು ಹೇಗಿದ್ದಾರೆ? ಎಂದು ನೋಡಲು ನಿಶ್ಚಯಿಸಿ ಶಯನಗೃಹವನ್ನು ಸ್ವಚ್ಛ ಮಾಡುವ ನೆಪದಲ್ಲಿ ಒಳ ಹೋಗಿ ಶಯನಗೃಹದ ಮಂಚದ ಅಡಿಯಲ್ಲಿ ಅಡಗಿಕೊಳ್ಳುತ್ತಾನೆ. ಎಂದಿನಂತೆ ಪೂಜಾರರು ಬಂದು ಹಂಪಮ್ಮ ಪಂಪಾಪತಿಯ ವಿಗ್ರಹಗಳನ್ನು ಶಯನಗೃಹದ ಮಂಚದ ಮೇಲಿಟ್ಟು ಬಾಗಿಲು ಬಿಗಿದು ಹಿಂದೆ ಬರುತ್ತಾರೆ.

ತಳವಾರಪ್ಪ ಎಚ್ಚರವಾಗಿಯೇ ಮಂಚದ ಕೆಳಗೆ ಕಾದುಕುಳಿತಿರುತ್ತಾನೆ. ಸುಮಾರು ಮಧ್ಯರಾತ್ರಿಯ ಸಮಯದಲ್ಲಿ ಹಂಪಮ್ಮ ಪಂಪಾಪತಿಯರು ನಿಜರೂಪದಲ್ಲಿ ಪ್ರತ್ಯಕ್ಷರಾಗಿ ಇನ್ನೇನು ಹಾಸಿಗೆಯಲ್ಲಿ ಮಲಗಬೇಕೆಂದುಕೊಳ್ಳುವ ಹೊತ್ತಿಗೆ ಹಂಪಮ್ಮನಿಗೆ ಸಂಶಯ ಬರುತ್ತದೆ. ಆಕೆ ಪಂಪಾಪತಿ ದಿವ್ಯದೃಷ್ಟಿಯಿಂದ ನೋಡಲು ತಳವಾರಪ್ಪನು ಕಾಣಿಸಿಕೊಳ್ಳುತ್ತಾನೆ. ಅವನನ್ನು ಮಂಚದ ಅಡಿಯಿಂದ

ಹೊರಗೆ ಬರುವಂತೆ ಪಂಪಾಪತಿ ಹೇಳುತ್ತಾನೆ. ಮತ್ತು ನಿನಗೇನು ಬೇಕು ಎಂದು ಕೇಳುತ್ತಾನೆ. ನಾನು ನಿಮ್ಮ ದರ್ಶನಕ್ಕಾಗಿ ಹಲವಾರು ವರ್ಷಗಳಿಂದ ಕಾಯುತ್ತಿದ್ದೆ. ಈಗ ನಿಮ್ಮ ದಿವ್ಯ ದರ್ಶನವಾಯಿತು. ನನಗೆ ಇಷ್ಟೇ ಸಾಕು ಮತ್ತೇನು ಬೇಡ ಎಂದು ತಳವಾರಪ್ಪ ಹೇಳುತ್ತಾನೆ. ಆಗ ಹಂಪಮ್ಮ ಪಂಪಾಪತಿಗಳು ಸರಿ ನಿನಗೆ ಒಳ್ಳೆಯದಾಗಲಿ ಎಂದು ಆಶೀರ್ವದಿಸಿದರು. ಜೊತೆಗೆ ನೀನು ಇಲ್ಲಿಂದ ಹೋಗುವಾಗ ಹಿಂದಿರುಗಿ ನೋಡಬೇಡ, ಹಾಗೇನಾದರೂ ನೋಡಿದರೆ ತಲೆ ಸಿಡಿದು ಹೋಳಾಗುತ್ತದೆ ಎಂದು ಎಚ್ಚರಿಕೆಯನ್ನು ಕೊಟ್ಟರು. ಆಗಲಿ ಎಂದು ಹೇಳಿ ತಳವಾರಪ್ಪ ಶಯನಗೃಹದಿಂದ ಹೊರಗೆ ಬರುವಾಗ ಹಿಂದೆ ನೋಡುತ್ತಾನೆ. ತಕ್ಷಣ ಆತನ ತಲೆ ಸಿಡಿದು ಎರಡು ಹೋಳಾಗುತ್ತದೆ. ಮತ್ತು ಆ ಹೋಳುಗಳು ಕಲ್ಲಾಗುತ್ತವೆ. ಆ ಕಲ್ಲುಗಳನ್ನು ಗುಡಿಯ ಎದುರಿನಲ್ಲಿ ನಿಲ್ಲಿಸಲಾಯಿತು. ಅಂದಿನಿಂದ ಆ ಕಲ್ಲಿಗೆ ತಳವಾರಪ್ಪನ ಕಲ್ಲು ಎಂದು ಹೇಳುತ್ತಾರೆ. ಹಂಪೆ ಜಾತ್ರೆಯ ಸಮಯದಲ್ಲಿ ಕೆಲವರು ಈ ಕಲ್ಲಿಗೆ ಪೂಜಿಸುತ್ತಾರೆ. (ಮಂಜುನಾಥ ಬೇವಿನಕಟ್ಟಿ, ೨೦೦೦, ಪುಟ-೪೩).

**ತುಪ್ಪದ ಮಾಳಮ್ಮ:** ಮಾಳಚಿ, ಮಾಲತಿ, ಮಾಲ್ಹಸಾ, ಮಾಳಮ್ಮ, ಗಂಗಿಮಾಳಮ್ಮ, ಕುರುಬಕ್ಕೆವ್ವ ಮುಂತಾದ ಹೆಸರುಗಳಿಂದ ಕರೆಯಲಾಗುವ ಈಕೆ ಮೈಲಾರ ಲಿಂಗನ ಹೆಂಡತಿ. ತುಪ್ಪದ ಮಾಳವ್ವನಿಗೆ ಈ ಹೆಸರಿನ ಬಗೆಗೆ ಐತಿಹ್ಯವಿದೆ. ಶಿವನು ರಾಕ್ಷಸರೊಂದಿಗೆ ಯುದ್ಧಮಾಡುವಾಗ ಜೊತೆಯಲ್ಲಿಯೇ ಇದ್ದು ತಾನು ರೌದ್ರರೂಪ ತಾಳಿದಾಗ ಇವಳನ್ನು ನೋಡಿ ಮೈಲಾರ ಲಿಂಗನಿಗೆ ಭಯವಾಯಿತು. ಆಗ ಮೈಲಾರನಿಗೆ ಋಷಿಮುನಿಗಳು ಧೈರ್ಯ ಹೇಳಿ ಮಾಳವ್ವನಿಗೆ ತುಪ್ಪದಿಂದ ಅಭಿಷೇಕ ಮಾಡಲಾಯಿತು.

**ದಂಡಿನ ದುರುಗಮ್ಮ:** ಜರಿಮಲೆ ಪಾಳೆಗಾರರು ಒಂದು ದಿನ ಯುದ್ಧಕ್ಕೆ ಹೋಗಲು ಸಿದ್ಧರಾದರು. ರಾತ್ರಿ ಪಾಳೆಗಾರನ ಕನಸಿನಲ್ಲಿ ದುರುಗಮ್ಮ ಕಾಣಿಸಿಕೊಂಡಳಂತೆ. ನೀವು ಯುದ್ದಕ್ಕೆ ಹೊರಡುವಾಗ ನನ್ನನ್ನೂ ಹಿಂದೆಯೇ ಕರೆದುಕೊಂಡು ಹೋಗಿರಿ. ನಿಮಗೆ ಜಯವಾಗುತ್ತದೆ ಎಂದಳಂತೆ. ಮರು ದಿನ ಅದೇ ಪ್ರಕಾರವಾಗಿ ದುರುಗಮ್ಮನ ಶಿರಶ್ಚೇದನ ಮಾಡಿಕೊಂಡು, ಕಂಬಳಿಯಲ್ಲಿ ಇಟ್ಟುಕೊಂಡು ಬೆನ್ನ ಹಿಂದೆ ಹೆಗಲೇರಿಸಿ ಯುದ್ಧದಲ್ಲಿ ಹೋರಾಡಿ ಗೆದ್ದುಬಂದು ಪುನಃ ಜರಿಮಲೆಯಲ್ಲಿ ದುರುಗಮ್ಮನ ಶಿರವನ್ನು ಮಾತ್ರ ಪ್ರತಿಷ್ಠಾಪಿಸಿದರು. ದಂಡಿನ ಪಾಳೆಗಾರರ ಬೆಂಗಾವಲಾಗಿ ಕಾಪಾಡಿದ ದೇವತೆ ದಂಡಿನ ದುರುಗಮ್ಮ ಎಂದು ಹೆಸರು. ಇಂದು ಪ್ರತೀ ವರ್ಷ ಜಾತ್ರೆ ಆಚರಣೆ ಅದ್ದೂರಿಯಲ್ಲಿ ನಡೆಯುತ್ತದೆ. ಅದರ ಮೊದಲ ಕಾರ್ಯ ಯಥಾಪ್ರಕಾರ ಪಾಳೆಯಗಾರರದೇ ಆಗಿರುತ್ತದೆ.

**ಪಟ್ಟಣದ ಎಲ್ಲಮ್ಮ:** "ಹಂಪೆಯ ಹಜಾರರಾಮನ ದೇವಸ್ಥಾನದ ಮುಂಭಾಗದಲ್ಲಿರುವ ಹಳೆಯ ಪಟ್ಟಣದ ದೇವತೆಯೇ ಈ ಪಟ್ಟಣದ ಎಲ್ಲಮ್ಮ. ಈಕೆಯ ಬಗೆಗೆ ವಿವಿಧ ರೀತಿಯ ಕಥೆಗಳಿವೆ. ಮುಖ್ಯವಾಗಿ ವಿಜಯನಗರದ ಅರಸರು ಮತ್ತು ಬೇರೆ ರಾಜ್ಯದ ಅರಸರು ಇಲ್ಲಿಗೆ ಬಂದು ವರವನ್ನು ಪಡೆದು ಹೋಗುತ್ತಿದ್ದರು. ಈಕೆ ವಿಜಯನಗರ ಮುಖ್ಯ ದೈವವಾಗಿದ್ದು, ಪಟ್ಟಣವನ್ನು

ರಕ್ಷಿಸುತ್ತಿದ್ದಳಂತೆ. ಈಕೆಗೆ ಕೋಣ, ಕುರಿ, ಕೋಳಿ, ಮೇಕೆಗಳನ್ನು ಬಲಿ ನೀಡಲಾಗುತ್ತಿತ್ತೆಂದು ಹೇಳಲಾಗುತ್ತದೆ. ಇಲ್ಲಿಯ ಅರಸರು ಮೊದಲು ಪಟ್ಟಣದ ಎಲ್ಲಮ್ಮನಿಗೆ ಕೈ ಮುಗಿದು ವಿರೂಪಾಕ್ಷ ದೇವಸ್ಥಾನಕ್ಕೆ ಹೋಗುತ್ತಿದ್ದರು.

ಇನ್ನೂ ಕೆಲವರ ಪ್ರಕಾರ ವಿಜಯನಗರ ಉದಯದ ಕಾಲದಲ್ಲಿ ಈ ರಾಜ್ಯವನ್ನು ಕಟ್ಟಿದ ರಾಜರು ಹಾಗೂ ಸೈನಿಕರಿಗೆ ಈಕೆ ಕೊಟ್ಟಣದಿಂದ ನೆಲ್ಲನ್ನು ಕುಟ್ಟಿ ಎಂಬ ಹೆಸರನ್ನು ಬಂದಿತಂತೆ ಎಂದು ಹೇಳುತ್ತಾರೆ. ಏನೇ ಇದ್ದರೂ ಈಕೆ ಪಟ್ಟಣದ ರಕ್ಷಣೆಯ ಪ್ರಮುಖ ದೇವತೆ ಎಂದು ತಿಳಿದುಬರುತ್ತದೆ. ಆಕೆ ಜನರ ದೈವವೂ ಹೌದು. ಈಗಲೂ ಕೂಡ ಬೇರೆ ಬೇರೆ ಪ್ರದೇಶದಿಂದ ಜನರು ಬಂದು ಹರಕೆಯನ್ನು ತೀರಿಸಿ ಪೂಜೆಮಾಡಿ ಹೋಗುತ್ತಿರುವುದನ್ನು ನೋಡಬಹುದು.

ಹೀಗೆ ಅನೇಕ ಊರ ದೇವತೆಗಳು ಐತಿಹ್ಯಗಳಿಂದ ಸಾಂಸ್ಕೃತಿಕ ವಿವರಗಳು, ಚರಿತ್ರಾಂಶಗಳು, ಆಚರಣೆಗಳನ್ನು ತಿಳಿದುಕೊಳ್ಳಬಹುದಾಗಿದೆ. ಇನ್ನೂ ಅನೇಕ ದೇವತೆಗಳ ಐತಿಹ್ಯಗಳಿವೆ. ಅವುಗಳ ಪಟ್ಟಿಯನ್ನು ಈ ಕೆಳಗಿನಂತೆ ನೋಡಬಹುದು.

* ಪಾರ್ವತಿ ಪರಮೇಶ್ವರ ದೇವಾಲಯ (ಗುಡೇಕೋಟೆ)
* ಬಂಡೆರಂಗನಾಥ (ಬಾಚಿಗೊಂಡನಹಳ್ಳಿ)
* ಹರಿಯಲಮ್ಮದೇವಿ (ಗರಗ)
* ಬಸವಣ್ಣ (ಸಿಡೇಗಲ್ಲು)
* ಮರಡಿ ದುರುಗಮ್ಮ (ಮೋರಗೆರೆ)
* ದುರುಗಮ್ಮ (ಹೊಸ ಗರಗ)
* ಮೈಲಾರ ಲಿಂಗ (ಮೈಲಾರ)
* ಲಕ್ಷ್ಮೀವೆಂಕಟೇಶ್ವರ (ಮೈದೂರು)
* ಬಸವಣ್ಣ (ಅಂಬಳಿ)
* ಸಿದ್ಧರಾಮೇಶ್ವರ (ಯಶವಂತನಗರ)
* ಘಾಟಿನ ಸ್ವಾಮಿ (ಯಶವಂತನಗರ ಮತ್ತು ಗರಗದ ಮದ್ಯೆ)
* ರಣದಮ್ಮ (ಹಿರೇ ಮೈಲಾರ)
* ಮಲ್ಲೇಶ್ವರ ಸ್ವಾಮಿ (ವರವು)
* ಮೂಗಣ್ಣ (ಚಿರಿಬಿ)
* ಸೊಲ್ಲಮ್ಮ (ಸೊನ್ನ)

* ಹೊಸೂರಮ್ಮ (ಹಂಪಿ)

* ಹತ್ತುಕೈಯಮ್ಮ (ಹಂಪಿ)

* ನಾಗದೇವತೆ (ಹಂಪಿ)

ಈ ದೇವತೆಗಳ ಬಗೆಗಿರುವ ಕಥೆ, ಐತಿಹ್ಯಗಳನ್ನು ತಿಳಿದುಕೊಂಡಂತ ನಮ್ಮ ಜನಪದರು ಇಂದಿಗೂ ಕೂಡ ಆ ದೇವತೆಗಳನ್ನು ಭಕ್ತಿಯಿಂದ ನೆನೆಯುತ್ತಾರೆ. ಅನೇಕ ಕಾರ್ಯಕ್ರಮಗಳು ಇದ್ದಾಗ ಅದ್ದೂರಿಯಿಂದ ಪೂಜೆಯನ್ನು ನೆರವೇರಿಸುತ್ತಾರೆ.

ದೇವತೆಗಳಲ್ಲಿ ಅಂದುಕೊಂಡ ಕೆಲಸವೇನಾದರೂ ಆಯಿತೆಂದರೆ, ಅವರಿಗೆ ಏನಿಲ್ಲದ ಉತ್ಸಾಹ. ಅದನ್ನು ಇತರರಿಗೂ ತಿಳಿಸಿ ದೇವತೆ ಜನಪ್ರಿಯವಾಗುವುದಕ್ಕೆ ಕಾರಣೀಭೂತರಾಗಿದ್ದಾರೆ. ಆ ದೇವತೆಯರನ್ನು ನೆನಪಿಸಿಕೊಳ್ಳುವುದಕ್ಕೆ ತಮ್ಮ ಮಕ್ಕಳಿಗೆ ದೈವದ ಹೆಸರನ್ನು ಇಟ್ಟಿರುವುದು ತಿಳಿದುಬರುತ್ತದೆ. ಜನಪದರು ದೇವತೆಗಳ ಮೇಲೆ ಇಟ್ಟಿರುವ ನಂಬಿಕೆಯನ್ನು ಅಷ್ಟು ಸುಲಭವಾಗಿ ಬಿಟ್ಟುಕೊಡಲಾರರು. ಅದಕ್ಕಾಗಿ ದೇವತೆಗಳ ಅಧ್ಯಯನ ಪ್ರಮುಖವಾದುದು.

**೫.೮.೨. ವ್ಯಕ್ತಿ ಮತ್ತು ಸಮುದಾಯ ಬಗೆಗಿನ ಐತಿಹ್ಯಗಳು**

ವ್ಯಕ್ತಿಯೊಬ್ಬನ ಹೆಸರಿನಲ್ಲಿ ನಡೆದ ಘಟನೆಯ ನೆಲೆಯಲ್ಲಿ ಹುಟ್ಟಿ ಬೆಳೆದ ಐತಿಹ್ಯಗಳನ್ನು ವ್ಯಕ್ತಿ ಐತಿಹ್ಯಗಳೆಂದು ಗುರುತಿಸಲಾಗಿದೆ. ಇದರ ಜೊತೆಗೆ ಸಮಾಜ ಸಂಬಂಧಿಯಾಗಿರುವ ಸಮುದಾಯಗಳ ಬಗೆಗಿನ ಐತಿಹ್ಯಗಳನ್ನು ಇಲ್ಲಿ ಕ್ರೂಢೀಕರಿಸಲಾಗಿದೆ. ಇಲ್ಲಿ ಘಟನೆ ಮತ್ತು ಸ್ಥಳವನ್ನು ಕುರಿತಾದ ಐತಿಹ್ಯಗಳು ಕಂಡುಬಂದರೂ ಮುಖ್ಯವಾಗಿ ವ್ಯಕ್ತಿಯನ್ನು ಪ್ರಧಾನವಾಗಿ ಇಟ್ಟುಕೊಂಡು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯಗಳನ್ನು ಇಲ್ಲಿ ಕೊಡಲಾಗಿದೆ.

**ಕಂಪಣ್ಣ:** ಕಂಪಲಿಯ ಕಂಪಣ್ಣ ಎಂಬ ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯ ಒಂದು ಹೀಗಿದೆ.

ಹಿಂದೆ ಕಂಪಣ್ಣ ಅಂತ ಒಬ್ಬ ವ್ಯಕ್ತಿ ಇದ್ದನಂತೆ, ಅವನ ಊರಿನಲ್ಲಿ ಜಾತಿಯಿಲ್ಲದ ಜಾತಿಯವನೊಬ್ಬನಿದ್ದ. ಅವನ ಹೆಸರು ವಕ್ಕಲು ಮುದ್ದೇಗೌಡ. ಮುದ್ದೇಗೌಡನ ಹೆಂಡತಿ ಗೌರಮ್ಮ. ಈ ದಂಪತಿಗಳಿಗೆ ಏಳು ಜನ ಮಕ್ಕಳು. ಆರನೇಯವನು ಹಳವೇ ಗೌಡ. ಮತ್ತು ಏಳನೇಯವಳು ಸತವಂತಿ. ಕಂಪಣ್ಣರಾಜನ ಮಗನು ಸತವಂತಿಯ ಮೇಲೆ ಕಣ್ಣಿಡುತ್ತಾನೆ. ಕೋಪಗೊಂಡ ಕಂಪಣ್ಣನು ಮಗನ ತಲೆ ಕತ್ತರಿಸುತ್ತಾನೆ. ಜಾತಿಯಿಲ್ಲದ ಜಾತಿಯವರನ್ನು ಕಾವೇರಿಯ ದೇಶಕ್ಕೆ ಓಡಿಸುತ್ತಾನೆ. ಹಂಪೆ ಹೊಳೆ ಉಕ್ಕಿ ಹರಿಯುತ್ತದೆ. ಸತವಂತಿಗೆ ದಾರಿ ಬಿಡುತ್ತದೆ. ಆದರೆ ಕಂಪಣರಾಜನನ್ನು ತಡೆಯುತ್ತದೆ.

ಈ ಐತಿಹ್ಯವು ಕಂಪಿಲ ಮತ್ತು ಕುಮಾರರಾಮರ ಸುತ್ತ ಹೆಣದುಕೊಂಡಂತಿದೆ. ಹಂಪಿ ಹೊಳೆಯು ಇಲ್ಲಿಯೂ ರಕ್ಷಾ ದೈವವಾಗಿ ಕಾಣಿಸಿಕೊಂಡಿದೆ.

**ಕಾಟಣ್ಣ:** ಕಂಪಿಲಿಯ ಮನೆತನಕ್ಕೆ ಸೇರಿದ ಕಾಟಣ್ಣ ಒಳ್ಳೆಯ ಬೇಟೆಗಾರನಾಗಿದ್ದನಂತೆ.

ಬೇಟೆಗೆಂದು ಹೊಸಪೇಟೆ ತಾಲೂಕಿನ ಕೊನೆ ಹಳ್ಳಿಯಾದ ಗರಗದ ಕಾಡಿಗೆ ಬಂದಿದ್ದನಂತೆ. ತನ್ನ ಸಹೋದರ ಮತ್ತು ಸೈನಿಕನೊಡನೆ ಬೇಟೆಯಾಡಿ, ಆ ಕಾಡಿನಲ್ಲಿ ಮಾಂಸದ ಊಟ ಮಾಡಿ ಸಂಭ್ರಮಿಸಿದ್ದರಂತೆ. ಊರಿನ ಅಂದಿನ ಹಿರಿಯರು ಇದು ಕಾಟಣ್ಣ ಊಟ ಮಾಡಿ ಸಂಭ್ರಮಿಸಿದ್ದ ಸ್ಥಳ ಎಂದು ಅಲ್ಲಿ ಒಂದು ಮೂರ್ತಿ ಮಾಡಿ ಪೂಜಿಸಲಾರಂಭಿಸಿದರಂತೆ.

ಪ್ರತೀ ವರ್ಷವು ಆ ಕಲ್ಲಿನ ಮೂರ್ತಿಗೆ ಸಂಭ್ರಮದಿಂದ ಊರ ಜನರೆಲ್ಲರೂ ಸೇರಿ ಪೂಜೆ ಮಾಡಿ ಊಟ ಮಾಡಿ ಬರುತ್ತಾರೆ. ಊರಿನ ಜನರ ಇನ್ನೊಂದು ವಿಶೇಷವಾದ ನಂಬಿಕೆ ಏನೆಂದರೆ 'ಕಾಟಣ್ಣ ಬಯಲು' ಕಡೆಗೆ ಮಿಂಚು ಸಿಡಿಲೇನಾದರೂ ಬಡಿದರೆ, ಆ ದಿನ ಮಳೆ ಬರುವುದು ಗ್ಯಾರಂಟಿ ಅಂತೆ. ಆದ್ದರಿಂದಲೇ ಕಾಟಣ್ಣನನ್ನು ಪೂಜೆ ಮಾಡುತ್ತಾರೆ. ಆತ ಮಳೆ ತರಿಸುವ ದೈವ ಎಂದು ಈಗಲೂ ಜನರು ನಂಬಿದ್ದಾರೆ. (ವಕ್ತೃ: ಡಂಬರ ನಾಗಪ್ಪ, ೭೦, ಹೊಸಗರಗ)

**ಕುಮಾರರಾಮ:** "ಕಂಪಿಲಿರಾಯನು ಹೊಸಮಲೆದುರ್ಗದ ಅರಸ. ಹರಿಯಲದೇವಿ ಅವನ ಹೆಂಡತಿ. ಹರಿಯಲದೇವಿ ತಮ್ಮನಾದ ಬೈಚಪ್ಪನಾಯಕನೇ ಮಂತ್ರಿಯಾಗಿರುತ್ತಾನೆ. ಜಟ್ಟಿಂಗ ರಾಮೇಶ್ವರ ಏಳನೇ ಜಗದಂಬಾಳ ವರ ಪ್ರಸಾದದಿಂದ, ಹರಿಯಲದೇವಿ ಗರ್ಭ ಧರಿಸಿ ಚನ್ನಿಗರಾಮನನ್ನು ಹೆರುತ್ತಾಳೆ. ಮುದಿ ವಯಸ್ಸಿನಲ್ಲಿ ಕಂಪಿಲನು ಡಂಬರ ಹುಡುಗಿಯನ್ನು ಮದುವೆಯಾಗುತ್ತಾನೆ. ಚನ್ನಿಗರಾಮನನ್ನು ಬಯಸಿದ ರತ್ನಾದೇವಿಯು, ಆತ ಒಪ್ಪದೇ ಇದ್ದಾಗ ಚನ್ನಿಗರಾಮನನ್ನು ಕರೆಸಿ ಆತನ ತಲೆಯನ್ನು ಕತ್ತರಿಸಿ ಅಗಸೆ ಬಾಗಿಲಿಗೆ ಕಟ್ಟುತ್ತಾಳೆ." (ಸೂರ್ಯನಾಥ ಕಾಮತ್ (ಸಂ), ೧೯೯೬, ಪುಟ-೧೫೨)

ಇನ್ನೊಂದು ಐತಿಹ್ಯದ ಪ್ರಕಾರ ಕಂಪಿಲಿರಾಯನು ಕಂಪಟಾಲು ನಗರದ ದೊರೆ. ಆತ ಬ್ರಾಹ್ಮಣರ ಹುಡುಗಿಯಾದ ಹರಿಯಾಲದೇವಿಯನ್ನು ಮದುವೆಯಾಗುತ್ತಾನೆ. ಆಕೆಗೆ ಬಹುದಿನಗಳ ಕಾಲ ಮಕ್ಕಳಾಗದ ಕಾರಣ ಶ್ರೀರಾಮನ ಬೆಟ್ಟದಲ್ಲಿ ತಪಸ್ಸು ಮಾಡಿ ಗರ್ಭಧರಿಸಿ ಕುಮಾರರಾಮನನ್ನು ಪಡೆಯುತ್ತಾಳೆ. ಕಂಪಿಲಿರಾಯ ಡೊಂಬರ ರತ್ನಾಜಿಗೆ ಮನಸೋತು ಕೊನೆಗೆ ಆಕೆಯನ್ನು ಮದುವೆಯಾಗುತ್ತಾನೆ.

ಮತ್ತೊಂದು ಐತಿಹ್ಯದ ಪ್ರಕಾರ ರತ್ನಾಜಿಯ ದಿಲ್ಲಿಯ ನವಾಬನ ಮಗಳಾಗಿದ್ದು, ಆಕೆ ಕುಮಾರರಾಮನ ಶೌರ್ಯ, ಸಾಹಸ ಕೇಳಿ ಮದುವೆಯಾಗಲು ಬಯಸುತ್ತಾಳೆ. ಆದರೆ ಕಂಪಿಲಿರಾಯನು ಸ್ವತಃ ತಾನೇ ಆಕೆಯನ್ನು ಮದುವೆಯಾಗಿಬಿಡುತ್ತಾನೆ.

**ಕೆಳದಿರಾಣಿ ವೀರಮ್ಮಾಜಿ ಸಮಾದಿ:** ಕೂಡ್ಲಿಗಿ ತಾಲೂಕಿನ ಉಜ್ಜನಿಯ ಒಂದು ಸಮಾದಿಯ ಕುರಿತು ಐತಿಹ್ಯ ಹೀಗಿದೆ. ಕೆಳದಿಯ ಬಸಪ್ಪನಾಯಕನ ರಾಣಿಯಾದ ವೀರಮ್ಮಾಜಿ ತನ್ನ ಗಂಡನ ಸಾವಿನ ನಂತರ ತನ್ನ ಸೋದರಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ಚೆನ್ನವೀರಪ್ಪನ ಮಗನನ್ನು ದತ್ತು ತೆಗೆದುಕೊಂಡಳು. ಆತನಿಗೆ ಸೋಮಶೇಖರ ನಾಯಕನೆಂದು ನಾಮಕರಣ ಮಾಡಿ ಪಟ್ಟ ಕಟ್ಟಿದಳು. ಈ ಬಾಲಕನನ್ನು ಮುಂದಿಟ್ಟುಕೊಂಡು ತಾನೇ ಕೆಳದಿಯನ್ನು ನೋಡಿಕೊಳ್ಳುತ್ತಿದ್ದಳು. ಈ

ಸಂದರ್ಭದಲ್ಲಿ ದಂಡೆತ್ತಿ ಬಂದ ಹೈದರಾಲಿ, ಕೆಳದಿ ರಾಜಧಾನಿ ಬಿದನೂರನ್ನು ಅತ್ಯಂತ ಪ್ರಾಯಾಸದಿಂದ ವಶಪಡಿಸಿಕೊಂಡು ರಾಣಿ ವೀರಮ್ಮಾಜಿ ಹಾಗೂ ಆಕೆಯ ದತ್ತು ಪುತ್ರನಾದ ಬಾಲಕ ಮೂರನೇ ಸೋಮೇಶ್ವರನಾಯಕನನ್ನು ಸೆರೆಹಿಡಿದು, ಮದುಗಿರಿ ಕೋಟೆಯಲ್ಲಿ ಬಲವಾದ ಪಹರೆಯೊಡನೆ ಸೆರೆಯಲ್ಲಿರಿಸಿದ. ವೀರಮ್ಮಾಜಿ ಸಹಾಯಕ್ಕಾಗಿ ಮರಾಠರ ಮಾಧವ ತಡವಾಗಿ ಸಹಾಯಕ್ಕಾಗಿ ಬಂದು ಮದುಗಿರಿಗೆ ಮುತ್ತಿಗೆ ಹಾಕಿ ರಾಣಿ ವೀರಮ್ಮಾಜಿ ಮತ್ತು ಸೋಮೇಶ್ವರನನ್ನು ಸೆರೆಯಿಂದ ಬಿಡಿಸಿಕೊಂಡು ಪೂನಾಕ್ಕೆ ಕರೆದೊಯ್ಯುವಾಗ ದಾರಿಯಲ್ಲಿ ತೀರಿಕೊಂಡಳೆಂದು, ಹೀಗೆ ಪೂನಾಕ್ಕೆ ಹೋಗುವಾಗ ವೀರಮ್ಮಾಜಿ ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕಿನ ಉಜ್ಜಿನಿಯಲ್ಲಿ ತೀರಿಕೊಂಡಳೆಂದು, ವೀರಮ್ಮಾಜಿಯ ಶವ ಉಜ್ಜಿನಿಯಲ್ಲಿ ಸಂಸ್ಕಾರ ಮಾಡಿದ್ದಾರೆಂದು ಹೇಳಲಾಗುತ್ತದೆ.

**ಗುಲಗಂಜಿ ಮಾಧವರಾಯ:** ಹಂಪಿ ವಿರೂಪಾಕ್ಷ ದೇವಾಲಯದ ಹಿಂಭಾಗಕ್ಕೆ ಒಂದು ಚಿಕ್ಕ ಗುಡಿಯಿದೆ. ಅದನ್ನು ಗುಲಗಂಜಿ ಮಾಧವರಾಯನ ಗುಡಿ ಎಂದು ಕರೆಯುತ್ತಾರೆ. ಈ ಗುಡಿಗೆ ಆ ಹೆಸರು ಬಂದಿರುವ ಹಿನ್ನೆಲೆ ಹೀಗಿದೆ. ಹಂಪಿಗೆ ದಕ್ಷಿಣಕಾಶಿ ಎಂಬ ಹೆಸರಿರುವುದು ಸತ್ಯಸಂಗತಿ. ಉತ್ತರ ಕಾಶಿಗಿಂತ ಇಲ್ಲಿ ಹೆಚ್ಚಿನ ರೀತಿಯ ಗುಡಿಗೋಪುರಗಳನ್ನು ಕಟ್ಟಿಸಿದರಂತೆ. ದಾನ, ಧರ್ಮ ಮಾಡಿದಂತೆ, ಈ ಬಗೆಯ ಗುಡಿಗೋಪುರಗಳ ಮತ್ತು ದಾನ-ಧರ್ಮದ ಬಗೆಗೆ ಗುಡಿಯ ಪರಿಸರದಲ್ಲಿ ಹತ್ತು-ಹಲವು ರೀತಿಯ ಐತಿಹ್ಯಗಳಿವೆ.

ಕೊನೆಗೆ ಒಂದು ದಿನ ಕಾಶಿ ಹೆಚ್ಚೋ, ಹಂಪಿ ಹೆಚ್ಚೋ ಎಂದು ತೂಗಿನೋಡಲು ನಿರ್ಧರಿಸಿ ಎರಡು ಪುಣ್ಯಕ್ಷೇತ್ರಗಳನ್ನು ತಕ್ಕಡಿಯಲ್ಲಿ ಹಾಕಿ ತೂಗಿದರಂತೆ. ಆಗ ಕಾಶಿ ಕ್ಷೇತ್ರದ ಭಾರ ಒಂದು ಗುಲಗಂಜಿಯಷ್ಟು ಹೆಚ್ಚಾದಾಗ, ಹಂಪಿಯ ಜನಕ್ಕೆ ಚಿಂತೆಯಾಯಿತು. ಚಿಂತಿತರಾದ ಜನರು ವಿರೂಪಾಕ್ಷ ಗುಡಿಯ ಹಿಂಬದಿಯಲ್ಲಿ ಒಂದು ಗುಲಗಂಜಿ ತೂಕದಷ್ಟು ಗುಡಿಯೊಂದನ್ನು ಕಟ್ಟಿದರು. ಮತ್ತೆ ಎರಡು ಕ್ಷೇತ್ರಗಳನ್ನು ತೂಗಲಾಗಿ ಅವು ಸಮಾನವಾಗಿ ಕಂಡುಬಂದವು. ಹೀಗೆ ಗುಲಗಂಜಿ ತೂಕದ ಗುಡಿ ಕಟ್ಟಿದ್ದರಿಂದ ಆ ಗುಡಿಗೆ ಗುಲಗಂಜಿ ಮಾಧವರಾಯನ ಗುಡಿ ಎಂದು ಹೆಸರಾಯಿತು ಎಂದು ಜನರು ನಿರೂಪಿಸುತ್ತಾರೆ. ಜನಪದರ ಕಲ್ಪನೆ ಒಂದು ಬಗೆಯ ಚರಿತ್ರೆಯನ್ನು ಐತಿಹ್ಯಗಳಲ್ಲಿ ನಿರೂಪಿಸುವುದು ಕಂಡುಬರುವ ಹಿನ್ನೆಲೆಯಲ್ಲಿ ಹಂಪಿಯಲ್ಲಿರುವ ದೇವಾಲಯದ ಹೆಚ್ಚಿನ ಪ್ರಮಾಣವನ್ನು ಕಥನ ಕಟ್ಟಿಕೊಡುತ್ತದೆ. ಅಲ್ಲದೆ ಬೇರೆ ಯಾವ ಸಾಮ್ರಾಜ್ಯವು ದೇವಾಲಯಗಳ ನಿರ್ಮಾಣಕ್ಕೆ ಈ ತರಹದ ಮಾನ್ಯತೆ ಕೊಟ್ಟಿರಲಾರದು ಎಂಬುದನ್ನು ನಿರೂಪಿಸುತ್ತದೆ.

**ಹರಿಹರ-ರಾಘವಾಂಕರ ಬಗೆಗೆ:** ರಾಘವಾಂಕ ಹರಿಶ್ಚಂದ್ರ ಕಾವ್ಯವನ್ನು ಬರೆದು ಹರಿಹರನಿಗೆ ತೋರಿಸಲು, ಅದು ಭೂರಮಣನ ಕಥೆಯೆಂದು ಆತ ಒಪ್ಪಿಕೊಳ್ಳದೇ ತಿರಸ್ಕರಿಸುವನು. ಏಕೆಂದು ಶಿಷ್ಯ ರಾಘವಾಂಕ ಕೇಳಲು, ಹರಿಶ್ಚಂದ್ರನಿಗೆ ದೇವರು ಕರುಣಿಸಿದಾಗ, ಕೈವಲ್ಯವನ್ನು ಪಡೆಯದೆ ತಿರುಗಿ ಸಾಮ್ರಾಜ್ಯವನ್ನು ಪಡೆದನಲ್ಲ ಆದ್ದರಿಂದ ಆತ ಭಕ್ತನಲ್ಲ ಎನ್ನುವರು. ಆದರೆ ಶಿಷ್ಯ ಸುಮ್ಮನಿರದೆ ಆತ ಸತ್ಯಕ್ಕಾಗಿ ತನ್ನ ಸತಿ ಸುತರನ್ನಲ್ಲದೆ ತನ್ನನ್ನೂ ಮಾರುಗೊಂಡನಲ್ಲ ಆದ್ದರಿಂದ

ಹರಿಶ್ಚಂದ್ರ ದೊಡ್ಡವನು ಎಂದು ಮುಂತಾಗಿ ವಾದಿಸುವನು. ಇದರಿಂದ ಕುಪಿತನಾದ ಹರಿಹರ ತನ್ನ (ಪಾವುಗೆ) ಮೆಟ್ಟಿಗಳಿಂದ ರಾಘವಾಂಕನ ಮುಸುಡಿಗೆ ಒದೆಯುತ್ತಾನೆ. ರಾಘವಾಂಕನ ಹಲ್ಲುಗಳು ಧರೆಗುರಿಳಿದವು. ನಂತರ ಕವಿ ಧಾರ್ಮಿಕ ಕಾವ್ಯಗಳನ್ನು ಬರೆದು ಗುರು ಕಾರುಣ್ಯಕ್ಕೆ ಒಳಗಾಗಿ ಮತ್ತೆ ಹಲ್ಲುಗಳನ್ನು ಪಡೆದನೆಂದು ಈ ದಂತಕಥೆ ಸಾಹಿತ್ಯ ಚರಿತ್ರೆಯಿಂದಲೂ ತಿಳಿದುಬರುತ್ತದೆ. ಆದರೆ ತಾನು ಬರೆದ ಕಾವ್ಯದ ಬಗ್ಗೆ ಹರಿಹರನೊಂದಿಗೆ ವಾದಕ್ಕಿಳಿದನೆಂಬ ಹೇಳಿಕೆ ವಿಶೇಷವಾಗಿದೆ. ಹಂಪಿಯ ಪರಿಸರದಲ್ಲಿ ಪ್ರಚಲಿತವಾದ ಐತಿಹ್ಯ ಇದಾಗಿದೆ.

**ಹೊನ್ನನಾಗತಿ:** "ದಾದಯ್ಯನಾಯಕನ ಧರ್ಮಪತ್ನಿ ಶ್ರೀಮತಿ ಹೊನ್ನನಾಗತಿ. ಇವಳಿಗೆ ರಾಜ್ಯದ್ರೋಹಿ ಅಪರಾಧದ ಪಟ್ಟಕಟ್ಟಿ, ಹೊನ್ನನಾಗತಿಯನ್ನು ಉಚ್ಚಂಗಿ ಬೆಟ್ಟದ ಮೇಲಿನ ಖುರಜಿನ ಕಿಟಕಿಯ ಮೂಲಕ ಹೊರತಳ್ಳಿ ಸಾಯಿಸುವ ಮರಣ ದಂಡನೆಯನ್ನು ದಾದಯ್ಯನಾಯಕನು ತನ್ನ ಸೇವಭಟ್ಟರಿಗೆ ಆಜ್ಞಾಪಿಸಿ ಇಲ್ಲಿಂದ ಕೆಳ ತಳ್ಳಲಾಯ್ತು." (ಕೇಶವರಾಯ ಟಿ.ಬಿ., ಹರಪನಹಳ್ಳಿ ಪಾಳೆಗಾರರು, ಪು-೧೪) ಹೊನ್ನನಾಗತಿಯನ್ನು ಬೆಟ್ಟದಿಂದ ನೂಕಿದ ಸ್ಥಳಕ್ಕೆ 'ಹೊನ್ನನಾಗತಿ ಝುರಿ' ಎಂದು ಕರೆಯುತ್ತಾರೆ.

**ಸಮುದಾಯಕ್ಕೆ ಸಂಬಂಧಿಸಿದ ಐತಿಹ್ಯಗಳು**

**ಅಂಬಿಗ ಮತಸ್ಥ:** ಅಂಬಿಗ ಸಮುದಾಯ ಮೂಲ ನೆಲೆಯ ಬಗ್ಗೆ ಐತಿಹ್ಯ ಹೀಗಿದೆ. "ಈ ಜಗತ್ತು ಮೊದಲು ಎಲ್ಲವೂ ನೀರಾಗಿತ್ತು. ಶಿವನು ಮಾತ್ರ ಒಂದು ದೋಣಿಯಲ್ಲಿ ಈ ನೀರಿನ ಮೇಲೆ ತಿರುಗುತ್ತಿದ್ದ. ಕ್ರಮೇಣ ನೀರು ತನ್ನ ಸುತ್ತಲೂ ಹೆಪ್ಪುಗಟ್ಟಿ ಭೂಮಿಯಾಗುತ್ತ ಹೊರಟಿತು. ನೀರಿನಲ್ಲಿ ಅನಂತ ಜೀವಿಗಳ ಉಗಮವೂ ಪ್ರಾರಂಭವಾಯಿತು. ಈ ಅನಂತ ಜೀವಿಗಳಲ್ಲಿ ಮನುಷ್ಯನ ಉಗಮವೂ ಆಯಿತು. ನೀರಿನಲ್ಲಿದ್ದ ಮಾನವರನ್ನು ಶಿವ ದೋಣಿಯಲ್ಲಿ ಹಾಕಿಕೊಂಡು ಹೆಪ್ಪುಗಟ್ಟಿದ ನೆಲದ ಮೇಲೆ ಬಿಡಲು ಪ್ರಾರಂಭಿಸಿದನು. ಶಿವನೊಂದಿಗೆ ಇನ್ನಷ್ಟು ಜನ ಅವನ ಕೆಲಸದಲ್ಲಿ ನೆರವಾದರು. ನೆಲದ ಮೇಲೆ ಉಳಿದ ಜನ ತಮಗೆ ಅನುಕೂಲವಾದ ಸ್ಥಳವನ್ನು ಹುಡುಕಿಕೊಂಡು ಜೀವಿಸತೊಡಗಿದರು. ಶಿವನೊಂದಿಗೆ ಕೆಲವು ಜನ ನೀರಿನ ದಡದಲ್ಲಿಯೇ ಉಳಿದುಕೊಂಡು ದೋಣಿ ನಡೆಸುವ ಕೆಲಸದೊಂದಿಗೆ ಜಲಚರಗಳನ್ನೇ ತಮ್ಮ ಆಹಾರವಾಗಿಸಿಕೊಂಡು ಬದುಕಲು ಪ್ರಾರಂಭಿಸಿದರು. ಈ ಜನಾಂಗವೇ ಮುಂದೆ ಅಂಬಿಗ ಮತಸ್ಥರೆಂದು ಪ್ರಸಿದ್ಧಿಯಾದರು." (ವೀರಣ್ಣ ದಂಡೆ, ೧೯೯೩, ಪುಟ-೧೫೩) ಇಲ್ಲಿ ಯಾವುದೇ ಸಂದರ್ಭ ಎಂಬುದು ಇಂತಹ ಐತಿಹ್ಯಗಳ ಹಿಂದಿರುವ ಆಶಯವಾಗಿದೆ.

**ಅಗಸ:** ಬೇರೆ ಬೇರೆ ಜಾತಿಗೆ ಸಂಬಂಧಪಟ್ಟಂತೆ ಹಲವಾರು ಐತಿಹ್ಯಗಳು ಪ್ರಚಲಿತದಲ್ಲಿವೆ. ಇಲ್ಲಿ ವ್ಯಕ್ತಿಗೆ ಸಂಬಂಧಿಸಿದಂತಹ ಐತಿಹ್ಯಗಳು ಒಂದು ಭಾಗದ ಅಧ್ಯಯನವಾದರೆ ಆ ಜನಾಂಗದ (ಜಾತಿ) ಮೂಲವನ್ನು ಅಧ್ಯಯನ ಮಾಡುವುದು ಎರಡನೆಯದಾಗಿರುತ್ತದೆ. ಆ ಹಿನ್ನೆಲೆಯಲ್ಲಿ ಸಮಾಜದಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರಿದ 'ಅಗಸ' ಸಮುದಾಯದ ವೃತ್ತಿ ಮತ್ತು ಜಾತಿಯ ಮೂಲಕ್ಕೆ ಸಂಬಂಧಪಟ್ಟಂತೆ ಐತಿಹ್ಯಗಳು ಬಳ್ಳಾರಿ ಪರಿಸರದಲ್ಲಿ ಲಭಿಸುತ್ತವೆ. ಸಮಾಜದಲ್ಲಿ ಸಮಾಜಕ್ಕೋಸ್ಕರ ತಮ್ಮನ್ನು ತಾವು ತೊಡಗಿಸಿಕೊಂಡ ಜನಾಂಗವು ತೀರ ವಿಶಿಷ್ಟವಾಗಿದೆ.

"ಇಲ್ಲಿ ಸೃಷ್ಟಿಗೆ ಮೂಲವಾದ ಐತಿಹ್ಯಗಳನ್ನು ಒಳಗೊಂಡ ಅಂಶ ಈ ಜನಾಂಗದ ಐತಿಹ್ಯದಿಂದ ತಿಳಿದುಬರುತ್ತದೆ. ಹಿಂದೊಮ್ಮೆ ಗಂಗೆಯು ಋತುಮತಿಯಾದಳು. ಸ್ನಾನಮಾಡಿ ನೀರಿನಲ್ಲಿ ತನ್ನ ಮೈಲಿಗೆ ಬಟ್ಟೆಗಳನ್ನು ತೇಲಿಬಿಟ್ಟಳು. ಭೂತಾಯಿ ಅದನ್ನು ತನ್ನಲ್ಲಿ ಹುದುಗಿಟ್ಟುಕೊಂಡಳು. ಕಾಲ ಕಳೆದಂತೆ ಯುಗಗಳು ಬದಲಾದಂತೆ ಮತ್ತೊಮ್ಮೆ ಪಾಂಚಾಲಿ ಹೊರಗಾದಳು. ಪಾಂಚಾಲಿ ಸ್ನಾನ ಮಾಡಿ ಬರುವಾಗ, ಹೊರಗಾದ ಬಟ್ಟೆಗಳು ಬಾಳೆ ಗಿಡದ ಮೇಲೆ ಇರಲು, ಬೆತ್ತಲೆ ಇರಲು ನಾಚಿದ ಪಾಂಚಾಲಿ ಶಿವನ ಮೊರೆ ಹೊಕ್ಕಳು. ತನ್ನ ಬಟ್ಟೆಯನ್ನು ಯಾರಾದರು ಮಡಿ ಮಾಡಿ ಕೊಡಲಿ ಎಂದು ಕೇಳಿದಳು. ಶಿವ ಅನುಕಂಪಗೊಂಡು ಮಂತ್ರಿಗೆ ಹೇಳಿದ. ನೀರು ಸಿಂಪಡಿಸಿದ ಹಲವು ಹನಿಗಳು ಚುಕ್ಕೆಗಳಾದವು. ಕೆಲವು ಬಾಳೆ ಎಲೆ ಮೇಲೆ ಬಿದ್ದವು. ಅದರಿಂದ ಹುಟ್ಟಿದ ಅವನಿಗೆ ಬಟ್ಟೆ ಸೆಳೆಯುವ ಕೆಲಸವನ್ನು ಕೊಡಲಾಯಿತು. ಅವನ ವಂಶಸ್ಥರೇ ಅಗಸರು." (ನಾಗರಾಜು ಎಂ., ೨೦೦೧, ಪುಟ-೨೯) ಒಂದು ಸಲ ಪಾರ್ವತಿ ಹಸಿಮಣ್ಣಿನಿಂದ ಆನೆಯೊಂದನ್ನು ಮಾಡಿದಳಂತೆ. ಆಕಸ್ಮಿಕವಾಗ ಶಿವ ಅದನ್ನು ತುಳಿದ ಅದರಿಂದ ಮೊದಲು ಹುಟ್ಟಿದ ಇವನ ವಂಶಸ್ಥರೇ ಅಗಸರು ಎನ್ನಬಹುದು.

**ಈಡಿಗ:** ಈ ಸಮುದಾಯದ ಬಗೆಗೆ ಇರುವ ಕಥೆಯೊಂದು ಐತಿಹ್ಯದ ಸ್ವರೂಪ ಪಡೆದುಕೊಂಡಿದೆ. "ಬಹುಕಾಲದ ಹಿಂದೆ ಒಂದಾನೊಂದು ದಿನ ಪಾರ್ವತಿ ಪರಮೇಶ್ವರರು ವಿಹಾರಾರ್ಥವಾಗಿ ಕಾಡಿಗೆ ಬರುತ್ತಾರೆ. ಪಾರ್ವತಿಗೆ ಬಾಯಾರಿಕೆಯಾಗುತ್ತದೆ. ಹತ್ತಿರದಲ್ಲಿದ್ದ ಈಚಲ ಮರವನ್ನು ನೋಡಿ ಈ ಮರದ ರಸದಿಂದ ದಾಹ ತಣಿಯಲು ಸಾಧ್ಯವೇ ಎಂದು ಯೋಚಿಸುತ್ತಾಳೆ. ಅದೇ ಮಾರ್ಗವಾಗಿ ಬಂದ ಬಳೆ ಮಾರುವ ಬಣಜಿಗನಿಗೆ ಈಚಲು ರಸ ತೆಗೆಯುವುದನ್ನು ಪಾರ್ವತಿ ಹೇಳಿಕೊಟ್ಟು ತೆಗೆಸುತ್ತಾಳೆ. ಅದನ್ನು ಸೇವಿಸಿ ಸಂತೃಪ್ತಿಗೊಂಡು ಉಂಗುರವೊಂದನ್ನು ಕೊಟ್ಟು ಅದರ ಗುಟ್ಟು ತಿಳಿಸಿ ಹೊರಡುತ್ತಾರೆ. ಆ ಉಂಗುರದ ಸಹಾಯದಿಂದ ಈಚಲು ಮರವನ್ನು ಬಗ್ಗಿಸಿ ಕಳ್ಳು ತೆಗೆಯಲು ಸಾಧ್ಯವಿತ್ತು. ಕ್ರಮೇಣ ಆಚಾರ ತಪ್ಪಿದ್ದರಿಂದ, ಆ ಉಂಗುರವನ್ನು ಅಳಿಲು ನುಂಗಿತು. ಆ ನಂತರ ಮರವನ್ನು ಹತ್ತಿಯೇ ರಸ ತೆಗೆಯಬೇಕಾಯಿತು." (ವೆಂಕಟೇಶ, ಹೊಸಪೇಟೆ ತಾಲೂಕು ಈಡಿಗರ ಸ್ಥಿತಿಗತಿಗಳು, ಪುಟ-೧೮) ಈ ವೃತ್ತಿಯನ್ನು ಅನುಸರಿಸಿ ಈಡಿಗರಾದರು ಎಂದು ಹೇಳುವ ಕಥನ ಒಂದು ಸಮುದಾಯದ ಹಿನ್ನೆಲೆಯನ್ನು ತಿಳಿಸುವುದಾಗಿದೆ.

ಹೀಗೆ ಸಮುದಾಯ ಮತ್ತು ವ್ಯಕ್ತಿಗಳ ಬಗೆಗೆ ಇರುವ ಅನೇಕ ಐತಿಹ್ಯಗಳನ್ನು ಬಳ್ಳಾರಿ ಪರಿಸರದಲ್ಲಿ ಕಾಣಬಹುದಾಗಿದೆ.

### ೫.೮.೩. ಸ್ಥಳ ಐತಿಹ್ಯಗಳು

ಬಳ್ಳಾರಿ ಜಿಲ್ಲೆಯು ಹಿಂದಿನ ಕಾಲದಿಂದಲೂ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಮಹತ್ವವನ್ನು ಹೊಂದಿರುವ ಪ್ರದೇಶ. ರಾಜಕೀಯವಾಗಿ ಮೌರ್ಯರು, ಶಾತವಾಹನರು, ಪಲ್ಲವರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಳಾಚೂರರು, ಪಾಂಡ್ಯರು,

ಹೊಯ್ಸಳರು, ವಿಜಯನಗರದ ಅರಸರು ಅಲ್ಲದೆ ಸಿಂಧರು, ಗುಪ್ತವಂಶಜರು, ಮಹಾಬಲವಂಶಜರು, ಪಾಳೆಗಾರರು, ನಾಯಕರು ಹಾಗೂ ಸುಲ್ತಾನರ ಮನೆತನಗಳ ಆಳ್ವಿಕೆಗೆ ಒಳಗಾಗಿದೆ. ಧಾರ್ಮಿಕವಾಗಿ ಜೈನ, ವೀರಶೈವ, ವೈಧಿಕ ಪ್ರಭಾವಕ್ಕೊಳಗಾದ ಜಿಲ್ಲೆಯು, ಸಾಂಸ್ಕೃತಿಕವಾಗಿ ಗುಡಿ-ಗುಂಡಾರಗಳು, ಮಠ-ಮಂದಿರಗಳು, ಕೆರೆ-ಬಾವಿಗಳು, ಮೂರ್ತಿ-ಶಿಲ್ಪಗಳನ್ನೊಳಗೊಂಡಂತೆ, ಶ್ರೀಮಂತಿಕೆಯಿಂದ ಕೂಡಿದೆ. ಹೀಗಾಗಿ ಇಲ್ಲಿಯ ಪ್ರತಿಯೊಂದು ಸ್ಥಳ, ದೈವ, ಶಿಲೆ, ಜಲ ಮುಂತಾದವುಗಳನ್ನು ಕುರಿತು ಆಯಾ ಪ್ರಾದೇಶಿಕ ವಲಯದಲ್ಲಿ ಐತಿಹ್ಯಗಳು ಜನಜನಿತವಾಗಿದೆ. ಈಗಾಗಲೇ ಪುರುಷೋತ್ತಮ ಬಿಳಿಮಲೆ ಮತ್ತು ಚಲುವರಾಜು ಅವರು ಹಂಪಿ ಪರಿಸರದ ಐತಿಹ್ಯಗಳನ್ನು ತಮ್ಮ ಕೃತಿಯಲ್ಲಿ ಅನಾವರಣ ಗೊಳಿಸಿದ್ದಾರೆ. ಅವುಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಜೊತೆಗೆ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ಮಾಡಿ ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದರ ಮೂಲಕ, ಬಳ್ಳಾರಿ ಪರಿಸರದ ಸಾಂಸ್ಕೃತಿಕ ಚರಿತ್ರೆಗೆ ಐತಿಹ್ಯಗಳ ಪಾಲು ಮತ್ತು ಮಹತ್ವವನ್ನು ಕಟ್ಟಿಕೊಡಲಾಗಿದೆ.

**ಅಮರದೇವರ ಗುಡ್ಡ:** ಕೂಡ್ಲಿಗಿ ತಾಲೂಕು ಕೇಂದ್ರದಿಂದ ಎರಡು ಕಿ.ಮೀ. ದೂರದಲ್ಲಿರುವ ಒಂದು ಹಳ್ಳಿ. ಪೂರ್ವದ ಗುಡ್ಡದಲ್ಲಿ ಕೆಲವಾರು ಮನೆಗಳು ಕಟ್ಟಿಕೊಂಡು ಜನರು ತಮ್ಮ ಬದುಕನ್ನು ಸಾಗಿಸುತ್ತಿದ್ದರು. ಸ್ವಲ್ಪ ದೂರದಲ್ಲಿ ಗುಂಡಿನ ಹೊಳೆ ಎಂಬ ಊರೊಂದು ಇತ್ತು. ಆ ಊರಿಗೆ ಬ್ರಹ್ಮರಾಕ್ಷಸ ಗಂಟು ಬಿತ್ತು. ಆ ರಾಕ್ಷಸಕ್ಕೆ ಹೆದರಿದ ಊರಿನ ಜನರು, ಗುಡ್ಡದಲ್ಲಿ ವಾಸಿಸುತ್ತಿದ್ದ ಜನರು ಬಂದು ಮನೆ ಕಟ್ಟಿಕೊಂಡರು. ಇಲ್ಲಿ ಗುಡ್ಡದವರು ಮತ್ತು ಗಂಡಿನಹೋಳೇರು ಎರಡು ಊರವರು ಸೇರಿ 'ಗುಡ್ಡ ಗುಂಡಿನ ಹೊಳೆ' ಎಂದು ಹೆಸರಾಯಿತು. ನಂತರ ಜಾನಪದರಲ್ಲಿ ಗುಡ್ಡ ಗುಂಡನಹಳ್ಳಿ 'ಗುಡ್ಡಗುಣಳ್ಳಿ' ಎಂದು ಕರೆಯುತ್ತಿರುವುದು ವಾಡಿಕೆಯಾಗಿದೆ. ಗುಡ್ಡದ ಮೇಲೆ ಅಮರೇಶ್ವರ ದೇವಾಲಯವಿದೆ. ಹಿಂದೆ ಅಮರ ಗಣಂಗಳು ಇಲ್ಲಿ ಬಂದು ಗುಡ್ಡದಲ್ಲಿ ನೆಲೆಸಿದ್ದರಂತೆ, ಅದಕ್ಕಾಗಿಯೇ ಗ್ರಾಮಸ್ಥರು ಅಮರೇಶ್ವರ ದೇವಸ್ಥಾನ ಕಟ್ಟಿ ಪೂಜಿಸುತ್ತಾರೆ. ಗುಡ್ಡದಲ್ಲಿ ಅಮರೇಶ್ವರ ದೇವರು ಇರುವುದರಿಂದ ಇಲ್ಲಿ ನೆಲೆಸಿರುವ ಹಳ್ಳಿಗೆ 'ಅಮರ ದೇವರ ಗುಡ್ಡ' ಎಂದು ಹೆಸರು ಬಂದಿದೆ ಎಂದು ಅಲ್ಲಿನ ಹಿರಿಯರಾದ ಹನುಮಂತಪ್ಪ ಹೊಟ್ಟೇರ್ (೬೫) ಅವರು ನಿರೂಪಿಸುತ್ತಾರೆ. ಅಲ್ಲಿನ ಸುತ್ತಮುತ್ತಲ ಜನರು ಇದನ್ನು ಕೇವಲ ವಾರ್ಗಿಕ ಭಾಗದಿಂದ ಸಂಬೋಧಿಸುತ್ತಾರೆ. ಉದಾ. ಗುಡ್ಡಕ್ಕೆ ಹೋಗಬೇಕು, ಗುಡ್ಡದ ತೇರಿಗೆ ಹೋಗಬೇಕು ಎಂದು ಹೇಳುವುದನ್ನು ಗಮನಿಸಲಾಗಿದೆ.

**ಅಯ್ಯನಗುಡ್ಡ :** ಕೂಡ್ಲಿಗಿಯಿಂದ ಹೊಸಪೇಟೆಗೆ ಬರುವ ಎನ್.ಎಚ್. ೧೩ರ ಮಾರ್ಗದಲ್ಲಿ ಕೂಡ್ಲಿಗಿಯಿಂದ ಐದಾರು ಕಿ.ಮೀ. ದೂರದಲ್ಲಿಯೇ ಶಿವಪುರವಿದೆ. ಅದರ ಸಮೀಪದಲ್ಲಿಯೇ ಅಯ್ಯನಗುಡ್ಡವಿದೆ. ಇಲ್ಲಿರುವ ಗುಡ್ಡದಲ್ಲಿ ಶರಣರು ವಾಸವಾಗಿದ್ದರು. ನಿತ್ಯವೂ ಅವರು ಪೂಜೆ, ಪುನಸ್ಕಾರಗಳನ್ನು ಮಾಡಿ ದೈವಭಕ್ತಿಯನ್ನು ಮೆರೆಯುತ್ತಿದ್ದರಂತೆ. ಆ ಪೂಜೆಯ ನಾದವು ರಾತ್ರಿ ವೇಳೆಯಲ್ಲಿ ಇಂದಿಗೂ ಗುಡ್ಡದಲ್ಲಿ ಕೇಳಿಬರುತ್ತದೆ. ಅಲ್ಲದೆ ಪ್ರತಿ ಸೋಮವಾರ ಊರಿನಲ್ಲಿ ಬಂದು ಕಂತೆ ಭಿಕ್ಷೆಯನ್ನು ಎತ್ತಿಕೊಂಡು ಹೋಗುವ ಅಯ್ಯ (ಸ್ವಾಮಿ) ಗುಡ್ಡದಲ್ಲಿ ವಾಸವಾಗಿದ್ದರಿಂದ ಅದಕ್ಕೆ

ಅಯ್ಯನಗುಡ್ಡ ಎಂದು ಕರೆಯುತ್ತಾರೆ. ಇಂದಿಗೂ ಜನರು ಆ ಗುಡ್ಡವನ್ನು ದೈವೀರೂಪದಲ್ಲಿ ಕಾಣುತ್ತಾರೆ. ಇದು ಜನರಲ್ಲಿರುವ ನಂಬಿಕೆಯಾಗಿದೆ. (ವಕ್ತೃ: ಗಂಗಮ್ಮ, ೬೫, ಶಿವಪುರ)

**ಅಮ್ಮನ ಮರಡಿ:** ಹೂವಿನ ಹಡಗಲಿ ತಾಲೂಕಿನ ಹಿರೇ ಮೈಲಾರದಲ್ಲಿರುವ ಮೈಲಾರನಿಗೆ ಸಂಬಂಧಿಸಿದ ಪ್ರತಿಯೊಂದು ಕಲ್ಲು, ಮಣ್ಣು, ವಸ್ತು ಒಂದು ಕಥನವನ್ನು ಹೇಳುತ್ತವೆ. ಇಲ್ಲಿನ 'ಅಮ್ಮನ ಮರಡಿ'ಯು ಹಿರೇಮೈಲಾರ ಗ್ರಾಮದಲ್ಲಿರುವ ಎತ್ತರ ಸ್ಥಳ ಇದಕ್ಕೆ ಮೈಲಾರನ ಡೆಂಕನ ಮರಡಿ ಎಂಬುದು ಸ್ಥಳಕ್ಕಿರುವ ಹೆಸರು. ಮಾಳಮ್ಮನನ್ನು ಈ ಮರಡಿಯಲ್ಲಿ ಬಿಟ್ಟು ಅವಳೊಂದಿಗೆ ಬಂದ ಭಕ್ತಾದಿಗಳನ್ನು ಕೂಡಿಕೊಂಡು ಮೈಲಾರಲಿಂಗನು ಡೆಂಕಣಮರಡಿಯ ಶಿಲಾರಕ್ಕೆ ಮಲ್ಲಾಸುರನನ್ನು ಕೊಲ್ಲಲು ಪ್ರಯಾಣಿಸುತ್ತಾನೆ. ಹೀಗೆ ಮಾಳಮ್ಮನನ್ನು ಬಿಟ್ಟು ಹೋದ ಸ್ಥಳಕ್ಕೆ 'ಅಮ್ಮನ ಮರಡಿ' ಎಂದು ಕರೆಯುವರು ಎಂಬುದಾಗಿ ಮಂಜುನಾಥ ಬೇವಿನಕಟ್ಟಿ ಅವರು ತಮ್ಮ ಸಾಂಸ್ಕೃತಿಕ ಪದಕೋಶದಲ್ಲಿ ವಿಶ್ಲೇಷಿಸಿದ್ದಾರೆ.

**ಅಮ್ಮನ ಕೆರೆ:** ಇದು ಕೂಡ್ಲಿಗಿಯಿಂದ ೩ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಬಗೆಗೆ ಒಂದು ಐತಿಹ್ಯವಿದೆ. ಬಹು ಹಿಂದೆ ಇಲ್ಲಿ ಹಲವು ದೇವಾಲಯಗಳನ್ನು ಕಟ್ಟಿಸಿದರು. ಆದರೆ ಅಮ್ಮ ಎಂಬ ಅನೇಕ ದೇವತೆಗಳನ್ನು ಇಲ್ಲಿ ಸ್ಥಾಪಿಸಿದರೆ ಹೊರತು ಆಂಜನೇಯ, ಬಸವೇಶ್ವರನನ್ನು ಬಿಟ್ಟರೆ ಹೆಚ್ಚು ಸ್ತ್ರೀ ದೇವತೆಗಳೇ ಇಲ್ಲಿ ನೆಲೆಗೊಂಡಿವೆ. ಪೂಜಾರಿಯ ಕನಸಿನಲ್ಲಿ ಅಮ್ಮ ಬಂದು ಕೆರೆ ಕಟ್ಟಿಸಿದರೆ, ಊರು ಉದ್ದಾರವಾಗವುದು ಎಂದಾಗ ಕೆರೆಯೊಂದನ್ನು ಕಟ್ಟಿಸಿದರಂತೆ. ಅಮ್ಮನ ಅಭಿಲಾಷೆಯಿಂದ ಕಟ್ಟಿಸಿದ ಕೆರೆಯಿಂದ ಆ ಗ್ರಾಮಕ್ಕೆ 'ಅಮ್ಮನಕೆರೆ' ಎಂದು ಹೆಸರು ಬಂದಿತೆಂದು ಕರೆಯಲಾಗಿದೆಯಂತೆ. (ವಕ್ತೃ: ಹೂಲೇಶಪ್ಪ, ೫೦, ಅಮ್ಮನಕೆರೆ)

**ಆಲೂರು:** ಹಿಂದೊಮ್ಮೆ ಒಂದು ಸ್ಥಳದಲ್ಲಿ ಊರೊಂದನ್ನು ಕಟ್ಟಿಕೊಂಡು ಜನರು ವಾಸವಾಗಿದ್ದರು. ಪ್ಲೇಗ್ ರೋಗ ಬಂದು ಆ ಊರಿನಲ್ಲಿ ವಾಸವಿದ್ದ ಜನ ಬದುಕುಳಿಯುವುದು ಕಷ್ಟವಾಯಿತಂತೆ. ಪ್ಲೇಗ್ ಮಾರಿಯಿಂದ ಕೊನೆಗೂ ಊರಿನಲ್ಲಿ ಸಾವಿನ ಸಂಖ್ಯೆ ಹೆಚ್ಚಾಯ್ತು. ಊರಲ್ಲಿ ಹದ್ದು ಕಾಗೆಯು ತಿರುಗಾಡುವ ಸ್ಥಿತಿ ಬಂದು ಊರು ಹಾಳಾಯಿತು. ಹೀಗೆ ಪಾಳುಬಿದ್ದ ಊರು ವರ್ಷಗಳು ಕಳೆದಂತೆ ಪುನಃ ಊರಿನ ವ್ಯಾಪ್ತಿ ವಿಸ್ತರಿಸಿದಾಗ, ಹಾಳೂರು ಎಂಬುದಾಗಿ ಕರೆದರು. ಹಾಳೂರು> ಆಲೂರು ಎಂಬ ಹೆಸರು ಬಂದಿತೆಂದು ಜನರು ಹೇಳುತ್ತಾರೆ. ಹಾಳೂರು ಜನರ ಬಾಯಲ್ಲಿ ಹಾಲೂರು ಎಂದಾಗಿದೆ 'ಳ' ಕಾರವು 'ಲ'ಕಾರವಾಗಿ ಪರಿವರ್ತನೆಯಾಗಿದೆ. ಅಂದು ಇದ್ದ ಊರಿನ ಸ್ಥಳದಲ್ಲಿ ಅಲ್ಪಸ್ವಲ್ಪ ಅವಶೇಷ ಈಗಿನ ಊರಿಗೆ ಸ್ವಲ್ಪ ದೂರದಲ್ಲಿರುವುದು ಕಂಡುಬರುತ್ತದೆ. ಆದರೆ ಈ ಊರಿಗೆ ಬಹಳಷ್ಟು ಕುಟುಂಬಗಳು ವಲಸೆ ಬಂದಿರುವುದು ತಿಳಿದುಬರುತ್ತದೆ.

**ಉಚ್ಚಂಗಿದುರ್ಗ:** ಪ್ರಸಿದ್ಧ ಕ್ಷೇತ್ರಗಳಲ್ಲಿ ಒಂದಾದ ಉಚ್ಚಂಗಿದುರ್ಗವು ಮೊದಲು ಬಳ್ಳಾರಿ ಜಿಲ್ಲೆಯಲ್ಲಿತ್ತು. ಈಗ ಉಚ್ಚಂಗಿದುರ್ಗವು ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲೂಕಿನಲ್ಲಿದೆ. ಧಾರ್ಮಿಕ ಕ್ಷೇತ್ರವಾದ ಉಚ್ಚಂಗಿದುರ್ಗಕ್ಕೆ ಉಚ್ಚೈಶೃಂಗೆದುರ್ಗ ಎಂದು ಕರೆಯುವ ವಾಡಿಕೆ ಇದೆ.

ಉಚ್ಚಂಗಿ ಪಾಂಡ್ಯರಿಂದ ಉಚ್ಚಂಗಿಪುರ, ಉಚ್ಚಂಗಿಬೆಟ್ಟ ಎಂಬ ಹೆಸರುಗಳಿವೆ. ಬೆಟ್ಟದಲ್ಲಿ ನೆಲೆಸಿರುವ ಉಚ್ಚಿಂಗೆಮ್ಮ ದೇವಿಯಿಂದ ಈ ಊರಿಗೆ ಉಚ್ಚಂಗಿದುರ್ಗ ಎಂಬ ಹೆಸರು ಬಂದಿರಬೇಕು. ದೇವಿ ಯಲ್ಲಮ್ಮ ಬೆಟ್ಟದಲ್ಲಿ ನೆಲೆಸಿದ್ದಳು. ಕಾಡುಸಿದ್ಧರು ತಮ್ಮ ಸುಖ ಸಂತೋಷಕ್ಕೆಂದು ಗಾಂಜ, ಬಂಗಿ ಮುಂತಾದ ನಿಶೆಪಾನಾದಿ ಸೊಪ್ಪನ್ನು ಅರೆದು ಸೇವಿಸುತ್ತಿದ್ದರು. ಒಂದು ದಿನ ಗಾಂಜದಂತಹ ನಿಶೆಪಾನ ಸೇವಿಸಿ, ದೇವಿ ಯಲ್ಲಮ್ಮನನ್ನು ಮೋಹಿಸಲು ಪ್ರಯತ್ನಿಸಿದರಂತೆ. ಇದನ್ನು ಅರಿತ ದೇವಿಯು ನಿಶೆಯಲ್ಲಿದ್ದ ಕಾಡುಸಿದ್ಧರನ್ನು ಆನೆಹೊಂಡಕ್ಕೆ ಬೀಳುವಂತೆ ಉಚ್ಚೆ ಒಯ್ದು ಅವರನ್ನು ಸರ್ವನಾಶ ಮಾಡಿದಳಂತೆ. ಆದ್ದರಿಂದ ದೇವಿಗೆ ಉಚ್ಚಂಗೆಮ್ಮ, ಉಚ್ಚಂಗಿ ಎಂದು ಆಕೆ ನೆಲೆಸಿರುವ ಗುಡ್ಡಕ್ಕೆ ಉಚ್ಚಂಗಿಗುಡ್ಡ, ಆ ಗುಡ್ಡದ ಮೇಲೆ ದುರ್ಗ ಕಟ್ಟಿದ್ದರಿಂದ ಉಚ್ಚಂಗಿದುರ್ಗ ಆಗಿದೆ ಎಂದು ಕೆಲವರು ಹೇಳುತ್ತಾರೆ. ಅಂದಿನಿಂದ ಸಿದ್ಧರು ಉಚ್ಚಂಗಿ ದುರ್ಗದಲ್ಲಿ ಉಳಿಯುವುದಿಲ್ಲವಂತೆ. ಇಂದು ಸಹ ಉಚ್ಚಂಗಿದುರ್ಗಕ್ಕೆ ಬಂದರೆ ಹಗಲು ಮಾತ್ರ ಊರಾಡಿ ಸಂಜೆ ಆಗುವುದರೊಳಗೆ ಹೋಗಿಬಿಡುತ್ತಾರೆ. ರಾತ್ರಿಯಲ್ಲಿ ಮಾತ್ರ ವಸತಿ ಮಾಡುವುದಿಲ್ಲ ಎನ್ನುವುದಕ್ಕೆ ಈ ಹಿನ್ನೆಲೆಯನ್ನು ಹೇಳುತ್ತಾರೆ.

* ಉಚ್ಚಂಗಿದುರ್ಗಕ್ಕೆ ಬಂದ ಪುರಾತನ ಹೆಸರುಗಳೆಂದರೆ, ಕೃತಯುಗದಲ್ಲಿ ಮೇಘನಾಥ ಪರ್ವತ ಎಂದು ಕರೆಯುತ್ತಿದ್ದರು. ಈ ದುರ್ಗದ ಅಧಿಪತಿಯಾಗಿ ಮೇಘನಾಥ ಎಂಬ ರಾಕ್ಷಸರು ಆಳುತ್ತಿದ್ದರಿಂದ ಈ ಪರ್ವತಕ್ಕೆ ಮೇಲಿನ ಹೆಸರು ಬಂದಿರಬೇಕು.

* ತ್ರೇತಾಯುಗದಲ್ಲಿ ಕನಕಗಿರಿ ಎಂತಲೂ ಈ ದುರ್ಗಕ್ಕೆ ಕರೆಯುತ್ತಿದ್ದರಂತೆ, ಈ ಯುಗದಲ್ಲಿ ಹಿರಣ್ಯ ಕಶ್ಯಪನನ್ನು ನಾರಾಯಣನು ವಧೆಗೈದ (ಸಂಹರಿಸಿದ) ಸಂತೋಷ ಸಮಯದಲ್ಲಿ ಸುವರ್ಣ ವೃಷ್ಟಿಯು ಇಲ್ಲಿಯೂ ಸಹ ಆಗಿತ್ತಂತೆ. ಆದ್ದರಿಂದ ಈ ಬೆಟ್ಟಕ್ಕೆ ಕನಕಗಿರಿಯಂತಲೂ ಕರೆಯುವುದು ವಾಡಿಕೆ.

* ದ್ವಾಪರಯುಗದಲ್ಲಿ ಉಚ್ಚಂಗಿದುರ್ಗಕ್ಕೆ ಉತ್ತುಂಗ ಪರ್ವತವೆಂತಲೂ ಕರೆಯುತ್ತಿದ್ದರಂತೆ. ಉತ್ತುಂಗ ಋಷಿಯು ಈ ದುರ್ಗದಲ್ಲಿ ವಾಸವಾಗಿದ್ದನಂತೆ. ಆತನಿಂದಾಗಿ ಉತ್ತುಂಗ ಪರ್ವತವೆಂದು ಕರೆದಿರಬೇಕು.

* ಕಲಿಯುಗದಲ್ಲಿ ಉಚ್ಚಂಗಿದುರ್ಗವೆಂದು ಈ ಬೆಟ್ಟಕ್ಕೆ ಹೆಸರು ಇದೆ. ಹಿಂದೆ ಉಚ್ಚಂಗಿಯಬ್ಬೆ ಎಂಬುವರು ಮೊದಲಾಗಿ ಮೂರು ಕನ್ನಿಕೆಯರು ಈ ಬೆಟ್ಟದಲ್ಲಿ ತಪಸ್ಸು ಮಾಡಿ ದೈವತ್ವ ಪಡೆದರು. ಅವರಿಂದಾಗಿ ಉಚ್ಚಂಗಿ ಪರ್ವತವೆಂತಲೂ ಕರೆಯುವುದು ವಾಡಿಕೆಯಾಗಿದೆ. ಹೀಗೆ ಈ ಸ್ಥಳಕ್ಕೆ ವಿವಿಧ ಹೆಸರುಗಳು ಬಳಕೆಯಲ್ಲಿವೆ. (ವಕ್ತೃ: ಹನುಮಂತಪ್ಪ ಪೂಜಾರಿ, ೫೭, ಮಾದಿಹಳ್ಳಿ)

**ಉಜ್ಜಿನಿ:** ಕೂಡ್ಲಿಗಿಯಿಂದ ಐದಿನೈದು ಕಿ.ಮೀ. ದೂರವಿರುವ ಉಜ್ಜಿನಿಯ ಸುಪ್ರಸಿದ್ಧ ಕ್ಷೇತ್ರವಾಗಿದೆ. ಈ ಸ್ಥಳದ 'ಮರುಳಸಿದ್ಧೇಶ್ವರ' ಸ್ವಾಮಿ ಸುತ್ತಮುತ್ತಲ ಗ್ರಾಮಗಳ ಮೇಲೆ ಪ್ರಭಾವ ಬೀರಿರುವ

ದೈವವಾಗಿದೆ. ಈ ಸ್ಥಳದ ಬಗೆಗೆ ಐತಿಹ್ಯವು ಈ ಕೆಳಗಿನಂತಿದೆ. ಶಂಭು ಮುನಿ ಶಿವಾಚಾರ್ಯರು ಮಧ್ಯಪ್ರದೇಶದ ಉಜ್ಜನಿಯ ಪೀಠಾಚಾರ್ಯರಾಗಿದ್ದರು. ಅಲ್ಲಿಯ ವೀರಸೇನ ಎಂಬುವ ದೊರೆಯು ಬಹಳ ಮತಾಂಧರನಾಗಿದ್ದು, ಅವನು ಜೈನ ಮತದವನಾಗಿದ್ದನು. ಅನ್ಯ ಧರ್ಮವೆಂದರೆ ಸದಾ ಈರ್ಷೆಯಿಂದ ನೋಡುತ್ತಿದ್ದನಂತೆ. ಒಂದು ದಿನ ವೀರಶೈವ ಧರ್ಮೀಯರನ್ನು ಮತ್ತು ಅವರ ಮಠಗಳನ್ನು ನಾಶ ಮಾಡಬೇಕೆಂದು ಯುದ್ಧ ಸಾರಿದ. ಯುದ್ಧದಲ್ಲಿ ವೀರಶೈವರಿಗೆ ಗೆಲುವಾಯಿತು. ಆದರೆ ಯುದ್ಧದಲ್ಲಾದ ಅನಾಹುತ ಕಗ್ಗೊಲೆಗಳನ್ನು ನೋಡಿ ಶಂಭುಮುನಿ ಶಿವಾಚಾರ್ಯನಿಗೆ ಅಪಾರ ವ್ಯಥೆಯಾಯಿತು. ಗೆದ್ದ ರಾಜ್ಯವನ್ನು ವೀರಸೇನನಿಗೆ ಹಿಂದಿರುಗಿಸಿದನು. ತಮ್ಮ ಪಟ್ಟದ ಶಿಷ್ಯರೂ ಆದ ಮರುಳಾದ್ಯರಿಗೆ ಅಧಿಕಾರ ಸೂತ್ರವನ್ನು ಅನುಗ್ರಹಿಸಿದರು.

"ಮರುಳಾದ್ಯ ಶಿವಾಚಾರ್ಯರು ಶಿಷ್ಯರೊಡಗೂಡಿ ದೇಶಸಂಚಾರ ಕೈಗೊಂಡರು. ಉಜ್ಜಿನಿ ಬಳಿ ತಪಸ್ಸನ್ನಾಚರಿಸುತ್ತಿರುವಾಗ, ಪಾಂಡ್ಯರಾಜ ಅಲ್ಲಿಗೆ ಬಂದು ತನ್ನ ಕೃತಜ್ಞತೆಯನ್ನು ಅರ್ಪಿಸಿದ ಕಾರಣ ಪಾಂಡ್ಯರಾಜ ಪೀಠಾಚಾರ್ಯರ ಆಶೀರ್ವಾದದಿಂದ ಸಂತಾನ ಪಡೆದಿದ್ದ. ನಂತರ ಶ್ರೀಗಳವರ ಅಭೀಪ್ಸೆಯಂತೆ ಪಾಂಡ್ಯರಾಜ ಅಲ್ಲಿಯೇ ಒಂದು ಸದ್ಧರ್ಮ ಸಿಂಹಾಸನ ಮಠವನ್ನು ಕಟ್ಟಿಕೊಟ್ಟನು. ಮರುಳಾಧ್ಯರು ತಮ್ಮ ಮೂಲಸ್ಥಳದ ಹೆಸರನ್ನೇ ಈಗಿನ ಉಜ್ಜಿನಿಗೆ ನಾಮಕರಣ ಮಾಡಿದ್ದಾರೆಂದು ತಿಳಿದುಬರುತ್ತದೆ." (ರಮೇಶ ಕೆ., ೨೦೦೧, ಪುಟ-೭) "ಉಜ್ಜಿನಿ ಗ್ರಾಮಕ್ಕೆ ಮೊದಲು 'ರತ್ನಪುರ' ಎಂಬ ಹೆಸರು ಇತ್ತು ಎಂಬ ಮಾಹಿತಿಯನ್ನು ಕರ್ನಾಟಕ ಗೆಜೆಟಿಯರ್‌ನಿಂದ ತಿಳಿದುಬರುತ್ತದೆ. ಮೂಲತಃ ಜೈನರ ಉಗಮ ಉಜ್ಜಿನಿಯಲ್ಲಿ ಆಗಿರಬೇಕು ಎಂದು ವಿವರಣೆ ಕೊಡುತ್ತಾರೆ." (ರವಿಕುಮಾರ ಎನ್.ಎಂ., ೧೯೯೮, ಪುಟ-೪೯)

ಉಜ್ಜಿನಿ ಎಂಬ ಲೇಖನದಲ್ಲಿ ಉಜ್ಜಿನಿ ರುದ್ರಪ್ಪನವರು ಉಜ್ಜಿನಿಯ ದೇವಾಲಯದಲ್ಲಿ ಜೈನಧರ್ಮಕ್ಕೆ ಸಂಬಂಧಿಸಿದ ಅಂಶಗಳು ಯಾವ ಬಗೆಯಲ್ಲಿ ಕಂಡು ಬರುವುದಿಲ್ಲವೆಂಬುದು ಸ್ಪಷ್ಟವಾಗಿದೆ ಎಂದಿದ್ದಾರೆ. ಹೀಗಾಗಿ ಉಜ್ಜಿನಿ ಬಗೆಗಿನ ಐತಿಹ್ಯವೇ ಈ ಸ್ಥಳದ ಹೆಸರಿಗೆ ಕಾರಣ ಇರಬೇಕೆಂದು ತಿಳಿದುಬರುತ್ತದೆ.

**ಏಳೂರು ಗುಡ್ಡ (ನರಸಿಂಹಗಿರಿ):** ಕೂಡ್ಲಿಗಿ ತಾಲೂಕಿನ ಏಳೂರು ಗುಡ್ಡ ಗ್ರಾಮದಲ್ಲಿ ಹಿಂದೆ ಒಂದು ದಿನ ಬೆಂಕಿ ಮಳೆ ಸುರಿಯುತ್ತದೆ ಎಂದು ಹೇಳಿದ್ದರಂತೆ. ಗುಡ್ಡದ ಸುತ್ತಲೂ ಇರುವ ಊರುಗಳ ಜನರು ಹೆದರಿದ್ದರು. ಏಳು ಊರು ಜನರು ಗುಡ್ಡದಲ್ಲಿ ಇರುವ ಗವಿಯೊಳಗೆ ಅಡಗಿ ಕೊಂಡರು. ಬೆಂಕಿ ಮಳೆ ಸುರಿದು ಗವಿ ಮುಚ್ಚಿಕೊಂಡು ಹೋಯಿತು. ಏಳು ಊರಿನ ಜನರು ಗುಡ್ಡದಲ್ಲಿ ಐಕ್ಯವಾದರು. ಅದರಿಂದ ಗುಡ್ಡದಲ್ಲಿ ಏಳೂರರು ಐಕ್ಯವಾದ ಗುಡ್ಡವನ್ನು 'ಏಳೂರುಗುಡ್ಡ' ಎಂದು ಕರೆಯುತ್ತಾರೆ. ಆ ಗುಡ್ಡದಲ್ಲಿ ನರಸಿಂಹನ ಗುಡಿಯಿದೆ. ನರಸಿಂಹನ ಗುಡಿಯ ಗುಡ್ಡದಲ್ಲಿ ಇರುವ ಕಾರಣ ಗುರುತಿಸಿ 'ನರಸಿಂಹಗಿರಿ' ಎಂದು ಹೊಸ ಹೆಸರಿನಿಂದ ಇಂದು ಕರೆಯಲಾಗುತ್ತದೆ. ಏಳೂರು ಜನ ಮುಳುಗಿರುವ ಗುಡ್ಡದಲ್ಲಿ ಆಂಜನೇಯನ ಗುಡಿಯಿದೆ. ಇಂದು ಗುಡ್ಡದ ಅಕ್ಕಪಕ್ಕ

ಊರಿನ ಜನರು ಮಕ್ಕಳಿಗೆ ಯಂತ್ರ-ಮಂತ್ರ ಹಾಕುವುದಕ್ಕೆ ಹನುಮಪ್ಪನ ಏಳು ಊರುಗಳಿಗೆ ಹೋಗಿ ಬೆವರು ತರುವುದಿಲ್ಲ. ಗುಡ್ಡದಲ್ಲಿರುವ ಹನುಮಪ್ಪನ ಬೆವರು ತಂದು ಮಂತ್ರ ಹಾಕಿಸುತ್ತಾರೆ. ಅಂದರೆ ಏಳೂರುಗಳಿಗೆ ಹೋಗಿ ಬೆವರು ತಂದದ್ದಕ್ಕೆ ಸಮ ಎಂಬುದು ಇಂದಿಗೂ ಅಲ್ಲಿಯ ಜನರಲ್ಲಿರುವ ನಂಬಿಕೆಯಾಗಿದೆ.

**ಕಡ್ಡಿರಾಂಪುರ:** ಹೊಸಪೇಟೆಯಿಂದ ಹಂಪಿಗೆ ಹೋಗುವ ಮಾರ್ಗದಲ್ಲಿ ಬರುವ ಕಡ್ಡಿರಾಂಪುರ ಕುರಿತು ಜನವದಂತಿ ಹೀಗಿವೆ.

* ವಿಜಯನಗರ ಕಾಲದಲ್ಲಿ ಖಡ್ಗಗಳನ್ನು ತಯಾರಿಸುತ್ತಿದ್ದರಂತೆ. ಖಡ್ಗರಾಮಪುರ ಎಂಬುದರಿಂದ ಕಡ್ಡಿರಾಮಪುರ ಎಂಬ ಹೆಸರು ಬಂದಿದೆ.

* ಸೀತೆಯನ್ನು ಕಳೆದುಕೊಂಡ ರಾಮನು ಹುಡುಕಿಕೊಂಡು ಈ ಸ್ಥಳಕ್ಕೆ ಬಂದಾಗ ಚಿಂತೆಯಿಂದ ಸೊರಗಿ ಕಡ್ಡಿಯಂತಾಗಿದ್ದ ಈ ಊರಿಗೆ ಕಡ್ಡಿರಾಮಪುರ>ಕಡ್ಡಿರಾಂಪುರ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ. ಪ್ರಾಯಶಃ ರಾಂಪುರ ಎಂಬ ಹೆಸರಿನ ಗ್ರಾಮಗಳು ಎರಡು ಇದ್ದ ಕಾರಣ ಗುರುತಿಗಾಗಿ ಈ ರೀತಿ ಕರೆಯುವ ರೂಢಿ ಮೊದಲಿನಿಂದಲೂ ನಾಮಾಧ್ಯಯನದಲ್ಲಿ ಗಮಿಸಬಹುದಾಗಿದೆ.

**ಬಸವನಕೋಡು:** ಬಸವನಕೋಡು ಗ್ರಾಮದ ಐತಿಹ್ಯವೊಂದು ಈ ರೀತಿಯಲ್ಲಿದೆ. ಒಂದು ಕಾಲದಲ್ಲಿ ಜಗನ್ನಾಥ ಎಂಬುವನು ಕೆರೆಯೊಂದನ್ನು ಕಟ್ಟಿಸಿದನು. ಕೆರೆಯನ್ನು ಕಟ್ಟುವ ವಡ್ಡರಿಗೆ ಬಳ್ಳದಲ್ಲಿ ಹೊನ್ನ(ಹಣ)ನ್ನು ಅಳೆದುಕೊಡ್ತೀನಿ ಎಂದು ಹೇಳಿ, ಕೆರೆಯನ್ನು ಕಟ್ಟಿಸಿದನಂತೆ. ಕೆರೆಯು ಮುಗಿಯಿತು ಮಾತಿನಂತೆ ಜಗನ್ನಾಥ ಬಳ್ಳದಲ್ಲಿ ಹಣವನ್ನು ಅಳೆದುಕೊಡದೇ ಎತ್ತಿನ (ಬಸವನ) ಕೋಡಿನಿಂದ ಹಣವನ್ನು ಅಳೆದುಕೊಟ್ಟನಂತೆ. ಎತ್ತಿನ ಕೋಡಿನಿಂದ ಅಳೆದ ಕಾರಣ ಆ ಊರಿಗೆ ಬಸವನಕೋಡು, ಬಸರಕೋಡು ಎಂದು ಹೆಸರಾಯಿತಂತೆ. ಅಲ್ಲದೆ ವಡ್ಡರ ಸಮುದಾಯದವನು ಈ ಕೆರೆಯ ಕಟ್ಟೆ ಎಂದಿಗೂ ನಿಲ್ಲದಿರಲಿ, ಅದರಿಂದ ಬೆಳೆ ಬೆಳೆಯದಿರಲಿ ಎಂದು ಹೋದನಂತೆ, ಅದರಂತೆಯೇ ಇಂದಿಗೂ ಕೆರೆಯು ಒಡೆದಿರುವುದು ಹಾಗೆಯೇ ಇದೆ. ಕೆರೆಯಲ್ಲಿ ನೀರು ತುಂಬುವುದಿಲ್ಲ. ಆದ್ದರಿಂದ ಯಾವ ಬೆಳೆಯೂ ಬೆಳೆಯುವುದಿಲ್ಲ. ಅದು ವಡ್ಡರ ಶಾಪವೆಂದು ಹೇಳುತ್ತಾರೆ. ಇದೇ ಜಗನ್ನಾಥನ ಕೆರೆ. ಆತನು ಬಸವನ ಕೋಡಿನಿಂದ ಅಳೆದ ಕಾರಣ ಬಸವನಕೋಡು ಎಂದಾಗಿದೆ ಎಂಬುದು ಈ ಗ್ರಾಮದ ಹಿರಿಯರ ವಿಚಾರವಾಗಿದೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಕೊಟ್ಟ ಮಾತನ್ನು ನಡೆದುಕೊಳ್ಳದೇ ಹೋದರೆ ಆಗುವ ಅನಾಹುತಗಳೇನು ಎಂಬುದು ಗೊತ್ತಾಗುತ್ತದೆ.

**ಬಳ್ಳಾರಿ:** ಈ ಊರಿನ ಕುರಿತಾದ ಐತಿಹ್ಯವೊಂದು ಈ ರೀತಿಯಾಗಿದೆ. "ಬಳ್ಳಾರಿ ಸಮೀಪವಿರುವ ಕೋಳೂರಿನಲ್ಲಿ ಒಬ್ಬ ಶಿವಭಕ್ತನಿದ್ದ. ಅವನ ಹೆಸರು ಬಳ್ಳೇಶ ಮಲ್ಲಯ್ಯ. ಈತನು ಶಿವಲಿಂಗ ಪೂಜೆಯಾದ ನಂತರವೇ ಊಟ ಸೇವಿಸುತ್ತಿದ್ದನಂತೆ. ಬಳ್ಳಾರಿಗೆ ಬಂದ ಮಲ್ಲೇಶ ಶಿವಲಿಂಗವಿಲ್ಲದ್ದರಿಂದ ತನ್ನ ಬಳ್ಳವನ್ನೇ ಬೋರಲಾಗಿಟ್ಟು ಅದನ್ನು ಲಿಂಗವೆಂದು ಭಾವಿಸಿ ಭಕ್ತಿಯಿಂದ ಪೂಜೆ ಮಾಡುತ್ತಾನೆ. ಇವನ ಭಕ್ತಿಗೆ ಮೆಚ್ಚಿದ ಶಿವ ಪ್ರತ್ಯಕ್ಷನಾಗುತ್ತಾನೆ. ಹೀಗೆ ಶಿವನು ಬಳ್ಳದಲ್ಲಿ ಪ್ರತ್ಯಕ್ಷನಾದುದರಿಂದ ಈ

ಬಳ್ಳೇಶನಿಂದಾಗಿ ಬಳ್ಳಾರಿ ಎಂಬ ಹೆಸರು ಬಂದಿತೆಂದು ಹೇಳಿದ್ದಾರೆ." (ನಾಗಯ್ಯ ಜೆ.ಎಂ., ೧೯೯೨, ಪುಟ-೨-೩) ಬಳ್ಳಾರಿಯ ಕೋಟೆಯಲ್ಲಿ ಇಂದಿಗೂ ಮಲ್ಲೇಶ್ವರ ದೇವಾಲಯ ಇರುವುದನ್ನು ಕಾಣುತ್ತೇವೆ. ಇನ್ನೊಂದು ಹೇಳಿಕೆಯ ಪ್ರಕಾರ ಬಳ್ಳಾರಿ ಎಂಬ ದೇವತೆಯ ಹೆಸರಿನಿಂದಾಗಿ ಈ ಊರಿಗೆ ಬಳ್ಳಾರಿ ಎಂದು ಹೆಸರು ಬಂದಿದೆ ಎಂದು ಕೆಲವರು ಹೇಳುವರು. ಬಳ್ಳಾರಿ ದೇವತೆಯೇ ಈ ಊರಿಗೆ ಮೂಲದೇವತೆಯಾಗಿದ್ದರಿಂದ ಆ ಹೆಸರು ಪ್ರತೀತವಾಗಿದೆ ಎಂದು ಹೇಳಲಾಗುತ್ತದೆ.

ಇನ್ನೊಂದು ಆಶಯದಂತೆ ಬಳ್ಳಾರಿ ಎಂಬ ಹೆಸರಿಗೆ ಒಬ್ಬ ದುಷ್ಟ ವ್ಯಕ್ತಿಯ ನಾಮವನ್ನು ಹೊತ್ತು ನಿಂತಿದೆ ಎಂಬುದಾಗಿ ವಿದ್ವಾಂಸರಾದ ಕಲ್ಬುರ್ಗಿ ಎಂ.ಎಂ. ಅವರು ವಿವರಣೆ ನೀಡುತ್ತಾರೆ.

'ಬಳ್ಳಾರಿ' ನಾಮ ಮಹಾಭಾರತದ ಕಥೆಯನ್ನು ಹಿನ್ನೆಲೆಯಾಗಿಸಿಕೊಂಡಿದೆ. ಹಸ್ತಿನಾವತಿಯನ್ನು ಧರ್ಮರಾಯನು ಆಳುತ್ತಿದ್ದ ಸಮಯದಲ್ಲಿ ಕುಂತಳ ನಗರವನ್ನು ಚಂದ್ರಹಾಸ ರಾಯನು ಆಳುತ್ತಿದ್ದನು. ಆಗ ಪ್ರದೇಶ ಅರಣ್ಯವಾಗಿತ್ತು. ಅಲ್ಲಿರುವ ಗುಡ್ಡದಲ್ಲಿ ಬಾಳಾಸುರನೆಂಬ ರಾಕ್ಷಸನು ಜೀವ ಕೋಟಿಗಳಿಗೆ ಉಪದ್ರವ ಮಾಡುತ್ತ ಇರುವಾಗ ಸ್ವರ್ಗಲೋಕದ ದೇವಕನ್ನಿಕೆಯರು ಭೂಲೋಕದ ಈ ಸ್ಥಳದಲ್ಲಿ ಇಚ್ಛಾ ವಿಹಾರದಲ್ಲಿ ಇರುವಾಗ ಬಾಳಾಸುರನು ದೇವ ದೇವಕನ್ನಿಕೆಯರಿಗೆ ಕಾಮಾತುರದಿಂದ ಉಪದ್ರವವನ್ನು ಕೊಟ್ಟಿದ್ದರಿಂದ ದೇವೇಂದ್ರನು ಇದನ್ನು ಕೇಳಿ ಒದೆ ಮಾಡುವ ನಿಮಿತ್ತ ಭೂಲೋಕಕ್ಕೆ ಬಂದು ವಜ್ರಾಯುಧದಿಂದ ಸಂಹಾರ ಮಾಡಿದ್ದರಿಂದ ಆ ಗುಡ್ಡಕ್ಕೆ 'ಬಳ್ಳಾರಿ' ಎಂದು ನಾಮ ಪ್ರಸಿದ್ಧಿಯಾಯಿತು ಎಂಬುದಾಗಿ ಉಲ್ಲೇಖಿಸುತ್ತಾರೆ.

ಬಳ್ಳಾರಿಯಲ್ಲಿರುವ ದೇವತೆಯ ಹೆಸರೆ ಬಳ್ಳಾರಮ್ಮ ದೇವಿಯು ಆ ಪ್ರದೇಶದಲ್ಲಿ ನೆಲೆಸಿದ್ದರಿಂದ 'ಬಳ್ಳಾರಿ' ಎಂದಾಗಿರಬೇಕು. ಕೋಲಾರದ ಅಮ್ಮನಿಂದ 'ಕೋಲಾರ' ಎಂದಾದಂತೆ, ಇಲ್ಲಿಯೂ ಕೂಡಾ 'ಬಳ್ಳಾರಿ' ಎಂದಾಗಿರಬೇಕು. ನಂತರ ಬಳ್ಳಾರಿ ದುರುಗಂಭ (ದುರುಗಮ್ಮ ಆಗಿರಬೇಕು) ಇತ್ಯಾದಿ ವಿಚಾರಗಳನ್ನು ಕಲ್ಬುರ್ಗಿ ಎಂ.ಎಂ. ಅವರು ವಿವರಣೆ ನೀಡಿದ್ದಾರೆ.

ಒಟ್ಟಾರೆಯಾಗಿ 'ಬಳ್ಳಾರಿ' ಸ್ಥಳನಾಮಕ್ಕಿರುವ ಎರಡು ಐತಿಹ್ಯಗಳನ್ನು ನೋಡಿದರೆ, ಒಂದು ಶಿವಭಕ್ತನಿಂದ ಈ ಹೆಸರು ಬಂದಿದೆ. ಎರಡನೆಯದಾಗಿ ಅದಕ್ಕೆ ವಿರುದ್ಧವಾದಂತೆ ರಾಕ್ಷಸನಿಂದ ಈ ಗುಡ್ಡಕ್ಕೆ (ಸ್ಥಳಕ್ಕೆ) ಬಳ್ಳಾರಿ ಎಂಬುದಾಗಿ ಐತಿಹ್ಯಗಳು ಸಿಕ್ಕುತ್ತವೆ.

ಮತ್ತೊಂದು ಆಶಯದಂತೆ 'ಬಳ್ಳಾರಿ' ಬಗೆಗೆ ಅಂದರೆ ನಾಮದ ಕುರಿತು ಕೆಲವೊಂದು ಐತಿಹ್ಯಗಳು ಸಿಗುತ್ತವೆ. ಕರ್ನಾಟಕದ ಪ್ರಧಾನ ಸಂಶೋಧಕರಲ್ಲಿ ಒಬ್ಬರೆನಿಸಿದ ಕಲಬುರ್ಗಿ ಎಂ.ಎಂ. ಅವರು ತಮ್ಮ ಕರ್ನಾಟಕ ಕೈಫಿಯತ್ತಿನಲ್ಲಿ ಬಳ್ಳಾರಿಯ ಸ್ಥಳನಾಮದ ಕುರಿತು ವಿವರಣೆಯ ಮತ್ತೊಂದು ಬಗೆಯನ್ನು ನೋಡಬಹುದು.

"ಬಳಹರಿ ನಾಮವು ಕಲಿಯುಗದಲ್ಲಿ ಬಳ್ಳಾಳ ರಾಯನ ವಂಶಸ್ಥನಾದ ಸಿಂಧು ಬಳ್ಳಾಳ ರಾಯನು ಇಲ್ಲಿ ರಾಜ್ಯಭಾರ ಮಾಡುತ್ತ, ಇರುವ ವೇಳೆಯಲ್ಲಿ ಚತುರಂಗಬಲ ಸಮೇತನಾಗಿ ಬೇಟೆಗೆ ಹೊರಟು ಅರಣ್ಯದಲ್ಲಿ ವ್ಯಾಘ್ರ ಮುಂತಾದ ಕ್ರೂರ ಮೃಗಗಳನ್ನು ಸಂಹಾರ ಮಾಡುತ್ತಾ

ಈ ಪರ್ವತ ಪ್ರದೇಶಕ್ಕೆ ಬಂದು ಈ ಪರ್ವತದ ಮೇಲೆ ಇರುವ ನಿರ್ಮಲ ಲೋಕದ ದಿವ್ಯ ದೇವ ಖ್ಯಾತಕಗಳನ್ನು ಕಂಡು, ಈ ಸ್ಥಳ ಗ್ರಾಮ ಕಟ್ಟಿಸಲಿಕ್ಕೆ ಚೆನ್ನಾಗಿದ್ದಿತೆಂದು ತಿಳಿದು ಅರಣ್ಯವನ್ನು ಭೇದಿಸಿ ಇದಕ್ಕೂ ಈ ಪರ್ವತದ ಉತ್ತರ ಭಾಗಕ್ಕೆ ಸಮೀಪವಾಗಿರುವ ಬಾಲ ಗುಡ್ಡಕ್ಕೂ ಮಧ್ಯದಲ್ಲಿ ಭೂಮಿಯು ಸಮನಾಗಿದ್ದು ಸ್ಥಳದಲ್ಲಿ ಪಟ್ಟಣವನ್ನು ಕಟ್ಟಿಸಿ 'ಬಳಹರಿ' ಎಂಬ ನಾಮ ಇಟ್ಟು ವ್ಯವಹರಿಸಿಕೊಂಡನು" (ಕಲಬುರ್ಗಿ ಎಂ.ಎಂ., ೧೯೯೪, ಪುಟ-೬೧) ಎಂಬುದಾಗಿ ತಿಳಿದುಬರುತ್ತದೆ.

**ಬಾಗುಳಿ:** ಈ ಗ್ರಾಮವು ವಿಜಯನಗರದ ರಾಜಧಾನಿ ಹಂಪೆಯಿಂದ ದಕ್ಷಿಣಕ್ಕೆ ಎಪ್ಪತ್ತು ಕಿ.ಮೀ. ದೂರದಲ್ಲಿರುವ ಬಾಗುಳಿಯ ಹರಪನಹಳ್ಳಿ ತಾಲೂಕಿನಲ್ಲಿದೆ. ಇದು ದೇವಾಲಯದಿಂದಲೇ ಪ್ರಸಿದ್ಧಿ ಹೊಂದಿದ್ದು, ಹೊಯ್ಸಳರ ಆಳ್ವಿಕೆಯ ರಾಜಧಾನಿಯಾಗಿ ಮೆರೆದ ಗ್ರಾಮವಾಗಿದೆ. ಈ ಊರಿನ ಹೆಸರಿನ ಐತಿಹ್ಯದ ಪ್ರಕಾರ "ಬಾಗಳಿಯ ಮೂಲ ಹೆಸರು 'ಬಾಳ್ಗುಳಿ' ಈ ಶಬ್ದ ವಿಂಗಡಿಸಿದಾಗ 'ಬಾಳ್' ಮತ್ತು 'ಗುಳಿ' ಎಂದಾಗುತ್ತದೆ. ಬಾಳ್ ಎಂದರೆ ಖಡ್ಗ, ಗುಳಿ ಎಂದರೆ ತಗ್ಗು ಅಥವಾ ಕಂದಕ ಎಂಬ ಅರ್ಥವನ್ನು ಕೊಡುತ್ತದೆ. ಅಂದರೆ ಒಂದು ಸಾಮ್ರಾಜ್ಯದ ಸ್ಥಾಪನೆಗೆ ಮುಖ್ಯವಾದ ಖಡ್ಗ ಇಲ್ಲಿನ ಗುಳಿಯೊಳಗೆ ರಕ್ಷಣೆ ಪಡೆದು ಯಶಸ್ಸು ಕಂಡುದರ ನೆನಪಾಗಿ ಸ್ಥಾಪಿಸಲ್ಪಟ್ಟ ಊರು 'ಬಾಗುಳಿ' ಎಂದು ಬಂದಿದೆ" (ರಾಜಶೇಖರ ಬಣಕಾರ, ೧೯೯೯, ಪುಟ-೧) ಎಂಬ ವಿವರಣೆಯನ್ನು ನೀಡುತ್ತಾರೆ.

ಮತ್ತೊಂದು ಐತಿಹ್ಯದಂತೆ 'ಬಿಟ್ಟಿಗ'ನೆಂಬ ಮಹಾರಾಜನು ರಾಜ ಅಚ್ಯುತನಾಗಿ ಕಾನಹಳ್ಳಿ ಸಮೀಪದ ಗುಡ್ಡದ ಗುಹೆಯೊಂದರಲ್ಲಿ ಅವಿತನಂತೆ. ಈ ಗುಡ್ಡಕ್ಕೆ ಈಗಲೂ 'ಬಿಟ್ಟಿಗರ ಮರಡಿ' ಎನ್ನುತ್ತಾರೆ. ಬಿಟ್ಟಿಗನು ರಾಜ್ಯ ಚಿಹ್ನೆಯಾದ ಖಡ್ಗವನ್ನು ಬೇರೆಯವರು ಪಡೆಯದಂತೆ ರಕ್ಷಿಸಲು ಈ ಗ್ರಾಮದಲ್ಲಿರುವ ಒಂದು ನೀರಿನ ಗುಂಡಿಯಲ್ಲಿ ಹೂಳಿದನು. ಇದನ್ನು ಜನರು ಕತ್ತಿಗುಂಡಿ ಎಂದು ಕರೆಯುತ್ತಾರೆ. 'ಕತ್ತಿ' ಎನ್ನುವ ಖಡ್ಗ ಇಲ್ಲಿ 'ಬಾಳ್' ಸಮನಾರ್ಥ ಪಡೆದಿರಬೇಕು. ಗುಂಡಿ ಎನ್ನುವ ಕುಣಿಯು ಇಲ್ಲಿ ಅದೇ ಅರ್ಥ ಕೊಡಲು ಕುಳಿ ಪದ ಜೋಡಿಸಿದ ಕೋಪವೇ ಬಾಳ್‌ಗುಳಿ, ಬಾಳ್ಗಳಿ, ಬಾಗುಳಿ, ಬಾಗಳಿ ಎಂಬ ಪದ ಕಾಲಾಂತರದಲ್ಲಿ ಬಂದಿರಬೇಕೆಂದು, ಮಹಬಲೇಶ್ವರ ಕಾಟ್ರಳ್ಳಿಯವರು ವಿವರಣೆ ನೀಡುತ್ತಾರೆ.

**ಬಾನಪ್ಪನ ಬಾವಿ:** ಬಳ್ಳಾರಿ ನಗರದಲ್ಲಿಯೇ ಇರುವ ಬಾವಿಗೆ ಐತಿಹ್ಯವೊಂದು ಹೀಗಿದೆ. ಸುಮಾರು ವರ್ಷಗಳ ಹಿಂದೆ ಬಿಜಾಪುರದ ಹುಲ್ಕಲದಿನ್ನಿ ಗೌಡರ ಮನೆತನವರಾದ, ಆರು ಮಂದಿ ಅಣ್ಣ-ತಮ್ಮಂದಿರುಗಳಿಗೆ ಒಬ್ಬಳೇ ತಂಗಿ ಸಂಕಮ್ಮ ಇದ್ದಳು. ಅವಳು ಅತಿ ಸುಂದರಿಯಾಗಿದ್ದಳು. ಅವಳ ಸೌಂದರ್ಯಕ್ಕೆ ಮನಸೋತ ದಿಲ್ಲಿಯ ಸುಲ್ತಾನನ ಮಗ ಮುತ್ತ್ಯಾಲಿಕನು ಅವಳ ಮೇಲೆ ಅತ್ಯಾಚಾರ ಮಾಡಲು ಯತ್ನಿಸಿದನು. ಅಂತಹ ಸನ್ನಿವೇಶವನ್ನು ಕಂಡ ಅವಳ ಅಣ್ಣಂದಿರು ಮುತ್ತ್ಯಾಲಿಕನನ್ನು ಕೊಲೆ ಮಾಡಿದರು. ನಂತರ ಅವರು ಪ್ರಾಣಭಯದಿಂದ ಬಳ್ಳಾರಿ ಕಡೆಗೆ ಪ್ರಯಾಣ ಮಾಡಿದರು. ಬಳ್ಳಾರಿಗೆ ಬಂದು ನೆಲೆಯೂರಿದರು. ಅವರ ಆರು ಮಂದಿಯಲ್ಲಿ ಮೂರು

ಜನರಿಗೆ ಮಕ್ಕಳಾದರೆ ಇನ್ನೂ ಮೂರು ಜನರಿಗೆ ಮಕ್ಕಳಾಗಿರಲಿಲ್ಲ. ಈ ಕಾರಣಕ್ಕಾಗಿ ಸಂತಾನವಿಲ್ಲದ ಮೂವರು ತಮ್ಮ ನೆನಪಿಗೋಸ್ಕರ ಕೆರೆ ಬಾವಿಗಳನ್ನು ಕಟ್ಟಿಸಿದರು. ಬಾನಪ್ಪ ಎನ್ನುವವನು ಕಟ್ಟಿಸಿದ ಬಾವಿಯೇ ಇಂದಿಗೂ ಬಳ್ಳಾರಿ ನಗರದಲ್ಲಿರುವ ಬಾನಪ್ಪನ ಬಾವಿಯಾಗಿದೆ.

**ಅಂಜನಾದ್ರಿ:** ಐತಿಹಾಸಿಕ ಪ್ರಸಿದ್ಧಿಯಾದ, ಹಂಪೆಯ ಹೊಳೆಯ ಎಡದಂಡೆಗೆ ಹೊಂದಿಕೊಂಡು ಒಂದು ಪರ್ವತ ಅಂದರೆ ಪುರಂದರ ಮಂಟಪದ ಎದುರಿಗೆ ಕಾಣುವ ಮತ್ತು ಹನುಮನಹಳ್ಳಿ ಸಮೀಪದಲ್ಲಿರುವ ಪರ್ವತವೇ ಅಂಜನಾದ್ರಿ, ಹನುಮನ ತಾಯಿ ಅಂಜನಾದೇವಿಯು ಈ ಪರ್ವತದಲ್ಲಿ ವಾಸವಾಗಿದ್ದಳೆಂದು ಜನರ ನಂಬಿಕೆ. ಅಂಜನಾದೇವಿ ಈ ಪರ್ವತದಲ್ಲಿ ವಾಸವಾಗಿದ್ದುದರಿಂದ ಈ ಪರ್ವತಕ್ಕೆ ಅಂಜನಾದ್ರಿ ಪರ್ವತ ಎಂದು ಹೆಸರು ಬಂದಿದೆ ಎಂದು ಹೇಳುತ್ತಾರೆ. ಈ ಪರ್ವತದಲ್ಲಿ ಹನುಮಂತನನ್ನು ಹಡೆದ ಮೇಲೆ ಆಕೆಗೆ ನೀರು ಬೇಕಾದಾಗ ಹನುಮಂತನೆ ಇಲ್ಲಿ ನೀರು ಒದಗಿಸಿಕೊಟ್ಟಿದ್ದನ್ನು ಜನಪದರು ತಮ್ಮ ಹಾಡುಗಳಲ್ಲಿ ಚಿತ್ರಿಸಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ.

"ಅಡವ್ಯಾನಂಜನದೇವಿ ಹನುಮಾನ ಹಡೆದಾಳೆ
ತೊಡೆಯ ತೊಳೆಯೋಕ ನೀರಿಲ್ಲ ಹನುಮಣ್ಣ
ಸುತ್ತಲ ಹೊಳೆಯ ತಿರುವ್ಯಾನೆ" (ಪುರುಷೋತ್ತಮ ಬಿಳಿಮಲೆ, ಚೆಲುವರಾಜು, (ಸಂ), ೧೯೯೬-೯೭, ಪುಟ-೭೪)

ಹನುಮಂತನು ತನ್ನ ದೈವಶಕ್ತಿಯಿಂದ ತನ್ನ ತಾಯಿಗೆ ಸಹಾಯ ಮಾಡುವುದಕ್ಕಾಗಿ ಹೊಳೆಯನ್ನೇ ತನ್ನತ್ತ ತಿರಿವಿಸಿಕೊಂಡಿರುವುದನ್ನು ನಾವು ಈ ಹಾಡಿನಲ್ಲಿ ನೋಡಬಹುದಾಗಿದೆ.

**ಋಷ್ಯಮೂಕ ಪರ್ವತ:** "ತುಂಗಭದ್ರ ನದಿಯ ದಂಡೆಗೆ ಮತ್ತು ವಿರೂಪಾಕ್ಷ ದೇವಾಲಯದ ಎಡಭಾಗಕ್ಕೆ ಇರುವ ಪರ್ವತವೇ ಋಷ್ಯಮೂಲ ಪರ್ವತ. ಈ ಋಷ್ಯಮೂಕ ಪರ್ವತದಲ್ಲಿ ಅಂದರೆ ಪವಿತ್ರ ಸ್ಥಳದಲ್ಲಿಯೇ ಸಪ್ತ ಋಷಿಗಳಾದ ಕಶ್ಯಪ, ಅತ್ರಿ, ಭಾರದ್ವಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಶಿಷ್ಟರು ತಪಸ್ಸು ಮಾಡಿ ಜ್ಞಾನ ಪಡೆದರಂತೆ." (ಕಲಬುರ್ಗಿ ಎಂ.ಎಂ., ೧೯೯೪, ಪುಟ-೧೩೬) ಅಲ್ಲದೇ ಈ ಪರ್ವತದ ಮುಖ, ಮುಡಿ, ಜಡೆ ಎಲ್ಲವೂ ತಪಸ್ಸು ಮಾಡುತ್ತಾ ಕುಳಿತಿರುವ ಒಬ್ಬ ಋಷಿಯ ಮುಖದಂತೆ ಇರುವುದು ಕಂಡುಬರುತ್ತದೆ. ಆದ್ದರಿಂದ ಆ ಪರ್ವತವನ್ನು ಋಷ್ಯಮೂಕ ಪರ್ವತ ಎಂದು ಕರೆಯುತ್ತಾರೆ. ಇಂದು ಸಹ ಈ ಪರ್ವತದಲ್ಲಿರುವ ಗುಹೆಗಳಲ್ಲಿ ಅನೇಕ ಸಾಧು-ಸಂತರು ವಾಸಮಾಡುತ್ತಾರೆ.

**ಕನ್ನೇರಮ್ಮನ ಬಾವಿ:** ಆನೆಗುಂದಿಯ ದುರ್ಗಾದೇವಿಯ ಬೆಟ್ಟದಲ್ಲಿರುವ ಸುಂದರವಾದ ಬಾವಿಯೊಂದನ್ನು ಕನ್ನೇರಮ್ಮನ ಬಾವಿಯೆಂದು ಕರೆಯುತ್ತಾರೆ. ಇದು ಹಂಪಿಯಿಂದ ಉತ್ತರ ದಿಕ್ಕಿಗೆ ಇದೆ. ಆನೆಗುಂದಿಯ ದೊರೆಗಳು ಈ ಬಾವಿಯ ನೀರನ್ನು ದುರ್ಗಾದೇವಿಯ ಪೂಜೆಗೆ ಮಾತ್ರ ಬಳಸುತ್ತಿದ್ದರಂತೆ. ಹಾಗೆಯೇ ಸಾರ್ವಜನಿಕರು ಇದರ ನೀರನ್ನು ಬಳಸಬಾರದೆಂಬುದು

ಒಂದು ನಿಯಮವಿದೆ. ಅದು ಅಲ್ಲದೆ ದುರ್ಗಾದೇವಿಯನ್ನು ಯುಗಾದಿಯ ದಿನದಂದು ಬಾವಿಯಲ್ಲಿ ಸ್ನಾನಮಾಡಿಸಿ, ಪೂಜೆಯು ಸಹ ಇಲ್ಲಿಯೇ ನಡೆಯುತ್ತದೆ ಎಂದು ಹಿರಿಯರು ಹೇಳುತ್ತಾರೆ.

ಕನ್ನೇರಮ್ಮನ ಬಾವಿಯ ಕುರಿತು ಐತಿಹ್ಯವೊಂದು ಹೀಗಿದೆ. ಹಿಂದೆ ಪ್ರತಿದಿನವೂ ಸೂರ್ಯ ಮೂಡುವ ಮೊದಲು ಮತ್ತು ಸೂರ್ಯ ಮುಳುಗಿದ ನಂತರ ಬಾವಿಯಲ್ಲಿ ಅನೇಕ ದೇವಕನ್ನಿಕೆಯರು ಮತ್ತು ಗಂಧರ್ವ ಸ್ತ್ರೀಯರು ಬಂದು ಸ್ನಾನಮಾಡಿಕೊಂಡು ಹೋಗುತ್ತಿದ್ದರಂತೆ. ಆದ್ದರಿಂದ ಈ ಬಾವಿಗೆ ಕನ್ನಿಕೆಯರ ಬಾವಿ ಅಥವಾ ಕನ್ನೇರಮ್ಮನ ಬಾವಿ ಎಂದು ಕರೆಯುವುದು ರೂಢಿಗೆ ಬಂದಿತು ಎಂದು ಹೇಳುತ್ತಾರೆ.

ಒಮ್ಮೆ ಒಬ್ಬ ಯುವಕ ಅದನ್ನು ಪರೀಕ್ಷಿಸಲೆಂದು ಅಲ್ಲಿನ ಗುಹೆಯೊಂದರಲ್ಲಿ ಅಡಗಿ ಕುಳಿತನು. ಸುಮಾರು ಮಧ್ಯರಾತ್ರಿ ವೇಳೆಗೆ ಆಕಾಶದಿಂದ ಹಲವಾರು ಕನ್ನಿಕೆಯರು ಮತ್ತು ಗಂಧರ್ವ ಸ್ತ್ರೀಯರು ಬಂದದ್ದನ್ನು ನೋಡಿದನು. ಅವರು ಸುತ್ತಲೂ ನೋಡಿ ತಮ್ಮ ಉಡುಗೆ ತೊಡುಗೆಗಳನ್ನು ತೆಗೆದು ಬದಿಗಿರಿಸಿ, ಜಲಕ್ರೀಡೆಯಾಡುತ್ತಿರುವಾಗ ಯುವಕನು ಗವಿಯಿಂದ ಉಡುಗೆಗಳಿದ್ದ ಸ್ಥಳಕ್ಕೆ ಬಂದು ಅವುಗಳನ್ನು ಕೈಗೆತ್ತಿಕೊಂಡು, ದೇವಕನ್ನಿಕೆಯರು ಇದ್ದ ಬಳಿಗೆ ಹೋಗುವ ಪ್ರಯತ್ನ ಮಾಡಿದನು. ಇದನ್ನು ಗಮನಿಸಿದ ದೇವಕನ್ನಿಕೆಯರು ಅವನ ಕೈಗೆ ಸಿಗದಂತೆ ಪಾರಾಗಿ ಅಲ್ಲೇ ರಕ್ತ ಕಕ್ಕಿ ಸಾಯುವಂತೆ ಶಾಪವಿತ್ತರು. ಹಾಗೆಯೇ ಆ ಯುವಕ ಅಲ್ಲೇ ರಕ್ತ ಕಕ್ಕಿ ಸತ್ತನು. ದೇವಕನ್ನಿಕೆಯರ ಬಟ್ಟೆಗಳು ಕಲ್ಲಾದವು. ಇಂದಿಗೂ ಆ ರಕ್ತದ ಕಲೆಗಳು ದುರ್ಗಾದೇವಿಯ ಬೆಟ್ಟದ ಗವಿಯೊಂದರಲ್ಲಿ ಇದೆಯೆಂದು ಜನ ನಂಬುತ್ತಾರೆ. ಅಲ್ಲಿಗೆ ಹೋಗಬಾರದೆಂಬ ನಿಷೇದವಿರುವುದರಿಂದ ಜನರು ದೂರದಲ್ಲಿಯೇ ಗವಿಗೆ ಕೈ ಮುಗಿಯುತ್ತಾರೆ. (ವಕ್ತೃ: ವೆಂಕಟೇಶ, ೫೦, ಕಮಲಾಪುರ)

**ಕೂಡ್ಲಿಗಿ:** ಇದು ಬಳ್ಳಾರಿ ಜಿಲ್ಲೆಯ ಒಂದು ತಾಲೂಕು ಕೇಂದ್ರ. ಈ ಸ್ಥಳವು ರಾಮಾಯಣ ಕಾಲದಲ್ಲಿ ವಾನರ ಸೇನೆಯು ಹಂಪಿಯ ಬೆಟ್ಟಗಳಲ್ಲಿ ವಾಸಿಸುತ್ತಿದ್ದರು. ಶ್ರೀರಾಮನ ಸಹಾಯಕ್ಕಾಗಿ ದಕ್ಷಿಣ ಲಂಕೆಯ ಕಡೆಗೆ ಅನ್ವೇಷಣೆ ನಂತರ ದಂಡೆಯಾತ್ರೆಗೆ ಹೋಗುವಾಗ ನಾನಾ ಕಡೆಯಿಂದಲೂ ವಾನರ ಸೇನೆಯು ಇಲ್ಲಿ ಕಾಡುತ್ತಿತಂತೆ ಆದ್ದರಿಂದ ಈ ಸ್ಥಳಕ್ಕೆ ಕೂಡಲಿಗಿ ಎಂಬ ಹೆಸರು ಬಂದಿತೆಂದು ಹೇಳಲಾಗುತ್ತದೆ.

ಮತ್ತೊಂದು ಹೇಳಿಕೆಯ ಪ್ರಕಾರ ಪುರಾತನ ಕಾಲದಲ್ಲಿ "ಇದೊಂದು ಚಿಕ್ಕ ಮ್ಯಾಸರ ಹಟ್ಟಿಯಾಗಿದ್ದು, ವಿಜಯನಗರ ರಾಜಧಾನಿ ಹಂಪೆಗೆ ಜರಿಮಲೆ, ಬೀರಲಗುಡ್ಡ, ಗುಡೇಕೋಟೆ, ಹರಪನಹಳ್ಳಿ ಪಾಳೆಗಾರರು ವಿಜಯನಗರ ಅರಸರನ್ನು ಭೇಟಿಯಾಗಲು ಹೋಗುವ ಮುನ್ನ ಇಲ್ಲಿ ಸೇರಿ ಗುಪ್ತ ಸಮಾಲೋಚನೆ ನಡೆಸುವ ಸಲುವಾಗಿ, ತಾವು ಕೂಡುವ ಸ್ಥಳವು ಅನ್ಯರಿಗೆ ತಿಳಿಯದಿರಲೆಂದು, ಸನ್ನೆಯಾಗಿ ಕೂಡಲಿ ಇಲ್ಲಿಗೆ ಎಂದು ಕರೆಯುತ್ತಿದ್ದರಂತೆ. ಮುಂದೆ ಕಾಲಕ್ರಮೇಣವಾಗಿ ಕೂಡಲಿಗಿ ಎಂದು ಕರೆಯಲ್ಪಟ್ಟಿತ್ತಂತೆ." (ವಕ್ತೃ: ಹನುಮಂತಪ್ಪ ಡೊಂಕಯ್ಯನವರ, ೭೧, ಕೂಡ್ಲಿಗಿ)

**ಕೋಗಳಿ:** ಇತಿಹಾಸ ಪ್ರಸಿದ್ಧ ಕೋಗಳಿ ಗ್ರಾಮವು ಹಗರಿಬೊಮ್ಮನಹಳ್ಳಿ ತಾಲೂಕಿನಲ್ಲಿದೆ. ಈ ಸ್ಥಳಕ್ಕೆ ಇರುವ ಐತಿಹ್ಯ ಹೀಗಿದೆ. ಬಹು ಹಿಂದಿನ ಕಾಲದಲ್ಲಿ ಒಂದು 'ಗೂಳಿ' ಇತ್ತಂತೆ, ಅದು ಆ ಊರಿನಲ್ಲಿ ಸದಾ ತಿರುಗುತ್ತಿತ್ತು ಮತ್ತು ಅದು ಸಾಧು ಸ್ವಭಾವದ ಪ್ರಾಣಿಯಾಗಿತ್ತು. ಅದಕ್ಕೆ ಊರಿನಲ್ಲಿ ಎಲ್ಲರು ತಿಂಡಿ, ತಿನಿಸಿಗಳನ್ನು ಕೊಡಲು ಕ್ವೋಗೂಳಿ, ಕ್ವೊಗೂಳಿ ಎಂದು ಸಂಭೋದಿಸುತ್ತಿದ್ದರು. ಅದು ಮುಂದೆ ಕೋಗೂಳಿ>ಕೋಗಳಿ ಎಂಬ ಸ್ಥಳವಾಚಿಯಾಗಿ ಬಳಕೆಯಾದುದನ್ನು ಐತಿಹ್ಯವಾಗಿ ಹೇಳಲಾಗುತ್ತದೆ.

ಮತ್ತೊಂದು ಐತಿಹ್ಯದ ಪ್ರಕಾರ ಈ ಪ್ರದೇಶದಲ್ಲಿ ಕೋಗಿಲೆಗಳು ಹೆಚ್ಚು ಇದ್ದುವಂತೆ, ಆದ್ದರಿಂದ ಈ ಸ್ಥಳಕ್ಕೆ 'ಕೋಗಳಿ' ಎಂದು ಬಂದಿದೆ ಎಂದು, ಅದೇ ರೀತಿ 'ಕೋಗಿಲೆನಾಡು' ಎಂಬುದು ಶಾಸನದಿಂದ ತಿಳಿದುಬರುತ್ತದೆ.

**ಕೊಟ್ಟೂರು:** ಕೂಡ್ಲಿಗಿ ತಾಲೂಕಿನ ಪ್ರಮುಖ ನಗರ ಕೊಟ್ಟೂರು. ಇದರ ಮೂಲ ಹೆಸರು ಶಿಖಾಪುರ ಎಂದು ಇತ್ತು. ಆದರೆ ಅನೇಕ ಶತಮಾನಗಳ ಹಿಂದೆ ಪಂಚಗಣಾಧೀಶ್ವರರಲ್ಲಿ ಒಬ್ಬರಾದ, ಗುರುಬಸವನು ಬಂದು ಈ ಶಿಖಾಪುರದಲ್ಲಿ ನೆಲೆಸಿದನು. ಆತನು ಮಹಿಮೆಯಿಂದ ಖ್ಯಾತಿಯನ್ನು ಪಡೆದನು. ಆ ಕೊಟ್ರೇಶನಿಂದಾಗಿ ಈ ಶಿಖಾಪುರ ಎಂಬುದು ಕೊಟ್ಟೂರು ಎಂಬುದಾಗಿ ಬೆಳಕಿಗೆ ಬಂದಿತು ಎಂದು ಅಲ್ಲಿಯ ಜನರಲ್ಲಿರುವ ವಾಡಿಕೆಯಾಗಿದೆ.

ಅಕ್ಬರ್ ಚಕ್ರವರ್ತಿಗೆ ಬಹು ಕಾಲದವರೆಗೆ ಮಕ್ಕಳ ಸಂತಾನವಿರಲಿಲ್ಲವಂತೆ. ಒಮ್ಮೆ ಅಕ್ಬರ್ ಚಕ್ರವರ್ತಿ ಗುರು ಬಸವೇಶ್ವರನಲ್ಲಿಗೆ ಬಂದು ದರ್ಶನ ಪಡೆದು ಹೋದ ಮೇಲೆ ಮಕ್ಕಳ ಸಂತಾನವಾಯಿತಂತೆ, ಈ ಕಾರಣಕ್ಕೆ ಚಕ್ರವರ್ತಿ ಸ್ವಾಮಿಗೆ ತನ್ನ ಇಷ್ಟಾರ್ಥ ನೆರವೇರಿದ್ದಕ್ಕಾಗಿ ತನ್ನ ಸೈನ್ಯ ಬಲಸಮೇತನಾಗಿ ಬಂದು ಬಂಗಾರ ಮಂಚ ಮತ್ತು ಖಡ್ಗವನ್ನು ಅರ್ಪಿಸಿ ಹೋದನಂತೆ. ವರವ ನೀಡಿದ ಊರು ಎಂದು ಕೊಂಡಿದನಂತೆ. ಹೀಗಾಗಿ ವರ ಕೊಟ್ಟ ಊರು 'ಕೊಟ್ಟೂರು' ಎಂಬುದಾಗಿ ಬಂದಿದೆ ಎಂದು ಹೇಳುತ್ತಾರೆ.

**ಕೋಟಲಿಂಗ:** ಪ್ರಸಿದ್ಧ ಕ್ಷೇತ್ರ ಹಂಪೆಯ ಕೋದಂಡರಾಮ ದೇವಾಲಯದ ಎದುರಿನಲ್ಲಿ ಕಂಡುಬರುವ ಚಕ್ರತೀರ್ಥದ ತೀರದಲ್ಲಿ ವಿಶಾಲವಾದ ಬಂಡೆಯೊಂದರ ಮೇಲೆ ಕೆತ್ತಲ್ಪಟ್ಟ ಸಣ್ಣ ಸಣ್ಣ ನೂರಾರು ಲಿಂಗಗಳನ್ನು ಕೋಟಿಲಿಂಗವೆಂದು ಕರೆಯುತ್ತಾರೆ. ಇದರ ಬಗೆಗಿನ ಐತಿಹ್ಯ ಈ ರೀತಿಯಿದೆ.

ಈ ಬಗೆಯ ಲಿಂಗಗಳನ್ನು ಬಹುದಿನಗಳ ಹಿಂದೆ ಕೋತಿಗಳು ಪೂಜಿಸುತ್ತಿದ್ದವಂತೆ. ನದಿಯಿಂದ ಬಾಯಿಯಲ್ಲಿ ನೀರು ತಂದು ಲಿಂಗದ ಮೇಲೆ ಹಾಕಿ ಸುತ್ತಲಿನ ವಿವಿಧ ಹೂ, ಪತ್ರೆಗಳನ್ನು ತಂದು ಚೆಲ್ಲಿ ಪೂಜಿಸುತ್ತಿದ್ದವಂತೆ. ಆದ್ದರಿಂದ ಇದಕ್ಕೆ ಕೋತಿಲಿಂಗ ಎಂಬ ಹೆಸರು ಬಂತು ಎಂಬುದಾಗಿ ಹೇಳುತ್ತಾರೆ. ಇದು ಕೋಟಲಿಂಗ ಎನ್ನುವುದು ಇತ್ತೀಚೆಗೆ ರೂಢಿಯಾಗಿದೆ.

ಅಲೆಮಾರಿಗಳಾಗಿ ಜೀವಿಸುವ ದೊಕ್ಕಲರು, ಈ ಲಿಂಗಗಳ ಬಗೆಗೆ ಹೇಳುವ ಕಥೆಯೊಂದು ಹೀಗಿದೆ. ಹಿಂದೆ ದಕ್ಷಪತಿ ಎಂಬ ರಾಜನಿದ್ದ. ಅವನಿಗೆ ಅರವತ್ತು ಮಂದಿ ಹೆಣ್ಣು ಮಕ್ಕಳಿದ್ದರು. ಆದರೆ ಒಂದೂ ಗಂಡು ಮಗು ಇಲ್ಲವೆಂದು ದಂಪತಿಗೆ ತುಂಬ ದುಃಖವಾಯಿತು. ಹೀಗಿರುವಾಗ ಒಮ್ಮೆ ಇವನ ರಾಜಧಾನಿಯು ಕ್ಷಾಮಕ್ಕೆ ತುತ್ತಾಯಿತು. ಇಬ್ಬರು ಅಣ್ಣತಮ್ಮಂದಿರು ತಮ್ಮ ತಂದೆ ತಾಯಿಗಳನ್ನು ಕಳೆದುಕೊಂಡರು. ಅವರಲ್ಲಿ ಕಿರಿಯವನು ಸಹ ತೀರಿಕೊಂಡ. ಆಗ ಹಿರಿಯ ಅಣ್ಣನು ಗೊತ್ತು ಗುರಿಯಿಲ್ಲದೆ ತಮ್ಮನ ಹೆಣವನ್ನು ಹೆಗಲ ಮೇಲೇರಿಸಿಕೊಂಡು ಅಲೆದಾಡುತ್ತಿದ್ದನು. ಒಮ್ಮೆ ಶಿವಪಾರ್ವತಿಯರು ಆಕಾಶ ಮಾರ್ಗವಾಗಿ ಹೋಗುತ್ತಿರುವಾಗ ಪಾರ್ವತಿಯು ಈ ದೃಶ್ಯವನ್ನು ನೋಡುತ್ತಾಳೆ. ಅವಳಿಗೆ ಅಣ್ಣನ ಮೇಲೆ ಕರುಣೆ ಮೂಡುತ್ತದೆ. ಸತ್ತ ತಮ್ಮನನ್ನು ಬದುಕಿಸಿಕೊಡುವಂತೆ ಶಿವನಲ್ಲಿ ಪ್ರಾರ್ಥಿಸುತ್ತಾಳೆ. ಶಿವ ಆಕೆಯ ಮಾತಿಗೆ ಒಪ್ಪಿಗೆ ಸಮ್ಮತಿಸುತ್ತಾನೆ. ಅದರಂತೆ ತಮ್ಮನಿಗೆ ಜೀವದಾನ ಮಾಡುತ್ತಾನೆ. ಮತ್ತು ಸತ್ತು ಬದುಕಿದ ಅವನನ್ನು ದಕ್ಷ ಪತಿಗೆ ನೀಡುತ್ತಾನೆ. ದಕ್ಷಪತಿಯು ತಮ್ಮನಿಗೆ ದಕ್ಕಮುನಿಯೆಂದು ಹೆಸರಿಡುತ್ತಾನೆ. ಆನಂತರ ಮತ್ತೊಂದು ಕಡೆ ಜಾಂಬುಮುನಿ ದಕ್ಕಮುನಿಯನ್ನು ದೇವತೆಗಳ ಕಾವಲಿಗಾಗಿ ಕಾಣಿಕೆಯಾಗಿ ಕೊಡುವಂತೆ ಕೇಳುತ್ತಾನೆ. ಆಗ ಶಿವನು ಆ ತಮ್ಮನು ದಕ್ಷಪತಿಯೊಡನೆ ದೇವತೆಗಳ ಸೇವೆ ಮಾಡಲಿ ಎಂದು ಹೇಳುತ್ತಾನೆ. ಹೀಗೆ ದಕ್ಕಮುನಿ ದಕ್ಷಪತಿಯೊಡಗೂಡಿ ಮಾಡಿದ ದೇವತೆಗಳ ಸೇವೆಯ ಕುರುಹಾಗಿ ಕೋಟಿಲಿಂಗ ಎಂಬ ಕಲ್ಪನೆ ಮೂಡಿದೆ ಎಂದು 'ಹಂಪಿ ಜಾನಪದ' ಕೃತಿಯಿಂದ ತಿಳಿದುಬರುತ್ತದೆ.

**ಚನ್ನಪಟ್ಟಣ:** ಮಧ್ಯಕಾಲೀನ ಇತಿಹಾಸಕ್ಕೆ ಸೇರುವ ಚನ್ನಪಟ್ಟಣವು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿದೆ. ಈಗ ಇದು ಹಾಳಾಗಿದ್ದು, ಅದರ ಅವಶೇಷ ಮಾತ್ರ ಉಳಿದಿವೆ. ಮೂರು ಬಾರಿ ಹಾಳಾಗಿದ್ದರ ಬಗ್ಗೆ ಜನಪದರು ಹೇಳುತ್ತಾರೆ. "ವಿಜಯನಗರದ ನಿಯೋಜಿತ ಅಧಿಕಾರಿ ಇಲ್ಲಿ ಆಡಳಿತ ನಡೆಸಿದ ನಂತರ ಪಾಳೆಗಾರರಿಗೆ ಸೇರಿತು. ಹೈದರಾಲಿ ಅವನ ಮಗ ಟಿಪ್ಪುಸುಲ್ತಾನ ಗುತ್ತಿ, ಬಳ್ಳಾರಿ, ಹರಪನಹಳ್ಳಿ, ರಾಯದುರ್ಗವನ್ನು ವಶಪಡಿಸಿಕೊಂಡು ಮರಳಿ ಬರುವಾಗ, ಅವನ ದಂಡು ಚನ್ನಪಟ್ಟಣಕ್ಕೆ ನುಗ್ಗಿ ನಾಶಪಡಿಸಿತು ಎಂಬ ಐತಿಹ್ಯವಿದೆ. ಇದಕ್ಕೂ ಮೊದಲು ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾದ ಮಲ್ಲಿಕಾಫರ್‌ನಿಂದ ಬಿಜಾಪುರದ ಸುಲ್ತಾನರಿಂದ ಇದು ನಾಶವಾಯಿತೆಂದು ಹೇಳುತ್ತಾರೆ. ಇವರು ಚನ್ನಪಟ್ಟಣವನ್ನು ನಾಶಗೊಳಿಸಿದಲ್ಲದೆ ನೂರಾರು ಬಾಲಕರನ್ನು ಶಿರಚ್ಛೇದನಗೊಳಿಸಿದರೆಂದು ತಿಳಿದು ಬರುತ್ತದೆ. ಅಲ್ಲದೆ ತಪ್ಪಿಸಿಕೊಂಡು ಹೋದ ಬಾಲಕರನ್ನು ಕಡಿದಾಗ, ರಕ್ತ ಸೋರಿ ಹಳ್ಳವಾಗಿ ಹರಿಯುತ್ತಿದ್ದನ್ನು ಕಂಡು ರಕ್ತವು ಹೊರ ಹೋಗಬಾರದೆಂದು ಕಟ್ಟೆಯನ್ನು ಕಟ್ಟಲಾಯಿತಂತೆ. ಇಂದಿಗೂ ಕೂಡ ಅದನ್ನು ರಕ್ತ ಕಟ್ಟೆ ಎಂದು ಕರೆಯಲಾಗುತ್ತದೆ." (ನಾಗರಾಜು ಎಂ.ಜಿ., ಕೃಷ್ಣಮೂರ್ತಿ ಪಿ.ವಿ. (ಸಂ), ೧೯೯೩, ಪುಟ-೨೨) ಹುಡುಗರನ್ನು ಕಡಿದ ಜಾಗ ಮೊರಡಿ (ಮಟ್ಟಿ)ಯಾಗಿದ್ದರಿಂದ ಹುಡುಗರನ್ನು ಕಡಿದ ಮೊರಡಿ ಎಂಬ ಹೆಸರು ಪ್ರಚಲಿತದಲ್ಲಿದೆ.

**ಚಿರಬಿ:** "ಕೊಟ್ಟೂರಿನಿಂದ ಪೂರ್ವಕ್ಕೆ ಸುಮಾರು ಒಂಬತ್ತು ಕಿ.ಮೀ. ಅಂತರದಲ್ಲಿರುವ 'ಚಿರಿಬಿ' ಜರಿಮಲೆ ಸಂಸ್ಥಾನಕ್ಕೆ ಸೇರಿತ್ತೆಂದು ಹೇಳಲಾಗುತ್ತದೆ. ಈ ಸಂಸ್ಥಾನಕ್ಕೆ ಸೇರಿದ ನಿವಾಸಿಗಳು

ಸುಮಾರು ೬೦೦-೭೦೦ ವರ್ಷಗಳ ಹಿಂದೆ ಉತ್ತರದ ಕಡೆ ಹೊರಟರು. ಮಾರ್ಗದಲ್ಲಿ ಇದ್ದಕ್ಕಿದ್ದಂತೆಯೇ ಆಕಳು ಅವರಿಗೆ ಕಾಣಿಸಿಕೊಂಡು ಮಾಯವಾಯಿತಂತೆ. ಆಕಳಿನ ಹೆಜ್ಜೆಯನ್ನು ಅನುಸರಿಸಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಗಂಗಮ್ಮಹಳ್ಳಿ ಡೋಣಿ ಗುಡ್ಡದವರೆಗೂ ಬಂದರು. ಆ ಗುಡ್ಡದಿಂದ ಶಂಕು ಜಾಗಟೆಯ ಶಬ್ದ ಕೇಳಿಸಿತ್ತು. ಆ ನಾದವನ್ನು ಅನುಸರಿಸಿ ಈ ಭೂಪರು ಹೋಗಿ ನೋಡಲಾಗಿ ಅಲ್ಲೊಂದು ಪೆಳೆ (ಪೊದೆ) ಕಾಣಿಸಿತು. ಒಳಗಡೆ ಸ್ವಾಮಿಗಳು ಶಿವಪೂಜೆ ಮಾಡುತ್ತಿದ್ದರಂತೆ. ಭೂಪರು ಸ್ವಾಮಿಗಳ ಆಜ್ಞೆಗಾಗಿ ಕಾದು ನಿಂತರು. ನಂತರ ಸ್ವಾಮಿಗಳ ದರ್ಶನವಾಯಿತು. ಗುರುಗಳೊಂದಿಗೆ ಮಾತನಾಡುತ್ತಿರುವಾಗ ಪಕ್ಕದಲ್ಲೇ ನಿಂತ ಸುರಭಿ(ಆಕಳು)ಯ ಕೆಚ್ಚಲಿನಿಂದ ಹಾಲು ತನ್ನಷ್ಟಕ್ಕೆ ತಾನೇ ಸುರಿಯಲಾರಂಭಿಸಿತು. ಇದರಿಂದ ಆ ಸ್ಥಳಕ್ಕೆ 'ಸುರಭಿ', 'ಸಿರಬಿ'> ಚಿರಬಿ ಎಂದಾಯಿತು" (ವೀರಭದ್ರಯ್ಯ ಸಿ.ಎಂ., ೧೯೯೮, ಪುಟ-೨೭) ಎಂಬ ನಂಬಿಕೆಯಿದೆ.

**ಚೆಳ್ಳಗುರ್ಕಿ:** ಬಳ್ಳಾರಿಯಿಂದ ಜೋಳದರಾಶಿ ಮಾರ್ಗವಾಗಿ ನಡೆದರೆ ಮುಂದೆ ಸಿಗುವ ಪುಣ್ಯಸ್ಥಳವೇ ಚೆಳ್ಳಗುರ್ಕಿ. ಈ ಸ್ಥಳದ ಬಗೆಗಿರುವ ಐತಿಹ್ಯವೆಂದರೆ, "ನಿಜಾಮರ ದರಬಾರ ತಾಳಲಾರದೆ, ಬಳ್ಳಾರಿಯ ಕಡೆಗೆ ಜನರು ಬಂದರು. ಮಚಲಗುರ್ಕಿ ಎಂದು ಹೆಸರು ಇಟ್ಟುಕೊಂಡು ವಾಸಮಾಡತೊಡಗಿದರು. ಅಲ್ಲಿಯೂ ಅವರಿಗೆ ನೆಚ್ಚಿಗೆ ಕಾಣಲಿಲ್ಲ. ನಂತರ ಸ್ವಲ್ಪ ದೂರದಲ್ಲಿ ಮನೆಗಳನ್ನು ಕಟ್ಟಿಕೊಂಡರು. ಅದನ್ನು ಪಸಲಗುರ್ಕಿ ಎಂದು ಕರೆದರು. ಇಲ್ಲಿಯೂ ಬಹುಕಾಲ ಇರಲಿಲ್ಲವಂತೆ, ಕೆಲವು ಕಾಲದ ನಂತರ ಉರುವಕೊಂಡಕ್ಕೆ ಹೋಗಬೇಕೆಂದು ಗಣ್ಯರು ಎಲ್ಲ ಕೂಡಿ ಹೊರಟರಂತೆ. ಮಾರ್ಗ ಮಧ್ಯದಲ್ಲಿ ಮೊಲವು ನಾಯಿಯನ್ನು ಹಿಂಬಾಲಿಸಿದ್ದು ಕಂಡು, ಇಲ್ಲಿ ನಾವು ಉದ್ದಾರ ಆಗಬಹುದಾದ ಸಂಕೇತವೆಂದು ಆ ಮಟ್ಟಿಯ ಮೇಲೆಯೇ ಮನೆಗಳನ್ನು ಕಟ್ಟಿದರಂತೆ. ಮಟ್ಟಿಯ (ಗುಡ್ಡ)ಲ್ಲಿ ಕಲ್ಲುಗಳು ವಿಪರೀತವಾಗಿದ್ದು, ಅದರ ಕೆಳಗಡೆ ಚೇಳುಗಳು ಬಹಳ ಇದ್ದವಂತೆ. ಆ ಕಾರಣ ಚೇಳು ಇವಲಿನ ಗುರಿಕೆಯನ್ನು ಅಂದರೆ ಬಿಡಾರವನ್ನು ಕಟ್ಟಿದ್ದರಿಂದ, ಚೆಳ್ಳಗುರಿಕೆ ಎಂದಾಯಿತು ಎನ್ನುವರು. ಇಂದು ಸಹಾ ಚೇಳುಗಳು ಹೆಚ್ಚು ಇರುವುದನ್ನು ಕಾಣಬಹುದಾಗಿದೆ.

**ಜರಿಮಲೆ:** ಐತಿಹಾಸಿಕ ಸ್ಥಳವಾದ ಜರಿಮಲೆ ಕೂಡ್ಲಿಗಿ ತಾಲೂಕಿನಲ್ಲಿದೆ. ಇದು ಪಾಳೆಗಾರರ ರಾಜಧಾನಿಯಾಗಿದ್ದು, ಜರಿಮಲೆ ಪಾಳೆಗಾರರು ಎಂಬ ಖ್ಯಾತಿಯನ್ನು ಉಳಿಸಿಕೊಂಡ ಪ್ರದೇಶವಿದೆ. ಕೂಡ್ಲಿಗಿಯಿಂದ ೧೩ ಕಿ.ಮೀ. ದೂರದಲ್ಲಿದೆ. ಪಾಳೆಗಾರರ ಆಳ್ವಿಕೆಯಲ್ಲಿ ಮೂಲತಃ ಈ ಊರಿಗೆ ಜರಿಮಲೆ ಎಂಬ ಹೆಸರು ಬಂದಿರುವುದರ ಬಗೆಗೆ ಐತಿಹ್ಯವಿದೆ.

ಹಿಂದೆ ಒಮ್ಮೆ ಕಂಚಿಯವರು ಎಂದು ಹೇಳುವ ನಾಯಕ ಜನಾಂಗದ ಏಳುಮಂದಿ ಜನರು, ಬೇಟೆಗಾಗಿ ಹಂದಿಯನ್ನು ಹಿಂಬಾಲಿಸಿದರು. ಹಂದಿಯು ಬಳ್ಳಾರಿ ಜಿಲ್ಲೆಯ ಸಂಡೂರು ಪ್ರದೇಶದ ಕಡೆ ಓಡುತ್ತಾ ಬಂದಿತು. ಅದನ್ನು ಹಿಂಬಾಲಿಸಿಯೇ ಬಂದರಂತೆ. ಆ ಹಂದಿಯು ನೀರ್ಕಲ್ ಕೆರೆಗಳನ್ನು (ಚಿಕ್ಕಕೆನಹಳ್ಳಿ) ಎನ್ನುವ ಗ್ರಾಮದವರೆಗೆ ಆ ಬಿಳಿಯ ಹಂದಿಯು ಓಡಿ ಬಂದು

ಅಲ್ಲೊಂದು ಗುಡ್ಡದಲ್ಲಿರುವ ಗುಂಡಿನ ಬದಿಯಲ್ಲಿ ಮಲಗಿತ್ತು. ಏಳುಮಂದಿ ನಾಯಕರ ಪೈಕಿ ಭೂಮರಾಜ ಎಂಬುವನು ಆ ಹಂದಿಗೆ ಭರ್ಚಿ ಹಾಕಿದ, ಆ ಹಂದಿಯು ಸಿಂಹದಂತೆ ಘರ್ಜಿಸಿತು. ಪಕ್ಕದಲ್ಲಿದ್ದ ಗುಂಡು ಆ ಭಯಂಕರ ಘರ್ಜನೆಗೆ ಸಿಡಿದು ಹೋಯಿತು. ಇಂದಿಗೂ ಆ ಗುಂಡನ್ನು 'ಹಂದಿವಡೆದ ಕಲ್ಲು' ಎಂದು ಕರೆಯುತ್ತಾರೆ. ಹಂದಿಯು ಅಲ್ಲಿಂದ ಪಶ್ಚಿಮ ದಿಕ್ಕಿನ ಕಡೆ ಓಡಹತ್ತಿತು. ಅದನ್ನು ಬಿಡದೇ ಹಿಂಬಾಲಿಸಿ ಹೋದರು. ಉಜ್ಜನಿ ಮಠ ದರ್ಶನವಾಯಿತು. ಅಲ್ಲಿ ಮಠದ ಸ್ವಾಮಿಗಳು ದರ್ಶನ ಪಡೆದು ಸ್ವಾಮಿ ಕೃಪೆಗೆ ಪಾತ್ರರಾದರಂತೆ.

ಉಜ್ಜನಿಯ ಮರುಳಸಿದ್ಧರು ಅವರ ಭಕ್ತಿಗೆ ಮೆಚ್ಚಿ ತಾವು ಈ ಪ್ರದೇಶದಲ್ಲಿಯೇ ಉಳಿದುಕೊಳ್ಳಿರಿ ಎಂದು ಆಶೀರ್ವದಿಸಿದರಂತೆ. ಅಂದು ಸ್ವಾಮಿಗಳು ಅವರ ಜೊತೆಯಲ್ಲಿಯೇ ಕಾಡಿನಲ್ಲಿ ತಿರುಗುತ್ತಾ ಬರುತ್ತಿರುವಾಗ ಸ್ಥಳದ ಶೋಧನೆಗೆ ಶ್ರೀ ಮರಳಸಿದ್ಧರು ಮುಂದೆ ಮುಂದೆ ಹೋಗುತ್ತಿದ್ದರು. ಏಳು ಜನರಲ್ಲಿ ಭೂಮರಾಜ ನಾಯಕನಿಗೆ ಒಂದು ದೃಶ್ಯ ಕಂಡಿತು. ಒಂದು ಗುಂಡಿನ ಮೇಲೆ ಜರಿಯನ್ನು ಮೊಲವು ಕಾಡಿಸುತ್ತಿತ್ತು. ಈ ದೃಶ್ಯವನ್ನು ಕಂಡು ಭೂಮರಾಜ ಸ್ವಾಮಿಗಳಿಗೆ ತಿಳಿಸಿ, ಇದು ವಿಜಯ ವೈಜಯಂತಿಯನ್ನು ಮೆರೆಯಬಹುದಾದ ಸ್ಥಳವೆಂದು, ಇಲ್ಲಿಯೇ ಊರನ್ನು ಕಟ್ಟಿರಿ, ಖ್ಯಾತರಾಗಿ ಬಾಳಿ ಬದುಕಿರಿ ಎಂದು ಆಶೀರ್ವದಿಸಿದರಂತೆ. ಸ್ವಾಮಿಗಳ ಆಜ್ಞೆಯಂತೆ ಅಲ್ಲಿ ಊರು ಕಟ್ಟಿದರು. ಜರಿಯನ್ನು ಮೊಲವನ್ನು ಕಂಡು ಕಟ್ಟಿದ ಈ ಊರಿಗೆ ಜರಿಮಲೆ ಎಂದು ಹೆಸರು ಬಂತು ಎಂದು ನಿರೂಪಿಸುತ್ತಾರೆ ಪಾಳೆಗಾರ ವಂಶದ ವಂಶಸ್ಥರಾದ ಪಿ.ಎಸ್. ಪಂಪಾಪತಿ ರಾಜ ದೊರೆಯವರು.

ಇನ್ನೊಂದು ಹೇಳಿಕೆಯ ಪ್ರಕಾರ ಜರಿಮಲೆ ಎಂಬುದು 'ಜರಿ' ಎಂದರೆ ತೆಳುವಾಗಿ ಹರಿಯುವ ನೀರು 'ಮಲೆ' ಎಂದರೆ ಬೆಟ್ಟ, ಗುಡ್ಡ ಎಂದರ್ಥ. ಗುಡ್ಡದಲ್ಲಿ ನೀರು ಹರಿಯುವುದು ಅಥವಾ ನೀರು ಬಸಿಯುವುದು ಎಂದರ್ಥ. ಹೀಗಾಗಿ ಈ ಪ್ರದೇಶಕ್ಕೆ ಜರಿಮಲೆ ಎಂದು ಹೆಸರು ಬಂದಿದೆ.

### ೫.೮.೪. ಗಾದೆಗಳಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳು

#### ಗಾದೆಗಳಲ್ಲಿ ವ್ಯಕ್ತಿನಾಮಗಳು

ಗಾದೆಗಳಲ್ಲಿ ಅನೇಕ ಅಂಶಗಳಿವೆ. ಅದರಂತೆ ವ್ಯಕ್ತಿ ಹೆಸರುಗಳು ಕಂಡುಬರುತ್ತವೆ. ಅವು ವ್ಯಕ್ತಿಯಲ್ಲಿರುವ ಆಸೆ, ಆಕಾಂಕ್ಷೆ, ಚಾರಿತ್ರ್ಯ ಆತನ ಗುಣಲಕ್ಷಣ ಇನ್ನು ಹಲವಾರು ಅಂಶಗಳನ್ನು ತಿಳಿಸುವ ಗಾದೆಗಳಿವೆ. ಅವು ಈ ಕೆಳಗಿನಂತಿವೆ.

೧. **ಮಣ್ಣಿನಿಂದ ಕೌರವ ಕೆಟ್ಟ, ಹೆಣ್ಣಿನಿಂದ ರಾವಣ ಕೆಟ್ಟ:** ಈ ಗಾದೆಯಲ್ಲಿ ಪುರಾಣ ಪುರುಷರ ಕಥನಕ್ಕೆ ಕಾರಣಗಳು ಮತ್ತು ಅವರ ಚರಿತ್ರೆಯನ್ನು ಕಾಣಬಹುದಾಗಿದೆ. ಇಲ್ಲಿ ಕೌರವ ಮತ್ತು ರಾವಣರು ಒಳ್ಳೆಯವರಲ್ಲ ಎಂಬುದನ್ನು ತಿಳಿಸುತ್ತದೆ. ವ್ಯಾಸನ ಮಹಾಭಾರತದಲ್ಲಿ ಕೌರವನ ಪಾತ್ರ ಬರುತ್ತದೆ. ಆತನನ್ನು ಕೌರವೇಶ, ದುರ್ಯೋಧನ ಎಂದೂ ಕರೆಯಲಾಗಿದೆ. ಕೌರವರು ಮತ್ತು ಪಾಂಡವರು ಸಹೋದರರೆ, ಆದರೆ ಭೂಮಿಗಾಗಿ ಅವರು ಏನೆಲ್ಲಾ ಮಾಡಿ ಪಾಂಡವರನ್ನು

ಕೌರವರು ಕಾಡಿಗೆ ಅಟ್ಟುತ್ತಾರೆ. ಹದಿನಾಲ್ಕು ವರ್ಷಗಳ ಕಾಲ ವನವಾಸ ಮಾಡಿ ಬಂದು, ಹೆಚ್ಚಿನ ಸೇನಾಬಲವನ್ನು ಹೊಂದಿರುವ ಕೌರವನ್ನು ಪಾಂಡವರು ಗೆಲ್ಲುತ್ತಾರೆ. ಇದರಿಂದ ನಮಗೆ ತಿಳಿಯುವು ದೇನೆಂದರೆ ನ್ಯಾಯಮಾರ್ಗದಿಂದ ಮನುಷ್ಯ ನಡೆದರೆ ಜೀವನದಲ್ಲಿ ಒಳ್ಳೆಯದಾಗುತ್ತದೆ ಎಂಬ ನೀತಿಪಾಠವಿದೆ.

ಹೆಣ್ಣಿನಿಂದ ರಾವಣ ಕೆಟ್ಟ. ರಾಮಾಯಣದಲ್ಲಿ ಬರುವ ಒಂದು ಪಾತ್ರವೇ ರಾವಣ. ಇಂದಿಗೂ ಕೂಡಾ ರಾವಣನ ಹೆಸರನ್ನು ಕೇಳಿದಾಕ್ಷಣ ಆತನೊಬ್ಬ 'ವಿಲನ್' ಎಂಬಂತೆಯೇ ನೋಡುತ್ತಾರೆ. ಆದರೆ ಮೊದಲು ಆತನೊಬ್ಬ ಅಪ್ರತಿಮ ವೀರ ಮತ್ತು ಉತ್ತಮ ಚಾರಿತ್ರ್ಯವನ್ನು ಹೊಂದಿದ್ದ ಮನುಷ್ಯ. ಆದರೆ ಸೀತೆಯನ್ನು ಬಯಸಿದ ಎಂಬ ಒಂದೇ ಕಾರಣಕ್ಕಾಗಿ ಆತ ಕೆಟ್ಟವನೆಂಬ ಪಟ್ಟ ಪಡೆದು ಜನರ ಮಾತಿನಂತೆ, ಒಂದು ರೂಪಾಯಿ ಕದ್ದರೆ ಕಳ್ಳನೇ, ಕೋಟಿ ರೂಪಾಯಿ ಕದ್ದರೂ ಕಳ್ಳನೇ ಎಂಬುವಂತೆ ಸೀತೆಯೆಂಬ ಒಂದು ಹೆಣ್ಣಿನಿಂದ ಆತ ಕೆಟ್ಟವನಾದ. ಅಪ್ರತಿಮ ಸುಂದರಿಯಾದ ಹೆಂಡತಿಯನ್ನು ಪಡೆದಿದ್ದರೂ, ಪರನಾರಿಯ ಮೇಲೆ ಕಣ್ಣು ಆಕಿದ್ದರಿಂದ ಆತ ಕೆಟ್ಟವನಾದ. ಇದರಿಂದ ತಿಳಿಯುವುದೇನೆಂದರೆ, ಸ್ತ್ರೀಯರನ್ನು ಗೌರವದಿಂದ ಕಾಣಬೇಕು, ಪರರ ಹೆಂಡತಿಯರನ್ನು ಬಯಸುವುದು ಒಳ್ಳೆಯದಲ್ಲ ಎಂಬುದು ಗೊತ್ತಾಗುತ್ತದೆ. ಹಾಗೂ ದೇಶದ ಮಹಾನ್ ಕೃತಿಗಳಾದ ರಾಮಾಯಣ ಮತ್ತು ಮಹಾಭಾರತದ ವಿಷಯಗಳು ಈ ಗಾದೆಯಿಂದ ಜನಸಾಮಾನ್ಯರಿಗೂ ತಲುಪುತ್ತದೆ.

**೨. ಬುಕ್ಕರಾಯ ಮೆಚ್ಚಿ ಬೆಕ್ಕಿನ ಮರಿಯಿತ್ತ:** ಈ ಗಾದೆಯನ್ನು ಶ್ರೀ ಕುಲಕರ್ಣಿ ಪ್ರಹ್ಲಾದರು ಬರೆದ 'ನಾಣ್ಣುಡಿ' ಎಂಬ ಕಿರುಹೊತ್ತಿಗೆಯಿಂದ ತೆಗೆದುಕೊಳ್ಳಲಾಗಿದೆ. ಇದು ಕರ್ನಾಟಕ ಇತಿಹಾಸದ ಪ್ರಸಂಗವೊಂದನ್ನು ಸೂಚಿಸುವುದು. ದಾನಶೂರನೆಂದೂ ವಿಖ್ಯಾತನಾದ ವಿಜಯನಗರದ ಬುಕ್ಕರಾಯನ ಬಳಿ ಪಂಡಿತನೊಬ್ಬನು ಬಂದು ತನ್ನ ವಿದ್ವತ್ತಿನಿಂದ ಅವನನ್ನು ಸಂತೋಷಗೊಳಿಸಿದ. ಮೆಚ್ಚಿದ ದೊರೆ ಹತ್ತಿರದಲ್ಲಿದ್ದ ಪ್ರೀತಿಯ ಬೆಕ್ಕೊಂದನ್ನು ಎತ್ತಿ ಪಾರಿತೋಷಕವಾಗಿತ್ತನೆಂದೂ, ಸನ್ಮಾನಿತನಾದ ಪಂಡಿತನು ಆಸ್ಥಾನದಿಂದ ಬೆಕ್ಕನ್ನು ಕಂಕುಳದಲ್ಲಿ ಒಯ್ಯಬೇಕಾಯಿತೆಂದು ತಿಳಿಸುತ್ತದೆ. ಹೀಗೆ ಗಾದೆಗಳ ಗರ್ಭದಲ್ಲಿ ಇತಿಹಾಸ, ಪುರಾಣ, ನಂಬಿಕೆ, ಸಂಪ್ರದಾಯ, ಆಚರಣೆ, ಚಾರಿತ್ರಿಕ ಅಂಶಗಳೂ ಇವೆ.

**೩. ಸಿದ್ದಪ್ಪನಂತ ದೇವರಿಲ್ಲ ಮುದ್ದೆಯಂತ ಊಟವಿಲ್ಲ:** ಈ ಮೇಲಿನ ಗಾದೆಯನ್ನು ಕೂಡ್ಲಿಗಿ ಪರಿಸರದಲ್ಲಿ ಸಂಗ್ರಹಿಸಲಾಗಿದೆ. ಕುರುಬ ಸಮುದಾಯಕ್ಕೆ ಸಿದ್ದಪ್ಪನೇ ಮುಖ್ಯವಾದ ದೇವರು. ಆದ್ದರಿಂದಲೇ ಕುರುಬ ಸಮುದಾಯದಲ್ಲಿ ಸಿದ್ದಪ್ಪ, ಸಿದ್ದೇಶ, ಸಿದ್ದ, ಸಿದಪ್ಪ ಒಡೆಯ ಎಂಬ ಹೆಸರುಗಳನ್ನು ನಿರ್ದೇಶಿಸಿಕೊಂಡಿದ್ದಾರೆ. ಆ ಸಮುದಾಯಕ್ಕೆ ಆತನೇ ಪ್ರಮುಖ ದೈವವಾದ್ದರಿಂದ ಎಷ್ಟೋ ದೇವರುಗಳು ಇದ್ದರೂ, ಸಿದ್ದಪ್ಪನಂತಹ ದೇವರು ಇಲ್ಲ ಎಂಬುದನ್ನು ಗಾದೆ ಮೂಲಕ ವ್ಯಕ್ತಪಡಿಸಿದ್ದಾರೆ. ಈ ದೇವತೆಯ ಜೊತೆಗೆ ಮುದ್ದೆಯಂತಹ ಊಟವಿಲ್ಲ ಎಂದು ಗಾದೆಯು

ತಿಳಿಸುತ್ತದೆ. ಊರಿಂದೂರಿಗೆ ಕುರಿಗಳನ್ನು ಹೊಡೆದುಕೊಂಡು ಒಂದು ಕಡೆ ನಿಲ್ಲದೆ ವರ್ಷಪೂರ್ತಿ ಮೇವಿಗಾಗಿ ತಿರುಗುತ್ತಾರೆ. ಅವರ ಊಟ ಮುದ್ದೆ. ಮುದ್ದೆ ಪ್ರಮುಖವಾದ ಅವರ ಆಹಾರವಾಗಿರುವುದರಿಂದ, ಮುದ್ದೆಗಿಂತ ಊಟ ಮತ್ಯಾವುದಿದೆ ಎನ್ನುವ ಅರ್ಥದಲ್ಲಿ ಈ ಗಾದೆ ತಿಳಿಸುತ್ತದೆ. ಈ ಗಾದೆಯು ದೇವತೆಯ ಬಗೆಗೆ ಹೇಳುತ್ತಾ ಮಾನವನ ಆರೋಗ್ಯದ ಬಗ್ಗೆಯೂ ಕಾಳಜಿ ವಹಿಸುತ್ತದೆ. 'ರಾಗಿ ತಿಂದೋನು ನಿರೋಗಿ' ಎನ್ನುವ ಮಾತನ್ನು ನಾವೆಲ್ಲ ಕೇಳಿದ್ದೇವೆ. ಆದ್ದರಿಂದ ಮುದ್ದೆಯ ಊಟ ಆರೋಗ್ಯಯುತವಾದದ್ದು ಎಂಬುದನ್ನು ಇದು ತಿಳಿಸುತ್ತದೆ.

**೪. ಯಾರದೋ ದುಡ್ಡು ಎಲ್ಲಮ್ಮನ ಜಾತ್ರೆ:** ಯಾರಾದರೂ ಖರ್ಚು ಮಾಡುತ್ತಾರೆಂದರೆ ಸಾಕು ಅದನ್ನು ಬಳಸಿಕೊಳ್ಳುವವರೆ ಹೆಚ್ಚು ಇರುತ್ತಾರೆ. ಆದ್ರೆ ಈ ಗಾದೆಯ ಹಿಂದೆ ವ್ಯಂಗ್ಯವು ಇದೆ. 'ಪುಗಸಟ್ಟೆ ಗಂಡ ಹೊಟ್ಟೆ ತುಂಬ ಉಂಡ' ಎನ್ನುವ ಹಾಗಾಗುತ್ತದೆ. ಪುಕ್ಕಟೆಯಾಗಿ ಏನೂ ಮಾಡಬಾರದು ಎನ್ನುವ ಅರ್ಥವಿದೆ. ಪರರು ನಮಗೆ ಸಹಾಯ ಮಾಡಿದರೆ, ಯಾವ ರೂಪದಲ್ಲಾದರೂ ಅದನ್ನು ಹಿಂದಿರುಗಿಸಿದರೆ ಒಳ್ಳೆಯದು ಎಂಬುದನ್ನು ಇದು ತಿಳಿಹೇಳುತ್ತದೆ. ಈ ಗಾದೆಯಲ್ಲಿ ಎಲ್ಲವ್ವ ಮತ್ತು ಅವಳ ಜಾತ್ರೆಯನ್ನು ನೆನಪಿಸಿಕೊಂಡಿದ್ದಾರೆ. ನಮ್ಮ ಜನಪದರು ಹಣ ಪುಕ್ಕಟೆ ಸಿಕ್ಕಿತೆಂದು ಎಲ್ಲವ್ವನ ಜಾತ್ರೆಗೆ ಹೋಗಿ ಬೇಕಾದ್ದನ್ನೆಲ್ಲಾ ತೆಗೆದುಕೊಂಡರೆ, ಈ ಗಾದೆ ನೆನಪಾಗುತ್ತದೆ. ಇಂತಹ ಗಾದೆಗಳಿಂದ ಜೀವನವನ್ನು ಹೇಗೆ ಮಾಡಬೇಕು ಎಂಬುದರ ಒಳಸುಳಿವು ಸಿಗುತ್ತದೆ. ಆದ್ದರಿಂದಲೇ ಗಾದೆಗಳು ಇಂದಿಗೂ ಜೀವಂತವಾಗಿವೆ.

**ಗಾದೆಗಳಲ್ಲಿ ಸ್ಥಳನಾಮಗಳು**

ಮಾನವ ಇಂದು ಜಾನಪದ ಪರಂಪರೆಯ ಗಾದೆ, ನುಡಿಗಟ್ಟು, ಒಡಪು ಮುಂತಾದ ಸಾಂಸ್ಕೃತಿಕ ಬದುಕನ್ನು ಪ್ರತಿನಿಧಿಸುವ ಪ್ರಕಾರಗಳ ಮಹತ್ವವನ್ನು ಮರೆಯಲಾರಂಭಿಸಿದ್ದಾನೆ. ಸಮುದಾಯ ಜಗತ್ತಿನಲ್ಲಿ ಮೊದಲು ಹುಟ್ಟಿದ ಸಂಸ್ಕೃತಿ ಮೌಖಿಕವಾದದು. ಮಾತಿನಲ್ಲಿ ಮೋಡಿ ಮಾಡಿ ಮನುಷ್ಯರನ್ನು ಉತ್ತಮ ಸಂಸ್ಕೃತಿಯ ಕಡೆ ಕರೆದೊಯ್ಯುತ್ತವೆ. ಹಾಗೆಯೇ ಸಾಮಾಜಿಕ ವಿಡಂಬನೆಯ ದ್ಯೋತಕವಾಗಿ ಜಾನಪದ ಸಾಹಿತ್ಯದಲ್ಲಿ ಗಾದೆಗಳು ಮತ್ತು ಒಗಟುಗಳು ಮುಖ್ಯವಾಗಿ ಸಂಸ್ಕೃತಿಯ ನೆಲೆಗಳಾಗಿ ಪರಿಣಮಿಸಿವೆ. ಗಾದೆಗಳನ್ನು ಜನಪದರು ದಿನ ನಿತ್ಯದಲ್ಲಿ ಬಳಸುತ್ತಾರೆ. ಈ ಗಾದೆಗಳು ವಾಚ್ಯಾರ್ಥ ಮತ್ತು ಧ್ವನ್ಯರ್ಥದಲ್ಲಿ ಬಳಕೆಗೊಂಡಿರುವುದನ್ನು ಕಾಣಬಹುದು. ಇಲ್ಲಿ 'ಗಾದೆ' ಎಂದರೆ ಅನುಭವಿಗಳ ರಸದ ನುಡಿ ಎನ್ನಬಹುದು. ಗಾದೆ ಎನ್ನುವುದು ಅನುಭವ ಮತ್ತು ಆಲೋಚನೆಗಳ ಫಲ. ಜೀವನ ಹಲವು ಅನುಭವಗಳ ಸಂಗ. ಅನುಭವಗಳು ಸತ್ಯಕ್ಕೆ ದೂರವಾದವುಗಳು. ಆದರೆ ಗಾದೆಗಳು ಜನರ ಮಾತಿನಲ್ಲಿ 'ವೇದ ಸುಳ್ಳಾದರು ಗಾದೆ ಸುಳ್ಳಾಗದು' ಎಂದಿದ್ದಾರೆ. ಇದು ಗಾದೆಯ ಬಗೆಗಿನ ಅಂತರಂಗವನ್ನು ಹೇಳುತ್ತದೆ.

ಗಾದೆ ಎನ್ನುವುದಕ್ಕೆ ಕನ್ನಡ ನಿಘಂಟಿನಲ್ಲಿ ಗಾಥಾ(ತ್ಯ) "ಗಾದೆಯ ಮಾತು, ಲೋಕೋಕ್ತಿ, ಪರಂಪರೆಯ ಕಥೆ" (ಪಂಡಿತ ಜೆ.ಎ. ಕವಲಿ (ಸಂ), ಕನ್ನಡ-ಕನ್ನಡ ಕಸ್ತೂರಿ ಕೋಶ, ಪುಟ-೩೨೪) ಇತ್ಯಾದಿ ಅರ್ಥವನ್ನು ಗುರುತಿಸಿದ್ದಾರೆ. ಇಲ್ಲಿ ಲೋಕೋಕ್ತಿ, ಪರಂಪರೆಯ ಕಥೆ ಎಂಬರ್ಥಗಳು

ಪ್ರಸ್ತುತ ಈ ವಿಷಯಕ್ಕೆ ಉಪಯುಕ್ತ ಪದಗಳು ಎಂಬುದು ಸೂಕ್ತವಾದದ್ದು. ಇಂಗ್ಲಿಷ್‌ನ Proverb ಎಂಬ ಪದಕ್ಕೆ ಕನ್ನಡದಲ್ಲಿ 'ಗಾದೆ' ಸಂವಾದಿ ಪದವಾಗಿ ಬಳಕೆಯಾಗುತ್ತದೆ. "ಕನ್ನಡದಲ್ಲಿ ಇದಕ್ಕೆ ಸಂವಾದಿಯಾಗಿ ಮತ್ತೊಂದು ಪದವೆಂದರೆ ನಾಣ್ನುಡಿ. ನಾಡು+ನುಡಿ, ನಾಣ್ಣುಡಿಯಾಗಿದೆ. ಗಾದೆ ಎಂಬ ಶಬ್ದ ರೂಢಿಗೆ ಬಂದನಂತರ ಅದು ಮರೆಯಾಯಿತು" (ದೇ.ಜ.ಗೌ. ಜಾನಪದ ಅಧ್ಯಯನ, ಪುಟ-೨೭೭). ಈಗ ಗಾದೆಯ ಬಳಕೆ ಹೆಚ್ಚು ಜನಪ್ರಿಯತೆ ಗಳಿಸಿ ಬೆಳಕು ಕಂಡಿದೆ. ಅದು ಗಾಥಾ ಸಂಸ್ಕೃತದ ಪರ್ಯಾಯ ಪದ ಎಂಬುದರ ಮೂಲ ಹುಡುಕಿದಾಗ ಗೋಚರವಾಗುತ್ತದೆ. ಆದರೆ ಅಚ್ಚಕನ್ನಡದ ಪದವಾಗಿ ಬೆಳೆದು ಉಳಿದಿದೆ. ಗಾದೆಗಳ ಪ್ರಾಚೀನತೆಯ ಬಗೆಗೆ ದೇ.ಜ.ಗೌ. ಅವರು ಜಾನಪದ ಅಧ್ಯಯನದ 'ಗಾದೆಗಳು' ಲೇಖನದಲ್ಲಿ ಗುರುತಿಸಿದ್ದಾರೆ. ಗಾದೆಯನ್ನು ಅಚಾನಕವಾಗಿ ನಮಗೆ ಗೊತ್ತಿಲ್ಲದೆ ಬಳಸುವ ಕಿಡಿನುಡಿಗಳು ಮಾತ್ರ ಗದ್ಯ ಪ್ರಕಾರದಲ್ಲಿ ಇವು ಚಿಕ್ಕ ಪ್ರಕಾರವಾಗಿದ್ದರೂ ಜನಪದ ಸಾಹಿತ್ಯದಲ್ಲಿ ಗಾದೆಗಳು ಮೌಲ್ಯಯುತವಾದ ಅಗ್ರಸ್ಥಾನ ಪಡೆದಿವೆ.

ಯಾವುದೇ ಗಾದೆಗಳ ಹಿನ್ನೆಲೆಯನ್ನು ಗಮನಿಸಿದರೆ, ಒಂದು ಘಟನೆ, ಸ್ಥಳಪುರಾಣ, ಒಗಟು, ಸಮುದಾಯ ಮತ್ತು ಒಂದು ಚಿಕ್ಕ ಕಥೆ, ನಂಬಿಕೆಗಳನ್ನು ಒಳಗೊಂಡಿರುತ್ತದೆ. ಮುಖ್ಯವಾಗಿ ಗಾದೆಗಳಲ್ಲಿ ಸ್ಥಳನಾಮಗಳು ಹೇಗೆ ಬಿತ್ತರಗೊಂಡಿವೆ ಎಂಬುದನ್ನು ಗಮನಿಸಬಹುದು. ಗಾದೆಗಳಲ್ಲಿಯ ಸ್ಥಳನಾಮಗಳನ್ನು ಗಮನಿಸಿದಾಗ, ಆ ಊರಿನ ಗುಣಲಕ್ಷಣಗಳನ್ನು, ಇಲ್ಲವೇ ಆ ಸ್ಥಳದ ಜನರ ಗುಣಗಳನ್ನು ಅಥವಾ ಆ ಊರಿನ ಭೌಗೋಳಿಕತೆಯನ್ನು ತಿಳಿಯಲು ಅನುಕೂಲವಾಗುತ್ತದೆ. ಅಂತಹ ಕೆಲವೊಂದು ಗಾದೆಗಳನ್ನು ಬಳ್ಳಾರಿ ಪರಿಸರದಲ್ಲಿ ಕಾಣಬಹುದಾಗಿದೆ. ಅವುಗಳಿಂದ ದೊರೆಯಬಹುದಾದ ಚಾರಿತ್ರಿಕ, ಸಾಂಸ್ಕೃತಿಕ, ಐತಿಹಾಸಿಕ ಹಿನ್ನೆಲೆಯನ್ನು ತಿಳಿಸಿಕೊಂಡುವುದರ ಮೂಲಕ ಮೂಲ ಆಕರಗಳಾಗಿ ಪರಿಣಮಿಸುತ್ತವೆ.

**೧. ಹಂಪಿಗೆ ಹೋಗುವುದಕ್ಕಿಂತ ನಮ್ಮ ಕೊಂಪೆಯಲ್ಲಿ ಇರುವುದೇ ವಾಸಿ:** ಈ ಗಾದೆಯ ಅಂತರಂಗದಲ್ಲಿ ಒಂದು ಕಥಾನಕವಿದೆ. ಅದರೊಂದಿಗೆ ಚರಿತ್ರೆಯ ಸಂಗತಿಯೂ ಅಡಗಿದೆ. ಹಿಂದೆ ಒಂದು ದಿನ ಒಬ್ಬ ರಾಜನಿಗೆ ಇಬ್ಬರು ಹೆಣ್ಣುಮಕ್ಕಳಿದ್ದರಂತೆ. ಅವರು ಎಲ್ಲ ವಿದ್ಯೆಯನ್ನು ಕಲಿತಿರಲು, ದೇಶವನ್ನು ಸುತ್ತಬೇಕೆಂದು, ಎಲ್ಲ ನೋಡಿ ಹಂಪೆಗೆ ಬಂದರಂತೆ. ಕಾಲಲ್ಲಿಯೇ ತಿರುಗಾಡಿ ನೋಡಿದ ಅವರು 'ಛೇ! ಹಂಪಿಗೆ ಬರುವುದಕ್ಕಿಂತ ನಮ್ಮ ಕೊಂಪೆಯಲ್ಲಿ ಇರುವುದೇ ವಾಸಿ ಅಂದರಂತೆ, ಪಕ್ಕದಲ್ಲಿಯೇ ಕುಳಿತಿದ್ದಂತಹ ಋಷಿಮುನಿಗಳು ಈ ಮಾತುಗಳನ್ನು ಕೇಳಿಸಿಕೊಂಡು ಇಂಥ ಪವಿತ್ರ ಸ್ಥಳಕ್ಕೆ ಎಂಥ ಮಾತನ್ನಾಡಿದರು ಎಂದು ಕ್ಷಣ ಮಾತ್ರದಲ್ಲಿಯೇ ಶಾಪ ಕೊಟ್ಟರಂತೆ. ಶಾಪ ಕೊಟ್ಟಿದ್ದಕ್ಕೆ ಅವರು ಅಲ್ಲೇ ಕಲ್ಲಾದರು ಎಂಬ ವಿಚಾರವನ್ನು ಕಮಲಾಪುರದ ನಿವಾಸಿ ವೆಂಕಟೇಶ (೫೪) ಇವರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅವರು ಕಲ್ಲಾದರು ಎಂಬ ಸಾಕ್ಷಿಗೆ ಪ್ರತೀಕವಾಗಿ ಹಂಪೆಗೆ ಹೋಗುವ ದಾರಿಯಲ್ಲಿಯೇ ಅಕ್ಕತಂಗಿಯರ ಗುಂಡಿಯಿದೆ. ಈ ಗಾದೆಯು ಒಂದು ಕಡೆ, ಆ ಸಹೋದರಿಯರು ತಿರುಗಾಡಿ ಸುಸ್ತಾಗಿ, ದೈಹಿಕ ಶ್ರಮವನ್ನು ತಿಳಿಯಪಡಿಸುತ್ತದೆ. ಇದಕ್ಕಿಂತ ಮುಖ್ಯವಾಗಿ, ಆ ಗಾದೆಯು ವಿಜಯನಗರ ಸಾಮ್ರಾಜ್ಯದ ಅಂತ್ಯವನ್ನು

ಚಿತ್ರಿಸುತ್ತದೆ. ಆದ್ದರಿಂದಲೇ ಈಗ ಹಂಪೆಯು ಹೆಚ್ಚು ಜನರ ಬಾಯಲ್ಲಿ ಹಾಳು ಹಂಪೆಯಾಗದೆ, ಹಾಳು ಕೊಂಪೆಯಂತೆ ಇದೆ ಎನ್ನುವ ಮಾತುಗಳು ಈ ಪರಿಸರದಲ್ಲಿ ಕೇಳಿಸಿಕೊಳ್ಳುತ್ತೇವೆ. ಈ ಗಾದೆಯಿಂದ ಚರಿತ್ರೆಯ ಅನೇಕ ಸಂಗತಿಗಳು ಎಳೆ ಎಳೆಯಾಗಿ ಬಿಚ್ಚಿಕೊಳ್ಳುತ್ತವೆ. ಮತ್ತು ಒಂದು ಸಾಂಸ್ಕೃತಿಕ ಜಗತ್ತಿನ ಆಯಾಮಗಳನ್ನು ಅರ್ಥೈಸಲು ಸಾಧ್ಯವಾಗುತ್ತದೆ.

**೨. ನಾರದಮುನಿಯಂತಹ ದೇವರಿಲ್ಲ ಚಿಗಟೇರಿಯಂತಹ ಊರಿಲ್ಲ:** ತ್ರಿಲೋಕ ಸಂಚಾರಿಯಾದ ನಾರದನ ಹೆಸರು ಯಾರಿಗೆ ತಾನೆ ಗೊತ್ತಿಲ್ಲ. ಕೆಲವೊಂದು ಸಾರಿ ನಾರದನ ಹೆಸರು ಬೇರೆ ಅರ್ಥಕ್ಕೂ ಬಳಸುವುದುಂಟು. ನಡುನಡುವೆ ಮಾತನಾಡುವ ವ್ಯಕ್ತಿಯನ್ನು ನಾವು ಅವನು 'ನಾರದ' ಇದ್ದಂತೆ ಎಂದು ಬಳಸುತ್ತೇವೆ. ನಾರದ ಯಾವಾಗಲೂ 'ನಾರಾಯಣ ನಾರಾಯಣ' ಎಂದು ನುಡಿಯುತ್ತಿರುತ್ತಾನೆ. ಇದಕ್ಕೆ ನಾವು ಆ ಅರ್ಥವನ್ನು ಬಳಸಿಕೊಳ್ಳುತ್ತೇವೆ ಎನಿಸುತ್ತದೆ. ಆದರೆ ನಮ್ಮ ಜನಮಾನಸದಲ್ಲಿ ನಾರದ ಒಬ್ಬ ದೇವಪುರುಷ ಆದ್ದರಿಂದಲೇ ಆತನನ್ನು ನಾರದಮುನಿಯಂತಹ ದೇವರಿಲ್ಲ ಎಂದಿದ್ದಾರೆ. ಇನ್ನು ಚಿಗಟೇರಿಯಂತಹ ಊರಿಲ್ಲ ಎಂಬುದನ್ನು ನಾವು ಸಕಾರಾತ್ಮಕವಾಗಿ ನೋಡಬೇಕು. ಚಿಗಟೇರಿಯ ಜನರು ತುಂಬಾ ಒಳ್ಳೆಯವರು, ಎಂಬರ್ಥವಿರಬಹುದು. ಹೀಗೆ ಗಾದೆಗಳು ಅನೇಕ ವಿಷಯಗಳನ್ನು ತಿಳಿಸುತ್ತವೆ.

**೩. ಗುಡ್ಡ ಸುತ್ತಿ ಮೈಲಾರಕ್ಕೆ ಹೋದರು:** ಮೈಲಾರಕ್ಕೆ ಹೋಗುವ ಮುಂಚೆ, ದೇವರಗುಡ್ಡಕ್ಕೆ ಹೋಗಲೇಬೇಕು. ಅಲ್ಲಿನ ದೇವರಿಗೆ ಮೊದಲು ಹಣ್ಣುಕಾಯಿ ಮಾಡಿಸಿಕೊಂಡು ತರುವಾಯ, ಮೈಲಾರದಲ್ಲಿ ದೇವರ ಸೇವೆಗಳನ್ನು ಪೂರೈಸಬೇಕು. ಪೂರ್ವದ ಪ್ರದೇಶಗಳಿಂದ ಬರುವವರಿಗೆ ದಾರಿಯಲ್ಲಿ ಮೈಲಾರ ಸಿಗುತ್ತದೆ. ಆದರೂ ಅವರು ದೇವರ ಗುಡ್ಡಕ್ಕೆ ಮುಂಚೆ ಹೋಗಬೇಕು. ಪೂರ್ವದಿಂದ ಮತ್ತು ಉತ್ತರದಿಂದ ಬರುವವರಿಗೆ ಮೊದಲು ಮೈಲಾರ ಸಿಕ್ಕರೂ ದಕ್ಷಿಣದ ದೇವರ ಗುಡ್ಡಕ್ಕೆ ಹೋಗಿ ಹಣ್ಣು ಕಾಯಿ ಕೊಟ್ಟು ದರ್ಶನ ಪಡೆದು ಬರಬೇಕು. ನಂತರ ಮೈಲಾರಕ್ಕೆ ಬರುವುದು ಸಂಪ್ರದಾಯವಾಗಿದೆ. ಇದನ್ನು ಈಗಲೂ ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಹೀಗೆ ಮೈಲಾರನ ಜಾತ್ರೆಗೆ ಬರುವಾಗ ದೇವರಗುಡ್ಡಕ್ಕೆ ಹಣ್ಣುಕಾಯಿ ಕೊಟ್ಟು ಮೈಲಾರಕ್ಕೆ ಬರುವ ಕಾರಣದಿಂದ ಇದಕ್ಕೆ ಒಂದು ಸಂಪ್ರದಾಯದ ಹಿನ್ನೆಲೆಯಲ್ಲಿ ಗಾದೆಯು ಹುಟ್ಟಿಕೊಂಡಿದೆ.

ಸರಿಯಾಗಿ ವಿಳಾಸ ಗೊತ್ತಿಲ್ಲದವರು ನೇರವಾಗಿ ಆ ಸ್ಥಳಕ್ಕೆ ಬರದೇ ಸುತ್ತು ಹಾಕಿ ಊರನ್ನು ತಲುಪಿದರೆ, ಬೇಟಿಯಾದ ವ್ಯಕ್ತಿಯು 'ಕೊಂಕಣ ಸುತ್ತಿ ಮೈಲಾರಕ್ಕೆ ಹೋದಂಗಾಯ್ತು' ಎಂಬ ಮಾತನ್ನು ಹೇಳುತ್ತಾರೆ. ಇದರಿಂದ ನಮಗೆ ತಿಳಿದುಬರುವುದೇನೆಂದರೆ ನಾವು ಹೋಗಬೇಕಾದ ವಿಳಾಸವನ್ನು ಸರಿಯಾಗಿ ತಿಳಿದುಕೊಂಡು ಹೋಗಬೇಕೆಂಬುದು.

**೪. ದೆವ್ವನ ಕಾಟ್ದಾಗೆ ದಾಸರಹಟ್ಟಿ ಹಾಳಾತಂತೆ:** ಹಿಂದೆ ಯಾವಾಗ್ಲೋ, ಎಂಟೋ ಹತ್ತೋ ದಾಸರ ಮನೆಗಳು ಅಲ್ಲಿ ಇದ್ದವಂತೆ. ದಾಸರು ಅಂದರೆ ರಂಗನಾಥಸ್ವಾಮಿಗೆ ದೀಕ್ಷೆ ಕಟ್ಟಿಸಿಕೊಂಡೋರು ಅಂತ ಹೇಳ್ತಾರೆ. ದೇವರನ್ನು ನಂಬಿದ್ದ ಅವರು ರೈತಾಪಿ ಕಸುಬು ಮಾಡುತ್ತಿದ್ದರು. ಆ ಊರಿನಲ್ಲಿ

ಎರಡು ಮೂರೋ ಕೊರಗರ ಮನೆಗಳಿದ್ದವಂತೆ, ಅವರು ರೈತಾಪಿ ಕಸುಬುಗಿಂತ ಹೆಚ್ಚಾಗಿ ಮೊಲ, ಚಿಗರಿ ಹಂದಿಗಳನ್ನು ಬೇಟೆಯಾಡುತ್ತಾ, ಕುಡಿಯುತ್ತಿದ್ದುದಲ್ಲದೆ, ಕಳ್ಳತನ ಮಾಡುತ್ತಾ ಜೀವನ ಮಾಡುತ್ತಿದ್ದರಂತೆ. ಗಂಟುಕಳ್ಳರ ಸಂಪರ್ಕವನ್ನು ಇಟ್ಟುಕೊಂಡಿದ್ದರಂತೆ. ಯಾವುದೋ ಒಂದು ವರ್ಷ ಅಮವಾಸ್ಯೆ ರಾತ್ರಿ ಗುಡಿಗೆ ದೇವರ ಪೂಜೆಗೆಂದು ಹೋಗಿದ್ದ ಪೂಜಾರಿ ಪೂಜೆ ತಟ್ಟೆಯನ್ನು ಅಲ್ಲೆ ಎಸೆದು 'ಅಯ್ಯಯ್ಯಪ್ಪೋ' ಅಂತ ಕೇಕೆ ಹೊಡೆಯುತ್ತಾ ದಾಸರ ಮುಖಂಡನ ಮನೆಗೆ ಓಡೋಡಿ ಬಂದ. ಏದುಸುರು ಬಿಡುತ್ತಾ "ಅಯ್ಯಾ, ಅಯ್ಯಾ ಗುಡಿಗೆ ಪೂಜೆ ಮಾಡಕ್ಹೋಗಿ ದೀಪ ಮುಡ್ಸಿದೆ ಇಬ್ರು ಸತ್ತೋರಂಗೆ ತೆಕ್ಕೆ ಹಾಕ್ಕಂಡು ಬಿದ್ಕಂಡಿದಾರೆ, ಇಬ್ಬರೂ ಗಂಡಸ್ರಂಗೇ ಕಂಡ್ಹಂಗಾತು" ಅಂತ ಹೇಳಿದ ಆ ಮುಖಂಡ ಹತ್ತಾರು ಜನ ಸೇರ್ಸಿ ಪಂಜು ಹಚ್ಚಿಕೊಂಡು ಗುಡಿಗೆ ಹೋದ್ರು, ಒಬ್ಬನು ಕೊರಗರವನು, ಮತ್ತೊಬ್ಬನು ದಾಸರವನು, ಕೊರಗರವನು ದಾಸರವನನ್ನು ಕೈಹಿಡಿದು ಕುಳಿತಿರುವ ದೃಶ್ಯ ಮುಖಂಡನಿಗೆ ಸಿಟ್ಟು ಬರುವಂತೆ ಮಾಡಿತು. ಆಗ "ಲೇ ಕೊರಗ ನನ್ನ ಮಗ್ನೇ ಬಿಡ್ಲಾ ಕೈಯ್ನಾ ದಾಸ್ರನ್ನ ಮುಟ್ಟೋವಷ್ಟು ಸೊಕ್ಕೇನ್ಲಾ? ಬಿಡೋ ಮದ್ಲು ಕೈಯ್ನ" ಎಂದು ಗದರಿಸಿದ. ಅವರು ಕಣ್ಣು ಕಿಸಿದು ಗುರ್ರೆನ್ನುವಂತೆ ದುರುಗುಟ್ಟಿ ನೋಡುತ್ತಾ 'ಹ್ಞಾಂ ಹ್ಞೂಂ' ಅಂತ ನರಳುತ್ತಾ ಎದ್ದು ಮತ್ತೆ ಮೂಲೆ ಹಿಡಿದು ಕುಳಿತರು. ತಕ್ಷಣ ಚಟ್ಟನೆ ಎದ್ದವರೆ ಕೈಕೈ ಹಿಡಿದುಕೊಂಡು ಗುಡಿಯ ಅಂಗಳಕ್ಕೆ ಜಿಗಿದು ಕತ್ತಲಲ್ಲೇ ಊರನ್ನು ನುಂಗುವಂತೆ ಕೆಕ್ಕರಿಸಿ ನೋಡಿದರು. ಮತ್ತೆ ಆ ಕೂಡಲೆ ಗುಡಿಯ ಒಳಕ್ಕೆ ಬಂದು ಮೂಲೆ ಹಿಡಿದು ಉದುರಿಹೋಗುವಂತೆ ಕರ್‌ಕರಾಂತ, ಹಲ್ಲು ಕಡಿಯತೊಡಗಿದರು. ಒಬ್ಬನು ಧೈರ್ಯ ತಂದುಕೊಂಡು 'ಯಾಕ್ರಲಾ ಹಿಂಗೆ'? ಮಾತಾಡ್ರಲಾ ಏನಾತ್ರಲಾ? ಅಂತ ಪ್ರಶ್ನೆ ಮಾಡಿದ. ಅವರು ಕೆಂಗಣ್ಣಿನಿಂದ ಬಿರಿಬಿರಿ ನೋಡಿದರೆ ವಿನಾ ಮಾತಿಲ್ಲ, ಕತೆಯಿಲ್ಲ. ದೆವ್ವ ಹಿಡ್ಕಂಡು ಬಿಟ್ಟಿವೆ. ಮೂಕ ದೆವ್ವಾನೆ ಇರ್ಬೇಕು ಅಂತ ತೀರ್ಮಾನಕ್ಕೆ ಬಂದರು. ಕೆಲವರಿಗೆ ಭಯವಾದ್ರೆ ಮತ್ತೆ ಕೆಲವರಿಗೆ ತಮಾಷೆ. ಹಿಡಿದ ದೆವ್ವ 'ಬರೆ' ಇಲ್ಲಾಂದ್ರೆ ಮೆಣಸಿನಕಾಯಿ 'ಉರ್ಲಿಗೆ' ಬಾಯಿ ಬಿಡುತ್ತವೆಯಂತೆ ಇದು ಯಾರ ತಲೆಗೆ ಹೊಳೆಯಿತೋ ಏನೋ ಒಬ್ಬನು ಒಂದು ಹೆಂಚಿನ ತುಂಬಾ ಉರಿಯುವ ಕೆಂಡಗಳನ್ನು ತಂದಿಟ್ಟ. ಇನ್ನೊಬ್ಬ ಎರಡು ಕಬ್ಬಿಣದ ಸರಳುಗಳನ್ನು ಕಾಯಿಸಲು ಕೆಂಡದ ಮೇಲಿಟ್ಟ, ಮತ್ತೊಬ್ಬನು ಬಂದು ಗುಳು ಪುಟ್ಟಿಯಷ್ಟು ಕೆಂಡದಂತಹ ಮೆಣಸಿನಕಾಯಿಯನ್ನು ಹಿಡಿದುಕೊಂಡು 'ಯಾರ್ ನೀವು? ಬಾಯ್ ಬಿಡ್‌ತೀರೋ ಇಲ್ಲೋ? ಎಂದ. ಮತ್ತದೇ ದುರುಗುಟ್ಟಿ ತಿನ್ನುವಂತಹ ನೋಟ. ಮಾತಿಲ್ಲ, ಕತೆಯಿಲ್ಲ. ಸಿಟ್ಟಿನಿಂದ ಕೆರಳಿದ ಒಬ್ಬ ಹಿಡಿ ಮೆಣಸಿನ ಕಾಯಿಯನ್ನು ಕೆಂಡದ ಮೇಲೆ ಹಾಕಿಯೇ ಬಿಟ್ಟ, ಉಸಿರು ಕಟ್ಟುವಂತೆ ಘಾಟೋ ಘಾಟು! ಇನ್ನೊಬ್ಬರು ಸರಳುಗಳನ್ನು ಎತ್ತಿಕೊಂಡು ಬರೆಹಾಕಿದ. ಬರೆ ಬಿದ್ದದ್ದೇ ತಡ ಒಂದೇ ಧ್ವನಿಯಲ್ಲಿ "ಅಯ್ಯಯ್ಯೋ... ಸತ್ನೆಪೋ... ನನ್ತಾಳಿ... ನನ್ತಾಳಿ, ಕುಬ್ಸಾ.. ಸೀರಿ... ಬ್ಯಾಡಪಾ... ಮಾನ ಕಳಿಬ್ಯಾಡ್ರಿ" ಅಂತ ಮಾನಮುಚ್ಚಿಕೊಳ್ಳುವ ಹೆಣ್ಣಿನಂತೆ ಅಳುತ್ತಾ ನಟನೆ ಮಾಡಿ ಬಾಯಿ ಬಿಟ್ಟಿತು. ಇನ್ನೊಬ್ಬ ನಾ ಸತ್ತೇ ಎಂದು ಹಲ್ಲು ಕಡಿಯುತ್ತಾ ಮುಂದುವರಿಸಿತು. ಒಂಬತ್ತು ತಿಂಗ್ಳ ಹಿಂದೆ... ಯಾಪಾರ ಮಾಡ್ಕಂಡು ನನ್ನ ಹೆಂಡ್ತಿ ಜತ್ಯಾಗ ಬರ್ತಿದ್ದೆ, ಆಗ ಕತ್ಲಾತು,

ಈ... ಈ... ಬ್ರೂ... ನಮ್ಯಾಲೆ ಬಿದ್ದು ಹಿಡ್ಕಂಡ್ರು. ಈ ನನ್ನ ಹೆಂಡ್ತಿನ ಮರಕ್ಕಟ್ಟಿ, ತಾಳಿ ಕಿತ್ಕಂಡು ಏನ್ಮಾಡಿದ್ರೂಂತ... ಸಿವಸಿವಾ... ನನ್‌ಕಣ್ಮುಂದೆ ಕಣ್ರೋ... ಆಮ್ಯಾಲೆ ನನ್ನ.... ತ.....ತ... ಹಂಗೆ ಬುಡೇವಾ? ದೆವ್ವನ ಕಾಟ್ದಾಗೆ ದಾಸರಹಟ್ಟಿ ಹಾಳಾತಂತೆ ಎಂದು ಹೇಳುತ್ತಾ ಕತ್ತರಿಸಿ ಬಿದ್ದಂತೆ, ದೊಪ್ಪನೆ ಬಿದ್ದಿತು. ದೆವ್ವ ಹಿಡಿದ ಇನ್ನೊಬ್ಬನೂ ಹಾಗೆಯೇ ಬಿದ್ದ. ಒಂದು ವರ್ಷ ತುಂಬೋದ್ರೊಳಗೆ ದಾಸರಹಟ್ಟಿಯಲ್ಲಿ ಎಂಟ್ಹತ್ತು ಜನ ಚಟ್ಟ ಏರಿದರಂತೆ. ಮುಂದೆ ಊರಿಗೆ ಊರೇ ಕಂಗಾಲಾಗಿ ದಿಕ್ಕಾಪಾಲಾದರಂತೆ. ಹೀಗೆ ಊರಿಗೇ ಊರೇ ಕದಕಟ್ಟಿ ಹೋಯಿತು. ಈಗ ದಾಸರಹಟ್ಟಿಯ ಆಸ್ತಿಗಳೆಲ್ಲಾ ಬೇರೆ ಊರಿನ ಹಣವಂತರ ಸೊತ್ತಾಗಿವೆ. ಇದುವೆರೆಗೆ ಆ ಊರಿನಲ್ಲಿ ಮನೆಕಟ್ಟಿಕೊಂಡು ವಾಸಮಾಡುವ ಸಾಹಸವನ್ನು ಯಾರೂ ತೋರಿಲ್ಲ.

**೫. ಕಾಲು ಇದ್ರೆ ಕನಕಗಿರಿ ನೋಡು, ಕಣ್ಣು ಇದ್ರೆ ಹಂಪಿ ತೇರು ನೋಡು:** ಈ ಗಾದೆಯು ಮೇಲಿನ ಎರಡು ಸ್ಥಳಗಳ ವೈಭವವನ್ನು ಕುರಿತು ಹೇಳುತ್ತದೆ. ಕನಕಗಿರಿಗೆ ನಡೆದುಕೊಂಡು ಹೋಗಿ ದೇವರ ದರ್ಶನವನ್ನು ಪಡೆಯಬೇಕು. ಮತ್ತು ಹಂಪಿಯ ತೇರು ಜೀವಮಾನದಲ್ಲಿ ಒಂದು ಸಾರಿಯಾದ್ರು ನೋಡಬೇಕು ಎನ್ನುವುದಕ್ಕೆ ಈ ಗಾದೆ ಹುಟ್ಟಿಕೊಂಡಿದೆ. ಹಂಪೆಯನ್ನು ಎಷ್ಟು ನೋಡಿದರೂ ಸಾಕಾಗುವುದಿಲ್ಲ. ಅಲ್ಲಿರುವ ದೇವಸ್ಥಾನಗಳು ನೋಡುಗರಿಗೆ ರಸದೌತಣವನ್ನು ನೀಡುತ್ತವೆ. (ವಕ್ತೃ: ಸುಡುಗಾಡಪ್ಪ, ೪೦, ಕಮಲಾಪುರ)

**೬. ಬಳ್ಳಾರಿ ಸುತ್ತಮುತ್ತ ಬಾಳೆಕಾಯೋಟು ಬರ, ಕುರುಗೋಡು ಸುತ್ತಮುತ್ತ ಕುಂಬಳಕಾಯೋಟು ಬರ:** ಈ ಗಾದೆಯಲ್ಲಿ ಬಳ್ಳಾರಿ ಮತ್ತು ಕುರುಗೋಡು ಸ್ಥಳಗಳಿವೆ. ಬಳ್ಳಾರಿ ಎಂದಾಕ್ಷಣ ಮೊದಲು ನೆನಪಿಗೆ ಬರೋದು ಬಿಸಿಲು, ಕುರುಚಲು ಗಿಡ, ಮಳೆಬಾರದೆ ಇರುವುದು, ಇಲ್ಲಿರುವ ಬಡತನ ಇತ್ಯಾದಿ ಇದನ್ನೇ ಜನಪದರು ಬಳ್ಳಾರಿಯ ಬರಗಾಲ ಪ್ರದೇಶವೆಂದು ಈ ಗಾದೆಯ ಮೂಲಕ ತಿಳಿಸಿದ್ದಾರೆ. ಎರಡು ಸ್ಥಳಗಳಲ್ಲಿರುವ ಬರಗಾಲವನ್ನು ತಿಳಿಸಲಿಕ್ಕೆ, ಬಾಳೆಕಾಯಿ ಮತ್ತು ಕುಂಬಳಕಾಯಿಗಳನ್ನು 'ಪರಿಮಾಣ' ಸೂಚಕಗಳನ್ನಾಗಿ ಬಳಸಿಕೊಂಡಿದ್ದಾರೆ. ಬಳ್ಳಾರಿ ಸುತ್ತಮುತ್ತ ಬಾಳೆಕಾಯೋಟು ಬರವಿದ್ದರೆ, ಕುರುಗೋಡುವಿನಲ್ಲಿ ಅದಕ್ಕಿಂತಲೂ ಹೆಚ್ಚು ಗಾತ್ರ ಹೊಂದಿದ ಕುಂಬಳಕಾಯೋಟು ಬರ ಇರುತ್ತದೆ ಎಂಬುದನ್ನು ತಿಳಿಸಿದ್ದಾರೆ. ಇಲ್ಲಿ ಜನಪದರು ಗಾದೆ ಮಾತುಗಳಿಂದ ಬಳ್ಳಾರಿ ಪರಿಸರದಲ್ಲಿರುವ ನೈಜತೆಯನ್ನು ತೋರಿಸಿಕೊಟ್ಟಿದ್ದಾರೆ. ಇರುವಂತಹುದನ್ನೇ ನೋಡಿ ಜನಪದರು ಗಾದೆಗಳನ್ನು ಕಟ್ಟುತ್ತಾರೆ ಎನ್ನುವುದಕ್ಕೆ ಈ ಗಾದೆಯು ಸಾಕ್ಷಿಯಾಗಿದೆ.

**೭. ಅಗ್ರಹಾರಕ್ಕೋದರೂ ದುರಾಗ್ರಹ ಬಿಡಲಿಲ್ಲ:** ಒಂದು ಕಾಲಕ್ಕೆ ಅಗ್ರಹಾರ ಬೌದ್ಧಿಕವಾಗಿ ಸಬಲವಾದ, ಸುಸಂಸ್ಕೃತರ ನೆಲೆಯಾಗಿತ್ತು. ಅಲ್ಲಿಗೆ ಜನಸಾಮಾನ್ಯನೂ ಹೋಗಿ ಆ ಊರಿನೊಂದಿಗೆ ನಂಟು ಬೆಳೆಸಿಕೊಂಡರೆ ಅನಾಗರಿಕನೂ, ನಾಗರಿಕನಾಗುತ್ತಾನೆ ಎಂಬ ನಂಬಿಕೆಯಿತ್ತು. ಅಗ್ರಹಾರಕ್ಕೆ ಹೋದರೂ ಏನೂ ಕಲಿಯದಿದ್ದರೆ, ದುರಾಗ್ರಹ ತಾನೇ ಹೇಗೆ ಬಿಟ್ಟೀತು ಎನ್ನುವ ಅರ್ಥವನ್ನು ಈ ಗಾದೆ ತಿಳಿಸುತ್ತದೆ.

**೮. ಕಲ್ಡಿಗುಡ್ಡದ ಜಾತ್ರೆ ಅಂದ್ಕಂಡಿದಿಯಾ, ಸಂಸಾರ ಅಂದ್ರೆ**: ಈ ಗಾದೆಯು ಮನುಷ್ಯನಿಗೆ ಜವಾಬ್ದಾರಿ ಇರಬೇಕು ಎನ್ನುವುದನ್ನು ತಿಳಿಸುತ್ತದೆ. ಸಂಸಾರ ಅಂದ್ರೆ ಜಾತ್ರೆಗೆ ಹೋಗಿ ಬಂದಂಗಲ್ಲ ಬಾಳ್ವೆಯನ್ನು ನಡೆಸಲಿಕ್ಕೆ ಏನೆಲ್ಲಾ ಬೇಕೋ ಅದೆಲ್ಲವೂ ಇರಬೇಕು. ಕಲ್ಡಿಗುಡ್ಡದಲ್ಲಿ ಏನೇನಿರುತ್ತದೆ? ಅಲ್ಲಿಗೆ ಹೋಗಿ ತಿರಿಗ್ಯಾಡಿ ಬಂದಂಗಲ್ಲ. ಜೀವನ ಮಾಡಬೇಕಾದ ಎಲ್ಲ ಲಕ್ಷಣಗಳು ಮನುಷ್ಯನಿಗೆ ಇರಬೇಕು ಎಂದು ಇದು ತಿಳಿಸುತ್ತದೆ. (ವಕ್ತೃ: ಸುಬ್ಬಜ್ಜ, ೬೮, ನಾಗಲಾಪುರ)

**೯. ಗೆದ್ದರೆ ಅರಮನೆ ಸೋತರೆ ಹಂಪಿಲೊಂದು ಮಂಟಪ**: ಹಂಪಿಯಲ್ಲಿ ಹೆಜ್ಜೆ ಹೆಜ್ಜೆಗೊಂದು ಮಂಟಪವಿದೆಯಾದ್ದರಿಂದ ಈ ಗಾದೆ ಹುಟ್ಟಿರಬೇಕೆಂದೆನಿಸುತ್ತದೆ. ಜಯಶಾಲಿಯಾದರೆ ಅರಮನೆ ಕಟ್ಟಿಸಿದರಾಯ್ತು. ಸೋತರೆ ಹಂಪಿಯಲ್ಲಿ ಹೇಗಾದರೂ ನೂರಾರು ಮಂಟಪಗಳಿವೆ ಅದರಲ್ಲಿದ್ದರಾಯ್ತು ಎನ್ನುವುದನ್ನು ಈ ಗಾದೆ ತಿಳಿಸುತ್ತದೆ. (ವಕ್ತೃ: ಪಾರ್ವತಮ್ಮ, ೬೦, ಕಮಲಾಪುರ)

**೧೧. ಬಳ್ಳಾರಿಗೆ ಹೆಣ್ಣು ಕೊಡಬಾರದು, ಆದವಾನಿಗೆ ಕತ್ತೆ ಕೊಡಬಾರದು**: ಮಳೆಗಾಲವಿರದ, ಬರನಾಡಿಗೆ, ಬಿಸಿಲು ಇರುವಂತಹ ಬಳ್ಳಾರಿಗೆ ತಮ್ಮ ಮಕ್ಕಳನ್ನು ಕೊಟ್ಟರೆ ಸುಖದಿಂದ ಇರಲು ಸಾಧ್ಯವಿಲ್ಲ. ಹಾಗೆಯೇ ಆದವಾನಿಯೂ ಭೌಗೋಳಿಕವಾಗಿ ನೀರಿಲ್ಲದ ಪರಿಸರ. ನೀರಿಗಾಗಿ ಪರದಾಡಿ ಅಗಸರು ಕತ್ತೆಯನ್ನು ಸುಮಾರು ಮೈಲು ದೂರ ಹೊಡೆದುಕೊಂಡು ಹೋಗಿ ತಮ್ಮ ಕೆಲಸವನ್ನು ಮಾಡಬೇಕಾಗುತ್ತದೆ ಎಂದು ಹೇಳುತ್ತದೆ. ಹೀಗೆ ಅನೇಕ ಗಾದೆಗಳನ್ನು ಇಲ್ಲಿ ಕೊಡಲಾಗಿದೆ. (ವಕ್ತೃ: ಗೋಪಮ್ಮ, ೫೫, ಕಮಲಾಪುರ)

* ಅಂಗಳವಿಲ್ಲದ ಹಾರಕಬಾವಿ, ಲಿಂಗವಿಲ್ಲದ ಗಾಣಗಟ್ಟೆ.
* ಅಯ್ಯನಳ್ಳಿಗಿಂತ, ತಯ್ಯಂಬೋ ಮಳ್ಳಿ ಮೇಲು.
* ಅಚ್ಚನಂತಹ ಗುಡಿಯಿಲ್ಲ ರಾರವಿಯಂತಹ ಊರಿಲ್ಲ.
* ಅಂಟವಾಳದ ಕಾಯಿಗೆ ಕುಂಟನಾಳಿಗೆ ಹೋಗಬೇಕಾ.
* ಅತ್ತಿಗೆ ಅಗಸನೂರು ಸೊಸೆಗೆ ಬಸವನೂರು.
* ಇವನಾ ಬೊಲ್ಲೂರು ಮಿಂಡ, ಸಾಮಾನ್ಯನಾ.
* ಉಜ್ಜನಿ ಒಳಗೆ ನೋಡು, ಹಂಪೆ ಹೊರಗೆ ನೋಡು.
* ಏ ಭಾರಿ ಈತ ಬಂಡ್ರಾಳು ಭಂಡಪೋ.
* ಏ ಅದೇನು ಪುಳ್ಳೆ ಗುಳೇದ ಜಾತ್ರ್ಯಾಗ ಜೋಗಮ್ಮ ನಡದಂಗಾಗತೈತಿ.
* ಕಣ್ಣಿದ್ದರೆ ಕೈಲಾಸ ನೋಡು, ಕಾಲು ಇದ್ದರೆ ಹಂಪಿನೋಡು.
* ಪಡೆದವರಿಗೆ ಫಲಪೂಜೆ, ಪಾಪಿಗೆ ಹಂಪಿ ಜಾತ್ರೆ.
* ಹಂಪಿಗೆ ಹರದಾರಿ ಕೊಂಪಿಗೆ ಸುಳಿದಾರಿ.

* ಕಲ್ಲಿದ್ದಲ್ಲಿ ಹಕ್ಕಿ ಇಲ್ಲ, ಹಂಪಿಯಲ್ಲಿ ಕಾಗೆ ಇಲ್ಲ.

* ಏ ಅವರಿದೇನು, ಹೊಳಗುಂದಿ ಗೌಡ್ರು ಸಂಪತ್ತಾ.

* ಕಂಬ್ರಚೇಡಿಗೆ ಸೂಜಿ ಕೊಂಡೊಯ್ದಂಗ.

* ಸೊನ್ನದಂತಹ ಊರಿಲ್ಲ ಸೊಲ್ಲಮ್ಮನಂತಹ ದೇವರಿಲ್ಲ.

* ಆಚಾರ ಹೇಳು ಬಾಚಿನಹಳ್ಳಿ ನೀತಿ ಹೇಳೋ ತಂಬ್ರಹಳ್ಳಿ.

* ತಾಳೂರಿಗೆ ತಿಳಿದವನೇ ಗೌಡ, ಊಳೂರಿಗೆ ಉಳಿದವನೇ ಗೌಡ.

* ಬಲ್ಲಂತವರಿಗೆ ಬಲ್ಲೂರು.

* ಮಂತ್ರಾಲಯದೊಳಗ, ಕಂತ್ರಿ ಕೆಲಸ ಮಾಡತಾರ.

* ಯಾಕಂಗ ಮಾಡತೀಯಲೆ ಕುಡ್ಲೂರು ಅಡಕ.

* ಬೆಂಗಳೂರಿಗೆ ಬಂದೋನೆ ಬಹದ್ದೂರ.

* ರಾಮೇಶ್ವರಕ್ಕೆ ಹೋದ್ರು ಶನೀಶ್ವರನ ಕಾಟ ತಪ್ಪಲಿಲ್ಲ.

* ಹಾಳೂರಿಗೆ ಉಳಿದವನೇ ಗೌಡ.

* ಕಿರುಗೂರಿಗೆ ಹೋದ್ರಂತೆ ಕಣಿ ಕೇಳೋಕೆ.

ನಾಡಿನಲ್ಲಿ ಪ್ರಚಲಿತವಿರುವ ಅನೇಕ ಗಾದೆಗಳು ಹಲವು ಸ್ಥಳನಾಮಗಳನ್ನೊಳಗೊಂಡಿವೆ. ಒಂದೊಂದು ಗಾದೆಯೂ ಕೂಡಾ ಒಂದೊಂದು ಸಂಸ್ಕೃತಿಯನ್ನು ತಿಳಿಯಲಿಕ್ಕೆ ಸಹಾಯಕವಾಗಬಲ್ಲವು. ಸಾಮಾನ್ಯವಾಗಿ ಹೆಚ್ಚು ಗಾದೆಗಳು, ಸ್ಥಳನಾಮಗಳ ವಾರ್ಗಿಕಗಳನ್ನು ಹೊಂದಿರುತ್ತವೆ. ಉದಾಹರಣೆಗೆ ಈ ಕೆಳಗಿನ ಗಾದೆಗಳನ್ನು ಗಮನಿಸಬಹುದು.

* ಊರಿಗಾದ ಗೌಡ, ಮೇಲೆರಗುವ ಗಿಡುಗ.

* ಊರಿಗೆ ಉಪಕಾರಿ, ಮನೆಗೆ ಹೆಮ್ಮಾರಿ.

* ಊರು ಸೇರಿದ ಮೇಲೆ, ದಾರಿ ತೀರಿತು.

* ಗ್ರಾಮದ ಶಾಂತಿಗೆ ತಳವಾರ ತಲೆ ಬೋಳಿಸಿಕೊಂಡ.

* ಊರಿಗೆ ದೊರೆ ಆದರೂ, ತಾಯಿಗೆ ಮಗನೆ.

* ಊರು ಗುದ್ದಲಿತಂದು ನಾಡ ಕಾವಲಿಕಾದ.

* ಒಳ್ಳೆಯವರ ಮಾನ, ಹಳ್ಳೀಲಿ ಹೋಯ್ತು.

* ಊರು ದೂರಾಯಿತು, ಕಾಡು ಹತ್ತಿರವಾಯಿತು.

* ಊರು ಬಾವಿಗೆ ಬಿದ್ದರೂ, ಊರ ಬಾಯಿಗೆ ಬೀಳಬಾರದು.

* ಊರು ಸುಟ್ಟರೂ ಹನುಮಂತರಾಯ ಹೊರಗೆ.

* ಊರು ಸೂರೆ ಹೋದ ಮೇಲೆ, ಕೋಟೆ ಬಾಗಿಲು ಹಾಕಿದರಂತೆ.

* ಕಂಕುಳಲ್ಲಿ ಮಗು ಇಟ್ಟಕೊಂಡು, ಊರೆಲ್ಲಾ ಹುಡುಕಿದರಂತೆ.

* ಹಳ್ಳಿ ದೇವರ ತಲೆ ಒಡೆದು, ದಿಲ್ಲಿ ದೇವರ ಹೊಟ್ಟೆ ಹೊರೆದ ಹಾಗೆ.

* ಅಂದಕ್ಕೆ ಆನೆಗುಂದಿ, ಚೆಂದಕ್ಕೆ ವಿಜಯನಗರ.

### ೫.೮.೫ ಒಗಟಿನಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳು

ಗ್ರಾಮಸ್ಥರು ಬದುಕಿನ ಜಂಜಾಟದಲ್ಲಿ ವಿನೋದರೂಪಿಯಾಗಿ, ಈ ಒಗಟುಗಳು ಕಾರ್ಯ ನಿರ್ವಹಿಸುತ್ತವೆ. ಒಗಟುಗಳು ಗ್ರಾಮೀಣ ಜನತೆಯ ಸೃಷ್ಟಿ, ಇದು ಹಳ್ಳಿಯ ಬಾಳಿನಲ್ಲಿ ಸಾರಿಗೆ ಹಾಕಿದ ಒಗ್ಗರಣೆ ಆದರೂ ಜೀವನವೇ ಅದರ ಕಾರ್ಯಕ್ಷೇತ್ರ. ಅದು ಜೀವನ ಪ್ರಕೃತಿಯಷ್ಟೇ ನಿಗೂಢ. ಜಗತ್ತಿನಾದ್ಯಂತ ಹರಡಿಕೊಂಡಿರುವ ಒಗಟುಗಳು ಜನಾಂಗ ಒಂದರ ಭಾಷೆ ಸಂಸ್ಕೃತಿ ಹಾಗೂ ಸಾಹಿತ್ಯಗಳ ಸಂಗಮವಾಗಿದೆ.

ಸಾಮಾನ್ಯ ಜನತೆಯ ಬುದ್ಧಿ–ವೈಭವ, ಹಾಸ್ಯಪ್ರಿಯತೆ, ಚತುರೋಕ್ತಿ, ವಿಡಂಬನಾ ಸ್ವಭಾವ, ಬೋಧನಾ ಮನೋಧರ್ಮ ಮತ್ತು ರಚನಾ ಸಾಮರ್ಥ್ಯಗಳನ್ನು ಅತ್ಯಂತ ವರ್ಣರಂಜಿತವಾಗಿ ಚಿತ್ರಿಸಲು ಯತ್ನಿಸುತ್ತದೆ. ಒಗಟು ಜನಪದ ಸಾಹಿತ್ಯದಲ್ಲಿ ಮಾತ್ರವಲ್ಲದೆ, ಭಾರತೀಯ ಸಂಸ್ಕೃತಿಯ ಪರಂಪರೆಯಲ್ಲಿ ಒಗಟಿಗೆ ವಿಶಿಷ್ಟ ಸ್ಥಾನವಿದೆ. ಮೂಲತಃ ಒಗಟುಗಳು ಜಾನಪದ ನಿರ್ಮಿತಿಯಾಗಿದ್ದರೂ, ವಿದ್ವತ್ ಕವಿಗಳು ಅವುಗಳ ರಚನೆಗೆ ಪ್ರಯತ್ನಿಸಿ, ರಾಜಮಹಾರಾಜರ ಸಭೆಗಳಲ್ಲಿ ಸವಾಲ್–ಜವಾಬ್ ರೀತಿಯ ಒಗಟುಗಳು ಈ ಪರಿಧಿಗೆ ಸೇರಬಹುದಾದರೂ ಸಾಮಾಜಿಕ ರಚನೆಗಳಾದ ಜನಪದ ಒಗಟುಗಳೇ ಉತ್ಕೃಷ್ಟವಾದವು.

'ಕುರಿತೋದದೆಯುಂ ಕಾವ್ಯಪ್ರಯೋಗ 'ಪರಿಣತಿಮತಿಗಳ್' ಎಂಬ ವ್ಯಾಖ್ಯಾನದಂತೆ, ನಮ್ಮ ಜನಪದರು ಓದದೇ ಇರಬಹುದು, ಮುಗ್ಧರಿರಬಹುದು, ಲೋಕಾನುಭವ ಸಾರವನ್ನು ಹೀರಿ ಕವಿತ್ವವನ್ನು ಮಾಡಬಲ್ಲವರಾಗಿದ್ದಾರೆ. ಉತ್ತಮ ಚಾರಿತ್ರ್ಯ, ಬೌದ್ಧಿಕ ಜಾಗೃತಿ, ಆಲೋಚನಾಶಕ್ತಿ, ತರ್ಕಸಾಮರ್ಥ್ಯ ಅವರಲ್ಲಿ ಅಧಿಕವಾಗಿದೆ. ಮುಗ್ಧರೆಂದಾಕ್ಷಣ ಗ್ರಾಮವಾಸಿಗಳು ಖಂಡಿತ ಮಂದ ಬುದ್ಧಿಯವರಲ್ಲ. ಅಕ್ಷರ ಬಲ್ಲವರಲ್ಲದಿದ್ದರೂ, ಅವರು ಅನುಭವ ತಜ್ಞರು. ಬದುಕಿನ ಜ್ಞಾನವನ್ನು ಸಂಪಾದಿಸಿಕೊಂಡ ವಿದ್ಯಾವಂತರು.

ಒಗಟಿಗೆ ಸಂವಾದಿಯಾಗಿ ಹಲವು ಪದಗಳು ಸಿಗುತ್ತವೆ. ಮುಂಡಿಗೆ, ಪ್ರಹೇಲಿಕಾ, ಪ್ರಶ್ನೆ, ವಿವಾದ ಬ್ರಹ್ಮೋಸ್ಯ, ಸವಾಲ್, ಒಡ್ಡು, ಒಡಬು, ಒಡಗು, ಒಡಚು, ಒಡಪು, ಒಡೆ–ಬಿಡಿಸು ಇತ್ಯಾದಿ ಒಗಟುಗಳಿಗೆ ಒಮ್ಮೊಮ್ಮೆ ಒಂದೇ ಒಗಟಿಗೆ ಒಂದೇ ಅರ್ಥವಿರುವುದಿಲ್ಲ. ದ್ವಂದಾರ್ಥ

ಹಾಗೂ ಅನೇಕ ಅರ್ಥಗಳಿರುವ ಸಾಧ್ಯತೆಯಿದೆ. ಇವುಗಳಲ್ಲಿ ಪ್ರತಿಯೊಂದು ಭಿನ್ನಭಿನ್ನ ಒಗಟಿನ ಸಂಪ್ರದಾಯಗಳನ್ನು ಹೇಳುವಂತೆ ಕಾಣುತ್ತದೆ. ಇಂಗ್ಲಿಷ್‌ನಲ್ಲಿ ಇದಕ್ಕೆ 'Riddle' ಎನ್ನುತ್ತಾರೆ. ಇದು Readon ಪದದಿಂದ ಬಂದಿದ್ದು, ಇದರ ಅರ್ಥ 'to give adviced' ಎಂದು ವಾಕ್ ಸಂಪ್ರದಾಯದ ಪ್ರಕಾರಗಳಲ್ಲಿ ಜನಸಾಮಾನ್ಯರ ಊಹನಾ ಶಕ್ತಿಯ ಪ್ರತಿಬಿಂಬ. ಸಮಸ್ಯೆಯೊಂದು ಇದ್ದು, ಸುಲಭವಾಗಿ ಬಿಡಿಸಲಾರದ ರೀತಿಯಲ್ಲಿ ಸಂಯೋಜಿತವಾಗಿ ಹೆಣೆದುಕೊಂಡಿರುತ್ತದೆ.

ಇವುಗಳಲ್ಲಿ ಆಚರಣೆಗೆ ಸಂಬಂಧಿಸಿದ ಒಗಟುಗಳು ಮತ್ತು ವಿನೋದಪರ ಒಗಟುಗಳೆಂದು ಎರಡು ರೀತಿಯಲ್ಲಿ ಒಡೆಯುತ್ತವೆ. ಆಚರಣೆಗೆ ಸಂಬಂಧಿಸಿದ ಒಗಟುಗಳು ಗಾಢಾಕಾರವೂ, ಆಳವೂ ಆಗಿದ್ದು, ಒಂದು ಗುಂಪಿನ, ನಂಬಿಕೆ, ಧರ್ಮ, ಆಚರಣೆಗಳನ್ನು ತಮ್ಮ ಮೂಲಕ ಪ್ರಕಟಿಸುತ್ತವೆ.

ಇಲ್ಲಿ ಒಗಟುಗಳಲ್ಲಿ ಬರುವ ವ್ಯಕ್ತಿ ಮತ್ತು ಸ್ಥಳನಾಮಗಳನ್ನು ಮಾತ್ರ ಗುರುತಿಸಲು ಸಾಧ್ಯವಾಗಿದೆ ಅವುಗಳು ಹೀಗಿವೆ.

**ಒಗಟಿನಲ್ಲಿ ವ್ಯಕ್ತಿನಾಮಗಳು**

ಹಾರಿದರೆ ಹನುಮಂತ
ಕೂಗಿದರೆ ರಾವಣ
ಕುಳಿತಲ್ಲಿ ಮುನಿ – ಕಪ್ಪೆ (ವಕ್ತೃ: ದೊಡ್ಡ ಪಾಲಯ್ಯ, ೮೦, ಸೂಲದಹಳ್ಳಿ)

ಈ ಮೇಲಿನ ಒಗಟಿನಲ್ಲಿ ಕಪ್ಪೆಗಿರುವ ಕೆಲವು ಲಕ್ಷಣಗಳನ್ನು ಹನುಮಂತ, ರಾವಣರಿಗೆ ಹೋಲಿಸಿದ್ದಾರೆ. ಹನುಮಂತನು ಹಾರುವುದರಲ್ಲಿ ನಿಸ್ಸೀಮ. ಸಮುದ್ರವನ್ನೇ ದಾಟಿದಂತಹ ಭೂಪ. ಕಪ್ಪೆ ಹಾರುವ ರೀತಿಯನ್ನು ಹನುಮಂತನಿಗೆ ಹೋಲಿಸಿದ್ದಾರೆ. ಹಾಗೆಯೇ ರಾವಣನ ಧ್ವನಿಯಂತೆ ಇರುವುದೆಂದು, ನಮ್ಮ ಜನಪದರಿಗೆ ಅನಿಸಿದೆಯಾದ್ದರಿಂದ ಈ ಮೇಲಿನ ಒಗಟನ್ನು ಕಟ್ಟಿದ್ದಾರೆ.

ಮನೆ ಮನೆಯ ದೀಪ
ಈ ರಾಯ ಭೂಪ
ಯಾರಪ್ಪ–ಹೇಳಪ್ಪ?
ಶ್ರೀಕೃಷ್ಣರಾಯ ಬೂಪ
ಮನೆ ಮನೆಯ ದೀಪ (ವಕ್ತೃ: ರಾಮಸ್ವಾಮಿ, ೬೦, ಕಮಲಾಪುರ)

ಐತಿಹಾಸಿಕವಾಗಿ ಅನೇಕ ಒಗಟುಗಳು ಉದಯಿಸಿರುತ್ತವೆ. ಅವುಗಳಲ್ಲಿ ಇದೂ ಒಂದು. ಚರಿತ್ರೆಯಲ್ಲಿ ಹೆಸರು ಮಾಡಿರುವ ಜನಾನುರಾಗಿ, ಶ್ರೀ ಕೃಷ್ಣದೇವರಾಯನನ್ನು ಕುರಿತ ಒಗಟು ಈ ಮೇಲಿನಂತಿದೆ. ಆತ ಜನಸಾಮಾನ್ಯರಿಗೆ ಮಾಡಿರುವ ಕೆಲಸ ಕಾರ್ಯಗಳನ್ನು ನಮ್ಮ ಜನಪದರು ತಾವು ಕಟ್ಟಿರುವ ಒಗಟಿನಲ್ಲಿ ಆತನಿಗೆ ಗೌರವ ಸಲ್ಲಿಸಿದ್ದಾರೆ. ಇದು ಒಗಟೂ ಹೌದು, ಗಾದೆಯೂ ಹೌದು.

ಕಪ್ಪಾಗಿದೆ ಕಾಗೆಯಲ್ಲ ಉದ್ದವಾಗಿದೆ ಸರ್ಪವಲ್ಲ
ಹೂಗಳನ್ನಿಡುತ್ತಾರೆ ಅದರ ಮೇಲೆ ಅದು ದೇವರಲ್ಲ
ಎಣ್ಣೆ ಹುಯ್ಯುತ್ತಾರೆ ಮಾರಮ್ಮನಲ್ಲ – ತಲೆಕೂದಲು ಮತ್ತು ಜಡೆ

ಈ ಮೇಲಿನ ಒಗಟಿನಲ್ಲಿ ಮಾರಮ್ಮನನ್ನು ಹೆಸರಿಸಿದ್ದಾರೆ.

ಮಣಿ ಮಣಿದಾರ ಮಣಿ ಶೃಂಗಾರ
ಎಲ್ಲಿಗೋಗಿದ್ದೆ ರಾಜಕುಮಾರ
ಅವ್ರು ಆಡ್ತಾ ಇದ್ರು
ನಾನು ನೋಡ್ತಾ ಇದ್ದೆ
ಅವ್ರು ಅಳ್ತಾ ಹೋದ್ರು
ನಾನು ನಗ್ತಾ ಬಂದೆ – ಚೇಳು (ವಕ್ತೃ: ಮೂಗಪ್ಪ, ೫೮, ಗುಣಸಾಗರ)

ಅಪಾಯಕಾರಿಯಾದ ಈ ಜಂತುವನ್ನು ಶೃಂಗಾರಮಯವಾಗಿ ವರ್ಣಿಸಿರುವ ನಮ್ಮ ಜನಪದ ಕವಿಯ ಸೌಜನ್ಯ ಶ್ಲಾಘನೀಯ ಇಲ್ಲಿ ಚೇಳನ್ನು ರಾಜಕುಮಾರನಿಗೆ ಹೋಲಿಸಲಾಗಿದೆ.

ಮನೆ ಮೇಲೆ ಮನೆ ಕಟ್ಟಿ
ಮಾಸ್ತಮ್ಮನ ಗುಡಿ ಕಟ್ಟಿ
ಕೊನೆ ಮೇಲೆ ಕುಂತವ್ನೆ
ಕೊಮಾರಸೆಟ್ಟಿ – ಕಡಜ (ವಕ್ತೃ: ದುರುಗಪ್ಪ, ೬೧, ಮೋಕ)

ಈ ಕಡಜ ಮಣ್ಣಿನಿಂದ ಕಟ್ಟುವ ಗೂಡು ಅದರ ಯಜಮಾನಿಕೆಯ ಚಿತ್ರಣ ಯಥಾವತ್ತಾಗಿದೆ. ಆದರೆ ಇದು ಕಚ್ಚಿದರೆ 'ಗಂದೆ' ಬರುತ್ತದೆ ಉರಿ ಉಂಟಾಗುತ್ತದೆ. ಇಲ್ಲಿ ದೇವತೆಯಾದ ಮಾಸ್ತಮ್ಮ ಮತ್ತು ಕೊಮಾರಸೆಟ್ಟಿ ಹೆಸರುಗಳು ಕಡಜದ ಮೂಲಕ ಪ್ರಸ್ತಾಪಗೊಂಡಿವೆ.

ಚಿಪ್ಪುಂಟು ಆಮೆಯಲ್ಲ, ಜುಟ್ಟುಂಟು ಪೂಜಾರಿಯಲ್ಲ
ಮೂರು ಕಣ್ಣುಗಳುಂಟು ಮುಕ್ಕಣ್ಣನಲ್ಲ – ತೆಂಗಿನಕಾಯಿ

ಇಲ್ಲಿ ಮೂರ್ ಕಣ್ಣಿನ ಮುಕ್ಕಣ್ಣ ಪ್ರಸ್ತಾಪಗೊಂಡಿದ್ದಾನೆ.

ಆಕಾಶದಲ್ಲಿ ಹಾರುವುದು ಪಕ್ಷಿಯಲ್ಲ
ಬಾಲವಿಹುದು ಹನುಮಂತನಲ್ಲ
ಬಿಲ್ಲು ಬಾಣಗಳುಂಟು ಬೇಡನಲ್ಲ
ಸೂತ್ರಗಳುಂಟು ಕೀಲು ಗೊಂಬೆಯಲ್ಲ –ಗಾಳಿಪಟ (ವಕ್ತೃ: ಬೋರಯ್ಯ, ೬೫, ಚಿರತಗುಂಡ)

ಗಾಳಿಪಟ ಎನ್ನುವ ಉತ್ತರಕ್ಕೆ ವಿವರ ತುಂಬ ಸಮರ್ಥವಾಗಿದ್ದು, ಊಹೆಗೆ ನಿಲುಕುವಂಥದ್ದಾಗಿದೆ. ಪಟಗಳ ಅನೇಕ ವಿಧಗಳಿವೆ. ಆದರೆ ಈ ಪಟಕ್ಕೆ ಹೇಳಿರುವ ನಿರ್ದೇಶನದಲ್ಲಿನ ವಿಶೇಷತೆಗೆ 'ಕನಕ ಪಟ' ಉತ್ತರ ಗ್ರಾಮೀಣ ಜನತೆಯ ಬಾಯಲ್ಲಿ ಮೀನುಪಟ, ಪೆಟ್ಟಿಗೆ ಪಟ, ಎಂಟುಮೂಲೆ ಗಂಟಿ,

ಗುಂಡ್ಕಲ್ ಪಟ ಇತ್ಯಾದಿ ವಿಶೇಷಣ ಪಡೆದ ರೂಪಗಳುಂಟು. ಇಲ್ಲಿ ಹನುಮಂತ ಮತ್ತೊಮ್ಮೆ ಪ್ರಸ್ತಾಪಗೊಂಡಿದ್ದಾನೆ.

ಹಗಲು ಹಾಳುದೋಟ
ರಾತ್ರಿ ಹೂದೋಟ
ಹೂವ ನೋಡುವವರುಂಟು
ಮುಡಿಯುವರಿಲ್ಲ – ಸೂರ್ಯ, ಆಕಾಶ, ನಕ್ಷತ್ರ

ಇಲ್ಲಿ ಸೂರ್ಯ, ಆಕಾಶ, ನಕ್ಷತ್ರದ ಹೆಸರುಗಳು ಪ್ರತಿನಿಧಿಸಿವೆ.

ಉತ್ತರ ಕರ್ನಾಟಕದಲ್ಲಿ ಹಾಡಿನ ರೂಪದಲ್ಲಿ ಕೆಲವು ಒಗಟುಗಳು ಇರುವುದನ್ನು ಕಾಣುತ್ತೇವೆ. ಇದರಲ್ಲಿ ಒಬ್ಬ ವ್ಯಕ್ತಿ ಒಗಟನ್ನು ಹಾಕುತ್ತಾನೆ. ಅದಕ್ಕೆ ಇನ್ನೊಬ್ಬ ವ್ಯಕ್ತಿ ಅದಕ್ಕುತ್ತರವಾದ ಆ ಒಗಟನ್ನು ಬಿಡಿಸುತ್ತಾನೆ ಹೀಗೆ ಅನೇಕ ಒಗಟುಗಳನ್ನು ಒಂದೇ ಹಾಡಿನಲ್ಲಿ ವ್ಯಕ್ತವಾಗಿರುವುದನ್ನು ನಾವು ಗಮನಿಸಬಹುದು. ಉದಾ.

ಒಂಟಿ ಕಾಲಿರುವುದು ಮಂಟಪ ಸುತ್ತುವುದು
ಶಂಭೋ ಶಂಕರನ ವರವಿಲಿ ಬೆಳೆಯುವುದು
ನಾರೀ ನೀ ಬಲ್ಲರೇಶ
ಪೋರಿ ನೀ ತಿಳಿದರೇಳ

ಒಂಟಿ ಕಾಲಿರುವುದು ಮಂಟಪ ಸುತ್ತುವುದು
ಶಂಭೋ ಶಂಕರನ ವರವಿಲಿ ಬೆಳೆಯುವುದು
ಜೋಳದ ದಂಟು ಅಲ್ಲೇನ ಶಂಕರಲಿಂಗ
ಜೋಳದ ದಂಟು ಅಲ್ಲೇನ

ಎರಡು ಕಾಲಿರುವುದು ಒಣಮರ ಸುತ್ತುವುದು
ತಂಗಿ ಮಕ್ಕಳನ ಅಂಗಳಕೆ ತರುವುದು
ನಾರಿ ನೀ ಬಲ್ಲರೇಳ
ಪೋರಿ ನೀ ತಿಳಿದರೇಳ

ಎರಡು ಕಾಲಿರುವುದು ಒಣಮರ ಸುತ್ತುವುದು
ತಂಗಿ ಮಕ್ಕಳನ ಅಂಗಳಕ ತರುವುದು
ಕೋಳಿಯ ಮರಿ ಅಲ್ಲೇನ ಶಂಕರಲಿಂಗ
ಕೋಳಿಯ ಮರಿ ಅಲ್ಲೇನ.

ಕೆಸರಲ್ಲಿ ಹುಟ್ಟೋದು ಕೆಸರಲ್ಲಿ ಬೆಳೆಯೋದು
ಅದು ಒಂದು ಗಿಡದ ಪರಿಕಾರ ಎಲೆಬಾಲೆ
ಬೆಲೆ ನಮ್ಮರ್ಥ ಒಡದೇಳ
ಪೋರಿ ಈ ಅರ್ಥ ತಿಳಿದೇಳ

ನಿಮ್ಮ ಅರ್ಥವು ನಮಗೆ ತಿಳಿಯಾವು ತಿಳಿಯಾವು
ನೀವಾಡಿದ ಮಾತು ಹುಸಿಯಲ್ಲ–ಮಾಶಿವನೆ
ತಾವರೆ ಬೇರು ಅಲ್ಲವೇನು ಅರಸರೆ
ತಾವರೆ ಬೇರು ಅಲ್ಲೇನು.

ಮುಂಜಾನೆ ಏಳೋದು ನೆಲನೆಕ್ಕಿ ನಿಲ್ಲೋದು
ನಾರಿಯರ ಕೈಯಾಗ ಕುಣಿಕುಣಿದಾಡುವದು
ನಾರಿ ಈ ಅರ್ಥ ತಿಳಿದೇಳ
ಪೋರಿ ನಮ್ಮರ್ಥ ಒಡದೇಳ

ಮುಂಜಾನೆ ಏಳೋದು ನೆಲಕಕ್ಕಿ ನಿಲ್ಲೋದು
ನಾರಿಯರ ಕೈಯಾಗ ಕುಣಿ ಕುಣಿದಾಡುವುದು
ಕಸಬರಿಗೆ ಅಲ್ಲೇನು ಅರಸರೆ
ಕಸಬರಿಗೆ ಅಲ್ಲೇನು ಅರಸರೆ

ನೀರಲ್ಲೆ ಹುಟ್ಟೋದು ನೀರಲ್ಲೆ ಬೆಳೆಯೋದು
ನೀರು ತಾಗಿದರೆ ಮಟಮಾಯ ಕನ್ನಡದ
ಬೆಡಗಿನ ಜಾಣೆ ತಿಳಿದೇಳ

ಕನ್ನಡ ಹೇಳಲಿಕೆ ಇನ್ನಾವ ಸೋಜಿಗವು
ಪನ್ನಂಗಧರನಾ ಶಿವಬಲ್ಲ ತಿನ್ನುವ
ಉಪ್ಪಲ್ಲವೇನು ಅರಸರೆ

ಆಕಾಶಕೆದುರಾಗಿ ಬಾಯಿ ತೆಗೆದಿಹುದು
ಜೋಕೆಯರಿತುಣ್ಣದೇ ಹೊರಗೆ ಹಾಕುವುದು
ಬಾಲೆಯರ ಕೈಯಲ್ಲಿ ತೊಳಸಿ ಕೊಂಬುದು
ಸೃಷ್ಟಿಯಲಿ ಜಾಣರಿದ ತಿಳಿದು ಹೇಳುವುದು
ನೀನು ಹೇಳಿದ ಬೆಡಗು ಒರಳು ಕಾಣಣ್ಣಾ
ನಾನೊಂದ ಬೆಡಗ ಹೇಳುವೆನು ಕೇಳಣ್ಣಾ

ಅಂಬರದಲಾಡುವುದು ಪಕ್ಷಿ ತಾನಲ್ಲ
ಅಂಬಲೆಯನುಣ್ಣುವುದು ಶಿಶುವು ತಾನಲ್ಲ
ಕೊಂಬು ಬಾಲಗಳುಂಟು ಕೈಕಾಲು ಇಲ್ಲ
ಇಂಬರಿದು ಹೇಳುವುದು ಜಾಣರಿದನೆಲ್ಲ
ನೀನು ಹೇಳಿದ ಬೆಡಗು ಗಾಳಿಪಟವಣ್ಣಾ
ನಾನೊಂದು ಬೆಡಗು ಹೇಳುವೆನು ಕೇಳಣ್ಣಾ (ವಕ್ತೃ: ಉಡುಸಲಮ್ಮ, ೬೨, ಹೊಸಗರಗ)

ಹೀಗೆ ಇಬ್ಬರು ವ್ಯಕ್ತಿಗಳು ಇಡೀ ಹಾಡಿನ ಉದ್ದಕ್ಕೂ ಒಗಟುಗಳನ್ನು ಹಾಕಿ ಅದಕ್ಕೆ ಉತ್ತರವನ್ನು ಕೊಡುತ್ತಾರೆ. ಇಲ್ಲಿ ಶಂಭೋಶಂಕರ, ಪನ್ನಂಗಧರಶಿವ ಹೆಸರುಗಳು ಉಕ್ತಗೊಂಡಿರುವುದನ್ನು ನೋಡುತ್ತೇವೆ.

**ಒಗಟಿನಲ್ಲಿ ಸ್ಥಳನಾಮಗಳು**

ಒಗಟುಗಳಲ್ಲಿ ಭಾಷೆ, ಭಾವನೆ, ಜನರು ವಾಸಿಸುವ ನೆಲೆಗಳು, ಊಟ, ಉಪಚಾರ, ನಡೆವಳಿಕೆ, ಆಚಾರ–ವಿಚಾರ, ಕಲೆ–ಸಾಹಿತ್ಯ, ಸಂಸ್ಕಾರ, ದೃಷ್ಟಿಧೋರಣೆಗಳೆಲ್ಲ ಇರುತ್ತವೆ. ಅನೇಕ ವಸ್ತು ವೈವಿಧ್ಯವನ್ನು ಹೊಂದಿದ ಒಗಟುಗಳಲ್ಲಿ ಸ್ಥಳನಾಮಗಳು ನಿರೂಪಿತವಾಗಿವೆ. ಅಂತಹ ಕೆಲವೊಂದು ಮಾದರಿಗಳನ್ನು ನಾವು ಈ ಕೆಳಕಂಡಂತೆ ನೋಡಬಹುದಾಗಿದೆ.

ಕಲ್ಲುಕೋಳಿ ಕೂಗಬೇಕು ಕೇಳಿರಣ್ಣಾ
ಮುಲ್ಲಾ ಚೂರಿ ಹಾಕಬೇಕು ಕೇಳಿರಣ್ಣಾ
ಹಂಪಿಗೋಪುರದ ಮ್ಯಾಲ
ಗುಬ್ಬಿಕುಂತ ನೀರು ಕುಡಿಯಬೇಕು ಕೇಳಿರಣ್ಣಾ
ಮೂರು ಕಾಲಿನ ಮನುಷ್ಯ ಬಂದಾನು ನೋಡಿರಣ್ಣಾ
ಆರು ಕಾಲಿನ ಹಕ್ಕಿ ನಡೆದೀತು ಕಾಣಿರಣ್ಣಾ
ಉಳ್ಳವರ ಹೊಟ್ಟೆ ಎಳ್ಡಾದೀತು ಕೇಳಿರಣ್ಣಾ
ನೀರಾಗ ದೀಪ ಉರದೀತು ನೋಡಿರಣ್ಣಾ.... (ವಕ್ತೃ: ತಿರುಕಪ್ಪ, ೫೮, ಕಮಲಾಪುರ)

ಸ್ಪರ್ಧಾತ್ಮಕವಾಗಿಯೇ ಒಗಟುಗಳು ತನ್ನ ಗರ್ಭದಲ್ಲಿ ಅಡಗಿಸಿಕೊಂಡ ವಸ್ತುವೈವಿಧ್ಯವನ್ನು ಅನಾವರಣ ಗೊಳಿಸುತ್ತವೆ. ಈ ಮೇಲಿನಂತಹ ಶಕುನದ ಒಗಟುಗಳೂ ಕೂಡ ನಂಬುವ ಜನರನ್ನು ಮಂತ್ರಮುಗ್ಧರನ್ನಾಗಿಸುತ್ತವೆ. ನೆಲ ಮುಗಿಲಿನ ಸಂಬಂಧ ಜೋಡಿಸುವ ಅರ್ಥ ವಿಸ್ತಾರವನ್ನು ಹೊಂದಿದವುಗಳು. ಭೂತ ವರ್ತಮಾನ ಕಾಲದ ನಿಜಸಂಗತಿ ಮೇಲೆ ಭವಿಷ್ಯದ ಅಮೂರ್ತ ಸಂಗತಿಯನ್ನು ಧ್ವನಿ ಸಂದರ್ಭದಲ್ಲಿ ಕಾವ್ಯ ಮಾರ್ಗವನ್ನೇ ಅನುಸರಿಸುತ್ತವೆ. ಅನಿರೀಕ್ಷಿತ ಅದ್ಭುತ ಘಟನಾವಳಿಗಳನ್ನು ಕಣ್ಣೆದುರು ಕಟ್ಟುತ್ತವೆ. ಒಟ್ಟಿನಲ್ಲಿ ಮನಸ್ಸಿನ ಮೇಲೆ ಅಚ್ಚಳಿಯದ ಪ್ರಭಾವ ಮುದ್ರೆಯೊತ್ತುವ ತಾಕತ್ತು ಶಕುನದ ಒಗಟುಗಳು ತಮ್ಮದಾಗಿಸಿಕೊಂಡಿವೆ. ಕೊರವಂಜಿ ಕಣಿ ಹೇಳುವುದು,

ಬುಡಬುಡಕಿಯವರು ಹಕ್ಕಿಯ ಶಕುನದ ಝೂವ ಕಟ್ಟುವುದು, ಕರಪಾಲ ಮೇಳದವರು ಸಾಂಕೇತಿಕ ನುಡಿಗಟ್ಟುಗಳನ್ನು ಹಾಡುವುದು, ಭವಿಷ್ಯದ ಬಗ್ಗೆ ಪದಕಟ್ಟಿ ಸಾರಿ ಹೇಳುವುದು, ಹಸ್ತಮುದ್ರಿಕೆ ಇಲ್ಲವೇ ಮುಖನೋಡಿ ಭವಿಷ್ಯ ಹೇಳುವುದು ಇತ್ಯಾದಿಯಾಗಿ ಅನೇಕ ಬಗೆಯುಂಟು. ಈ ಮೇಲಿನ ಒಗಟಿನಲ್ಲಿ ಹಂಪಿಯ ಭವಿಷತ್ ಅನ್ನು ಕುರಿತು ಕಟ್ಟಲಾಗಿದೆ.

* **ಅಲ್ಲಿ ಪಳಪಳ, ಇಲ್ಲಿ ಪಳಪಳ, ಕಲ್ಯಾಣದ ತನಕ ಪಳಪಳ**: ಕುರಿ ಹಿಕ್ಕಿಯಲ್ಲಿ ಲಿಂಗ ಕಂಡುದುದರ ಕುರಿತು ಈ ಒಗಟು ನಿರ್ದೇಶಿಸುತ್ತದೆ. ಇಲ್ಲಿ ಕಲ್ಯಾಣದ ತನಕ ಎಂಬ ಸ್ಥಳನಾಮ (ಪದ) ಶರಣರನ್ನು ನೆನಪು ಮಾಡುವ ಮೂಲಕ ಜನಪದರು ಆ ಗ್ರಾಮಕ್ಕೆ ನೀಡಿದ ಮಹತ್ವ ಮತ್ತು ಶರಣರ ಗ್ರಾಮದಲ್ಲಿ ಕ್ರಾಂತಿಯಾದದ್ದನ್ನು ಪ್ರತ್ಯೇಕವಾಗಿ 'ಪಳಪಳ' ಎಂಬ ಪದ ಸೂಚಿಸುತ್ತದೆ. ಸಾಮಾಜಿಕವಾಗಿ 'ಕಲ್ಯಾಣ' ನಗರದ ಕ್ರಾಂತಿ, ಅಂದು ಪಡೆದಿದ್ದ ಖ್ಯಾತಿಯನ್ನು, ಮೌಖಿಕ ಪರಂಪರೆ ದಾಖಲಿಸಿಕೊಂಡು ಮುಂದುವರಿದಿದೆ. ಈ ಒಗಟು ಹೊಸಪೇಟೆಯ ಸುತ್ತಮುತ್ತ ಪ್ರಚಲಿತದಲ್ಲಿದೆ.

ಅಡ್ಡ ಅಡ್ಡ ಆಲದ ಮರ
ಮರದ ಮ್ಯಾಲೆ ಕಂಚೀಪುರ
ಪುರದ ಮ್ಯಾಲೆ ಮಲ್ಲಿಗೆ ರಾಶಿ
ರಾಶಿ ಮ್ಯಾಲೆ ಐದು ಜನ ಆಡ್ತಾರೆ
ಇಬ್ಬರು ನೋಡ್ತಾರೆ – ತವಟಿಗೆ ಕಂಚಿನ ತಟ್ಟೆ, ಅನ್ನ, ಕೈಬೆರಳು, ಕಣ್ಣು

ಇಲ್ಲಿ ಕಂಚೀಪುರವನ್ನು ಪ್ರಸ್ತಾಪಿಸಿದ್ದಾರೆ.

ನಮ್ಮ ಜನಪದರು ಊಟ ಮಾಡುವ ಶಿಸ್ತಿನಕ್ರಮ ಒಂದಿದೆ. ತವಟಿಗೆ ಎಂದರೆ ಮರದಿಂದ ವೃತ್ತಾಕಾರವಾದ ಹಲಗೆಗೆ (ನೆಲದಲ್ಲಿ) ಕುಳಿತು ಊಟಮಾಡುವ ಎತ್ತರದಲ್ಲಿ ಮೂರು ಕಾಲುಗಳ ಮೇಲೆ ವಿನ್ಯಾಸಗೊಂಡಿರುತ್ತದೆ. ಕಾರಣ, ನೆಲದ ಮೇಲೆ ತಟ್ಟೆ ಇಟ್ಟು ಊಟ ಮಾಡುವುದರಿಂದ ನೆಲದ ಮೇಲಿನ ಸಣ್ಣ ಸಣ್ಣ ಧೂಳು ತಟ್ಟೆಗೆ ಸುಲಭವಾಗಿ ಹಾರಿ ಬೀಳುತ್ತದೆ. ಊಟ ಕಲುಷಿತವಾಗುತ್ತದೆ ಎಂದು ಅನ್ನವನ್ನು ಮಲ್ಲಿಗೆ ಹೂವಿಗೆ ಹೋಲಿಸಿರುವ ಮಧುರ ಮೃದು ಕಲ್ಪನೆ ಐದು ಬೆರಳು ಕಲಿಸುವುದನ್ನು ಕ್ರಮವಾಗಿ ಊಟ ಮಾಡುವುದನ್ನು ಎರಡು ಕಣ್ಣು ನೋಡುತ್ತಿರುತ್ತವೆ ಎಂದು ಈ ಒಗಟು ಪ್ರಸ್ತಾಪಿಸುತ್ತದೆ.

### ೫.೮.೬. ಒಡಪುಗಳಲ್ಲಿ ವ್ಯಕ್ತಿನಾಮಗಳು

ಒಡಪುಗಳು, ಒಗಟುಗಳಿಗಿಂತ ಭಿನ್ನವಾದವುಗಳು. ಒಡಪುಗಳು ನಿರ್ದಿಷ್ಟ ಸಂಪ್ರದಾಯಗಳ ಸಂದರ್ಭದಲ್ಲಿ ಮಾತ್ರ ಬಳಕೆಯಾಗುವಂತಹುಗಳು. ವಿಶೇಷವಾಗಿ ಮದುವೆ ಸಂದರ್ಭಗಳಲ್ಲಿ ಗಂಡನ ಹೆಸರು ಹೇಳುವಾಗ, ಹೆಣ್ಣು ಪುಷ್ಪವತಿಯಾದಾಗ, ಮಗುವಿಗೆ ನಾಮಕರಣ ಮಾಡುವಾಗ ಇವುಗಳನ್ನು ಬಳಸುವುದುಂಟು.

ಒಡಪಿನ ಸಂದರ್ಭ ಜೀವನದ ಬಹುಮುಖ್ಯವಾದ ಘಟ್ಟವೆಂದರೆ ಮದುವೆ. ಆ ಸಂದರ್ಭದಲ್ಲಿ ಎಲ್ಲ ಕಡೆಯಿಂದಲೂ, ಕಳ್ಳುಬಳ್ಳಿಯೆಲ್ಲ ಸೇರಿರುತ್ತಾರೆ. ಮೊದಲು ಶಾಸ್ತ್ರದ ರಾತ್ರಿ (ಮದಲಿಂಗ ಶಾಸ್ತ್ರ) ವಧು–ವರರ ಅರಿಸಿಣಶಾಸ್ತ್ರ ಇರುತ್ತದೆ. ಮದಲಿಂಗ–ಮದುವಣಗಿತ್ತಿ ಇಬ್ಬರೂ ಒಬ್ಬರ ಕೆನ್ನೆಗೊಬ್ಬರು ಅರಿಸಿನ ಹಚ್ಚುವ ಶಾಸ್ತ್ರ ಮಾಡುತ್ತಾರೆ. ಆಗ ಹಸೆಮಣೆಯ ಮೇಲೆ ಕುಳಿತವರಿಗೆ ಮುತ್ತೈದೆಯರು, ಯಜಮಾನರು, ಅಕ್ಕಿಯ ಸೇಸೆ ಇಕ್ಕುತ್ತಾರೆ. ಆಗ ಮುಂದೆ ಕುಳಿತವರು ಆ ಹಿರಿಯ ಹೆಣ್ಣಿನ ಸೆರಗು ಹಿಡಿದು 'ನಿನ್ನ ಗಂಡನ ಹೆಸರು ಹೇಳು? ಎನ್ನುತ್ತಾರೆ. ತುಂಬಿದ ಮುತ್ತೈದೆಯಾಗಿ ವಯಸ್ಸು ಕಳೆದಿದ್ದರೂ ಆಕೆಗೆ ಸ್ತ್ರೀ ಸಹಜವಾದ ನಾಚಿಕೆ ಇನ್ನೂ ಬಿಟ್ಟಿಲ್ಲವಾದ್ದರಿಂದ, ಆಕೆ ಗಂಡನ ಹೆಸರೇಳಲು ಸಂಕೋಚಪಡುತ್ತಾಳೆ. ಜೊತೆಗೆ ಹೆಂಡತಿಯಾದವಳು ಗಂಡನ ಹೆಸರನ್ನು ಹೇಳಲು ನಾಚಿಕೆ ಪಟ್ಟ ಹೆಣ್ಣು ಸುತ್ತಿ ಬಳಸಿ, ಶೃಂಗಾರ ಬೆರಸಿ, ಹೆಸರನ್ನು ಒಡಪಿನ ಮೂಲಕ ಹೇಳುತ್ತಾಳೆ.

ಬಳ್ಳಾರಿ ಪರಿಸರದ ಒಡಪಿನಲ್ಲಿ ವ್ಯಕ್ತಿನಾಮಗಳಿರುವುದನ್ನು ಮಾದರಿಗಾಗಿ ಇಲ್ಲಿ ನೋಡಬಹುದಾಗಿದೆ.

ಬಾಗಿಲದಾಗ ನಿಂತಾರ
ಬಾಳಿಗೊನಿ ಹಿಡಿದಾರ
ಮುತ್ತಿನ್ಯಾಗ ಮನಿಗ್ಯಾರ
ಜಾಜಿ ಮಲ್ಲಿಗ್ಯಾಗ
ಜೂಜ ಆಡತಾರ ತಿಮ್ಮಪ್ಪನೋರು (ವಕ್ತೃ: ಶಾಂತಮ್ಮ, ೫೨, ಹೊಸಗರಗ)

ನಂತರ ಗಂಡಸಿನ ಸರದಿ ಬಂದಾಗ, ಆರತಿ ಬೆಳಗುವ ಸಂದರ್ಭದಲ್ಲಿ, ಅಲ್ಲಿ ಕುಳಿತಿದ್ದವರು ಕಳಸ ಇಡುವ ಮಣಿಯನ್ನು ತೆಗೆದುಕೊಂಡು ಸುಮ್ಮನೆ ಕೂತಿರುತ್ತಾರೆ. ಕಳಸ ಬೆಳಗಿದ ಮೇಲೆ ಇಡಲಿಕ್ಕೆ ಮಣಿ ಹುಡುಕುತ್ತಾನೆ ಸಿಗುವುದಿಲ್ಲ. ಆಗ ಸುತ್ತಲೂ ನೋಡುತ್ತಾನೆ 'ನಿನ್ನ ಹೆಂಡತಿ ಹೆಸರೇಳು' ಮಣಿ ಕೊಡುತ್ತೇವೆ ಎನ್ನುತ್ತಾರೆ. ಆಗ ಅಲ್ಲಿದ್ದ ಸ್ತ್ರೀಯರೆಲ್ಲರೂ ಗೊಳ್ ಎಂದು ನಗಲು ಪ್ರಾರಂಭಿಸುತ್ತಾರೆ. ಹೆಂಗಸಿನಷ್ಟು ಬಿಂಕ, ವಯ್ಯಾರದಿಂದ ಒಡಪು ಹೇಳಲಿಕ್ಕೆ ಬರದಿದ್ದರೂ ಹೇಳುತ್ತಾನೆ.

ಸಂಪಿಗೆ ಹೂ ಮುಡಕೊಂಡು
ಕೆಂಪು ಬಣ್ಣ ಹಾಕ್ಕೊಂಡು
ಮಿಂಚಿನಂತೆ ಕುಂತವಳೆ ಮಲ್ಲಿ (ಮಲ್ಲಕ್ಕ) (ವಕ್ತೃ: ಚಂದ್ರಪ್ಪ, ೪೮, ಮಾಕನಡಕು)

ಒಡಪುಗಳನ್ನು ಹೇಳುವುದರಲ್ಲಿ ಹೆಂಗಸರದೇ ಪಾರುಪತ್ಯ ಒಬ್ಬೊಬ್ಬ ಹೆಣ್ಣು ಒಂದೊಂದು ರೀತಿಯಲ್ಲಿ ಹೆಸರು ಹೇಳುವಾಗ ಒಂದೊಂದು ಕಾಮನಬಿಲ್ಲು ಮೂಡಿದಂತಾಗುತ್ತದೆ. ಆದ್ದರಿಂದ ಇಲ್ಲಿ ಹೆಸರು ಹೇಳುವ ಒಡಪುಗಳದೆ ಸಿಂಹಪಾಲು. ಇಲ್ಲಿ ಒಗಟುಗಳಂತೆ ಗುಟ್ಟಿನ ಮಾತುಗಳಿರುವುದಿಲ್ಲ. ಬೆಡಗು ಬಿನ್ನಾಣಗಳಿಂದ ತುಂಬಿರುತ್ತವಷ್ಟೆ.

**ಒಡಪಿನಲ್ಲಿ ಜೀವಾನುಭವ**

ಕಂಚಿನ ಕದ ಬಿಟ್ಟು
ಹೆಂಚಿನ ಮನೆ ಬಿಟ್ಟು
ಮಲಗೋ ಮಂಚ ಬಿಟ್ಟು
ಮುತ್ತಿನಂಥ ಮೂರು ಮಕ್ಕಳ ಬಿಟ್ಟು
ಗತಿಗೆಟ್ಟವಳ ಮನೆಗೆ ಹೋಗ್ತಾರೆ ಮೂಗಪ್ಪನೋರು (ವಕ್ತೃ: ಪಾಲಜ್ಜ, ೬೦, ಗೊಲ್ಲರಳ್ಳಿ)

ಈ ಒಡಪುಗಳನ್ನು ಹೇಳುವುದರ ಹಿಂದೆ ಹೆಂಗಸಿನ ದುಃಖವಿದೆ. ಹಾಗೂ ಗಂಡಸಿಗೆ ಬುದ್ಧಿ ಬಂದಿತೇನು ಎನ್ನುವ ಒಳಮಾತುಗಳು ಇದರಲ್ಲಿವೆ.

ತೊಡಿಮ್ಯಾಲ ತೊಡಿ, ಹೂವಿನ ತಡಿ
ಎಟ್ಟ ಹೊಡಿತಿ ಹೊಡಿ ಚಂದಪ್ಪ
ನಮ್ಮಪ್ಪ ಬರತಾನ ತಡಿ

ಸ್ತ್ರೀಯು ಬಡಿಸಿಕೊಂಡು ಈ ಮಾತುಗಳನ್ನು ಹೇಳುತ್ತಾಳೆ.

ಅಡಿಕೆ ಹಾಕ್ಕೊಂಡು ಕಿಟಗ್ಯಾಗ್ ನೋಡ್ತಾರೆ
ಲವಂಗ ಹಾಕ್ಕಂಡು ಲೋಲ್ ಮಾಡ್ತಾರೆ
ಹೂವಿನಂಥ ಹುಡ್ಗಿಕಂಡ್ರೆ
ಹುಬ್ಬು ಹಾರ್‍ಸ್ತಾರೆ (ವಕ್ತೃ: ಪಾರ್ವತಮ್ಮ, ೫೫, ಡಣಾಯಕನಕೆರೆ)

ಇಲ್ಲಿ ಹಾಸ್ಯದ ಜೊತೆಗೆ ಆತನ ಗುಣ ಪ್ರವೃತ್ತಿಯನ್ನು ಹೊರಗೆಡುಹುದನ್ನು ಕಾಣಬಹುದು. ಮಡದಿ ಇದ್ದು ಮಗದೊಬ್ಬ ಹೆಣ್ಣಿನ ಮೇಲೆ ಕಣ್ಣು ಹಾಕುವವರನ್ನೆಲ್ಲಾ ಒಂದೇ ಬಾರಿಗೆ ವಿಡಂಬಿಸಿದ್ದಾಳೆ.

ದೊಡ್ಡಕ್ಕಿ ಉಣ್ಣೋರಲ್ಲ
ಸಣ್ಣಕ್ಕಿ ತರೋರಲ್ಲ, ಮನ್ಯಾಗ ಇರೋರಲ್ಲ
ನನ್ ಮಾತು ಕೇಳೋರಲ್ಲ, ಅರಗಕ್ಹೋಗಿ ಅಂದ್ರೆ ತಿರುಗೋಕೆ ಹೋಗ್ತಾರ.... (ವಕ್ತೃ: ಬಸಮ್ಮ, ೫೦, ಶಿವಪುರ)

ಇಲ್ಲಿ ಊಟದ ಬಗೆಗೆ, ವ್ಯವಸಾಯದ ಬಗೆಗಿನ ಮಾಹಿತಿಯಿದೆ.

ನಾಲ್ಕು ತೋಳಿನ್ಹಂಗಿ ನಾನ್ನೂರೂಪಾಯಿ ಸಂಬ್ಳ
ನಾಗರಡಿಕೆ ಮಾಡ್ಸ್ ಅಂದ್ರೆ ನಾಳೆ ನಾಳೆ ಅಂತಾರೆ
ನಮ್ ಯಜಮಾನ್ರು. (ವಕ್ತೃ: ನಾಗಮ್ಮ, ೬೦, ಹೊಸಗರಗ)

ಆಕ್ಳಾಗ ಸಗಣಿ, ಗೋಡೆ ಮೇಗ್ಳ ತಗಣಿ
ತಿಕ್ಸ್‌ನೋಡ್ ಅಂದ್ರೆ ನೆಕ್ಕ್ ನೆಕ್ಕ್ ನೋಡ್ತಾಳ ನನ್ಹೆಂಡ್ತಿ ಸುಬ್ಬಿ (ವಕ್ತೃ: ಪರಶುರಾಮ, ೩೨, ಯಶವಂತನಗರ)

ಹೆಂಡ್ತಿ ಬಗೆಗೆ ಅವಳ ದಡ್ಡತನದ ಬಗೆಗೆ ಛೇಡಿಸುವ ಗಂಡಸರಿಗೆ ಕೊರತೆಯೇನಿಲ್ಲ

ಅರಗಿನ ಕೊಡ ಸೆರಗಿನ ಸಿಂಬಿ ಶೀಲವಂತರ
ಮಗ್ಳು ಸೀತಾದೇವಿ ಬರ್ತಾಳಂತ ಮಾರಿ
ನೋಡಿ ದಾರಿ ಬಿಡ್ತಾರೆ (ವಕ್ತೃ: ಕಾಡಜ್ಜ, ೭೫, ಶ್ರೀರಾಮಶೆಟ್ಟಿ ಹಳ್ಳಿ)

ಧಾರೆ ನಂತರ ಗಂಡಿಗೆ ತರುವ ಶಾಸ್ತ್ರದ ಸಮಯದಲ್ಲಿ ಈ ಮೇಲಿನ ಒಡಪನ್ನು ಹೇಳುತ್ತಾರೆ.

ಹೊನ್ನಾರಿ ವನಶೃಂಗಾರಿ ಅಂಗಾರುಳ್ಳ ಬರಿಗಾರಗೆಜ್ಜೆ ಸಾಲು ಮುತ್ತೈದೇರು
ಸೆರಗ್ಹಿಡಿದು ಕೇಳ್ವಾಗ ನಾನ್ಹೆಗೇಳಿ ನಮ್‌ರಾಯರ ಹೆಸ್ರು ಕಣ್ಣಾಗಿರುವರು
ಕಣ್ಣ್ ವಾರ‍್ಗೆಗ್ರುವರು ಧಾರೆಗಿರುವರು ದರ್ಬಾರ್‌ನಾಗಿರುವವರು ದಸರಕಟ್ಟೆ ಮ್ಯಾಲೆ
ಕೂತ್ಕೊಂಡು ಹಸ್ರುವಿಳ್ಳೇವು ಹಂಚ್ತಾರೆ ಅವರೇ ನಮ್ಮ ಎಜಮಾನ್ರು ತಿಮ್ಮಪ್ಪಗೌಡ್ರು (ವಕ್ತೃ: ರಾಧಮ್ಮ, ೩೫, ಚಿಲಕನಹಟ್ಟಿ)

**೫.೮.೭. ಜನಪದ ಹಾಡುಗಳಲ್ಲಿ ದೈವನಾಮ ಮತ್ತು ಸ್ಥಳನಾಮಗಳು**

ಜಾನಪದ ಪರಂಪರೆಯ ಸಂಪತ್ತಿನಲ್ಲಿ ಹಾಡಿನ ಪ್ರಕಾರ ಪ್ರಮುಖವಾದುದು. ಜನಪದರಲ್ಲಿ ಕೋಲಾಟದ ಪದಗಳು, ಲಾವಣಿ, ತ್ರಿಪದಿ, ಶಿಶುಪ್ರಾಸ, ಹಂತಿಹಾಡು, ಗರತಿಹಾಡು ಮುಂತಾದ ಹಾಡುಗಳಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳು ಬಿತ್ತರಗೊಂಡಿರುವುದನ್ನು ನೋಡುತ್ತೇವೆ. ಬಹುತೇಕ ಹಾಡುಗಳಲ್ಲಿ ಅದರಲ್ಲೂ ಕೋಲಾಟ ಮತ್ತು ಲಾವಣಿಗಳಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳನ್ನು ಹೆಚ್ಚಾಗಿ ನೋಡುತ್ತೇವೆ.

ನಮ್ಮ ಹಾಡಿನಲ್ಲಿ ಅನೇಕ ದೇವರುಗಳ ಬಗೆಗೆ ಕಟ್ಟಿದ ಹಾಡುಗಳಿವೆ. ಅವುಗಳಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳ ಚರಿತ್ರೆಯಿದೆ, ಐತಿಹ್ಯಗಳಿವೆ.

ಬಳ್ಳಾರಿ ಪರಿಸರದಲ್ಲಿ ಸಂಗ್ರಹಿಸಿರುವ ಕೆಲವು ಮಾದರಿಯ ಹಾಡುಗಳನ್ನು ಗಮನಿಸುವ ಮೂಲಕ ಇಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳ ಉಲ್ಲೇಖವನ್ನು ಕಂಡುಕೊಳ್ಳಲಾಗಿದೆ.

**ವಿರುಪಯ್ಯ ಲಿಂಗ**

ದಾಳಂಬರು ನೋಡಿ ನಗುತಿರುವ
ವಿರುಪಯ್ಯ ದಾಳಂಬರು
ಒಂದೇ ಕಂಬದಾಗ ಹದಿನಾರು ಕಂಬವು
ಕಂಬ ಕಂಬೆಲ್ಲ ಗೋಪುರವೋ ವಿರುಪಯ್ಯ ಲಿಂಗ
ಅಚ್ಚು ಕಟ್ಟಿದ ತೇರು
ನಿಚ್ಚಯ ಮಾಡಲಿಲ್ಲ
ಪಂಪಾಪತಿ ಎಂಬ ಗೋಪುರವೋ ವಿರುಪಯ್ಯ ಲಿಂಗ

ಅಚ್ಚು ಅಚ್ಚು ಬೆಲ್ಲದ ಅಚ್ಚು
ಅಚ್ಚಿನ ಮ್ಯಾಲೊಂದು ಪಾರಿವಾಳ
ಮುಚ್ಚಿ ಮುಚ್ಚಿ ಕಣ್ಣು ತೆರವಾದೋ ವಿರುಪಯ್ಯ ಲಿಂಗ
ಆನೆಗೊಂದಿಯ ಮೇಲೆ ಹಾಡ್ಯಾಳೆ ಡೊಂಬತಿ
ನೋಡ ಬಂದಣ್ಣ ಉಣವೋಳಕ್ಕಯ್ಯ
ವಿದ್ಯೆದಕ್ಕ ತದ್ದಿನಿತೊಂ

ಈ ಕೋಲಾಟ ಪದದಲ್ಲಿ ವಿರುಪಯ್ಯ ಲಿಂಗ, ಪಂಪಾಪತಿ ಎಂಬ ದೈವನಾಮಗಳೂ ಜೊತೆಗೆ ಆನೆಗುಂದಿ ಸ್ಥಳನಾಮವು ಉಕ್ತವಾಗಿರುವುದನ್ನು ನೋಡುತ್ತೇವೆ. ಈ ಹಾಡಿನಲ್ಲಿ ವಿರೂಪಾಕ್ಷ ದೇವಸ್ಥಾನದ ವಾಸ್ತುವಿನ ವರ್ಣನೆಯನ್ನು ಗಮನಿಸಬಹುದು.

**ಶರಣೆನ್ನಿರೋ**

ಶರಣೆನ್ನಿರಯ್ಯ ಶರಣೆನ್ನಿರೋ
ಹುಟ್ಟಿ ಬರುವ ಚಂದ್ರಾಗೆ ಶರಣೆನ್ನಿರೋ
ಹಂಪಿ ವಿರೂಪಾಕ್ಷಗೆ ಶರಣೆನ್ನಿರೋ
ತಾಯಿ ದುರುಗಮ್ಮಗೆ ಶರಣೆನ್ನಿರೋ
ತಾಯಿ ಗಾಳೆಮ್ಮಗೆ ಶರಣೆನ್ನಿರೋ
ಕಲಿಸಿದ ಗುರುವಿಗೆ ಶರಣೆನ್ನಿರೋ
ಕೈಯೊಳಗಲ ಕಡ್ಡಿಗೆ ಶರಣೆನ್ನಿರೋ
ಕಾಲಗಳ ಗೆಜ್ಜೆಗೆ ಶರಣೆನ್ನಿರೋ
ಸೋಮವಾರ ಸ್ವಾಮಿಗೆ ಶರಣೆನ್ನಿರೋ
ವಿದ್ಯೆ ಸರಸ್ವತಿಗೆ ಶರಣೆನ್ನಿರೋ

(ಪುರುಷೋತ್ತಮ ಬಿಳಿಮಲೆ, ೧೯೯೭, ಪುಟ-೩೮-೩೯).

ಹಂಪಿಯ ಸುತ್ತಮುತ್ತಲಿನ ಗ್ರಾಮಗಳಲ್ಲಿಯ ಪ್ರಚಲಿತವಿರುವ ಈ ಕೋಲಾಟ ಪದವನ್ನು ಪುರುಷೋತ್ತಮ ಬಿಳಿಮಲೆಯವರು, ಹಂಪಿ ಜಾನಪದ ಕೃತಿಯಲ್ಲಿ ಇದನ್ನು ಸಂಗ್ರಹಿಸಿದ್ದಾರೆ. ಸ್ಥಳೀಯ ದೈವವಾದ ಹಂಪಿಯ ವಿರೂಪಾಕ್ಷನನ್ನು ಮತ್ತು ಸ್ತ್ರೀದೇವತೆಯರಾದ ದುರುಗಮ್ಮ, ಗಾಳೆಮ್ಮನನ್ನು ಕೋಲಾಟ ಪದದಲ್ಲಿ ನೆನೆದಿರುವುದನ್ನು ನೋಡಬಹುದಾಗಿದೆ. ಹಾಗೆಯೇ 'ಹಂಪಿ' ಸ್ಥಳನಾಮವೂ ಉಲ್ಲೇಖಗೊಂಡಿದೆ.

**ಗವಿಸಿದ್ಧನ ಮಠದ ರಚನೆ ಕುರಿತು**

ಹಳ್ಳಿಯ ಊರಿಗೆ ಕೊಳ್ಳಿರಿವೊಂದ ಇಳೇವೂ
ಕೋಲ ಮುತ್ತಿನ ಕೋಲ।

ತೆಳ್ಳನ ಕಲ್ಲ ಬರಲೆಂದೆ ಗವಿಸಿದ್ದನ
ಒಳ್ಳೆಯವರ ಮಠದ ಮುಗಿಲೆಂದೆ ಕೋಲ
ಮತ್ತಿನ ಕೋಲ॥
ಪಟ್ಟಣದಾರಿಗೆ ಕೊಟ್ಪರೊಂದ ಇಳೇವೋ
ಬಟ್ಪನ ಕಲ್ಲ ಬರಲೆಂದೆ ಕೋಲಮುತ್ತಿನ ಕೋಲ
ಬಟ್ಟನ ಕಲ್ಲ ಬರಲೆಂದೆ ಗವಿಸಿದ್ಧನ ದಿಟವ
ನಿನ್ನ ಮಠದ ಮುಗಿಲೆಂದೆ ಕೋಲಮುತ್ತಿನ ಕೋಲ
ಅಪ್ಪ ಗವಿಸಿದ್ದ ನಿನ್ನ ಮಠವನ ಕಟ್ಟ್ಯಾರ ಮಾನೆ
ಉಣ್ಣೋ ಅಂತಾರ... (ಜಗದೀಶ ನಾ ಬ್ಯಾಲಹುಣಸಿ, ೨೦೦೬, ಪುಟ-೧೯೬-೧೯೮)

ಹೀಗೆ ಕೊಪ್ಪಳದ ಗವಿಸಿದ್ದೇಶ್ವರ ಮಠದ ರಚನೆಯನ್ನು ಕುರಿತು ಕಟ್ಟಿದ ಈ ಹಾಡು, ಮಠದ ನಿರ್ಮಾಣ ಕಾರ್ಯ ಮತ್ತು ಗವಿಸಿದ್ದನನ್ನು ಕುರಿತು ಹೇಳುತ್ತದೆ.

**ಗೌರವ್ವ**

ಅರಸಿಣ ಹಚ್ಚೀರೆ ಅರಸಿ ಗೌರವ್ವಗ
ಅರಸ ಮಹಾಲಿಂಗನ ಮಡದಿಗೆ। ಕೋಲು ಕೋಲೆನ್ನಿರೆ
ಕುಂಕುಮ ಹಚ್ಚಿರೆ ಕಾಂತೆ ಗೌರಮ್ಮಗ
ಕಾಂತ ಮಹಲಿಂಗನ ಮಡದಿಗೆ ಕೋಲು ಕೋಲೆನ್ನ ಕೋಲೆ
ದಂಡೀ ಮುಡಸೀರೆ ರಂಬೆ ಗೌರವ್ವಗೆ
ಶಂಬು ಶಂಕರನ ಮಡದಿಗೆ ಕೋಲು ಕೋಲೆನ್ನ ಕೋಲೆ
ಸೀರಿ ಉಡಸಿರೆ ನಾರಿ ಗೌರವ್ವಗೆ
ರಾಯ ಮಹಾಲಿಂಗನ ಮಡದಿಗೆ ಕೋಲು ಕೋಲೆನ್ನ ಕೋಲೆ
ಕುಪ್ಪಸ ತೊಡಸೀರೆ ಮೈತ್ರಿ ಗೌರ್ವಗೆ
ಮೃತ್ಯುಂಜಯನ ಮಡದಿಗೆ ಕೋಲು ಕೋಲೆನ್ನ ಕೋಲೆ
ಮೃತ್ಯುಂಜಯನ ಮಡದಿ ಗೌರವ್ವಗೆ
ಕುಪ್ಪಸ ತೊಡಸ ವನತೇಗ ಕೋಲು ಕೋಲೆನ್ನ ಕೋಲೆ

ಗೌರಮ್ಮ, ಗಂಗಮ್ಮರನ್ನು ನಮ್ಮ ಜನಪದರು ದೇವತೆಗಳೆಂದು ಭಾವಿಸಿದವರು. ಗಂಗಮ್ಮ ಗೌರಮ್ಮನ ಹಾಡುಗಳಲ್ಲಿ ಅನೇಕ ಕಥೆಗಳಿವೆ. ಸಾಮಾಜಿಕ ಚಿತ್ರಣಗಳಿವೆ.

ವಿಶೇಷವಾಗಿ ಈ ಮೇಲಿನ ಕೋಲು ಪದದಲ್ಲಿ ಗೌರಮ್ಮನಿಗೆ ಮಾಡಿದ ಶೃಂಗಾರವನ್ನು ಹೇಳಲಾಗಿದೆ. ಕುಂಕುಮ, ಸೀರೆ, ಕುಪ್ಪಸ, ದಂಡಿಯ ಮೂಲಕ ಶೃಂಗಾರ ಮಾಡಿದ ಗೌರಮ್ಮನನ್ನು ಜನಪದರು ಕೋಲುಪದದ ಮೂಲಕ ವರ್ಣಿಸಿದ್ದಾರೆ. ಗೌರಮ್ಮನ ಗಂಡನಾದ ಮಹಾಲಿಂಗನನ್ನು

ಮೃತ್ಯುಂಜಯ ಎಂದು ಹೇಳಲಾಗಿದೆ. ಒಟ್ಟಾರೆಯಾಗಿ ಗೌರಮ್ಮ ದೇವಿಯ ಹಾಡುಗಳು ನಮ್ಮ ಜನಪದರ ಮೇಲೆ ಪ್ರಭಾವ ಬೀರಿ ತಮ್ಮ ಮಕ್ಕಳಿಗೆ ಆಕೆಯ ಹೆಸರನ್ನು ಇಟ್ಟಿದ್ದಾರೆ. ಗೌರಮ್ಮ, ಗೌರಿ ರೀತಿಯ ಹೆಸರುಗಳನ್ನು ನಾವಿಂದು ಕಾಣಬಹುದಾಗಿದೆ. ಇಂದಿಗೂ ಕೂಡಾ ಸಣ್ಣ ಮಕ್ಕಳಿಗೆ ಈ ದೇವತೆಯ ಹೆಸರನ್ನು ಇಡುತ್ತಾರೆ. ಉದಾಹರಣೆಗೆ ರಾಮ–ಲಕ್ಷ್ಮಣ, ಲವ–ಕುಶ, ಸೂರ್ಯ–ಚಂದ್ರ, ಭೂಮಿ–ಆಕಾಶ, ಗಂಗೆ–ಗೌರಿ ಎಂಬ ದೇವತೆಯ ಹೆಸರುಗಳನ್ನು ನಾವು ಕಾಣುತ್ತೇವೆ. ಆದರೆ ಇತ್ತೀಚೆಗೆ ಅದು ಕಡಿಮೆಯಾಗುತ್ತಾ ಸಾಗಿ ದೇವತೆಯ ಮೊದಲನೇ ಅಕ್ಷರವನ್ನೇ ಅಥವಾ ದೈವದ ಹೆಸರನ್ನು ಹೊರತುಪಡಿಸಿಯೇ ನಾಮಕರಣ ಮಾಡುತ್ತಾರೆ.

**ಹನುಮಪ್ಪ (ಪೌರಾಣಿಕ)**

ಹನುಮಂತ ದೇವರು ಇಲ್ಲದ ಊರುಗಳನ್ನು ಹುಡುಕಬೇಕಾಗುತ್ತದೆ. ಅಂದರೆ ಪ್ರತಿಯೊಂದು ಊರುಗಳಲ್ಲಿಯೂ ಆಂಜನೇಯ ದೇವರು ಇದ್ದೇ ಇರುತ್ತಾನೆ. ಹನುಮಂತನನ್ನು ಕುರಿತ ಅನೇಕ ಹಾಡುಗಳು ನಮ್ಮ ಜನಮಾನಸದಲ್ಲಿವೆ. ಉದಾಹರಣೆಗೆ 'ಎಲ್ಲೇ ಹನುಮನು ಅಲ್ಲೇ ರಾಮನು' ಎನ್ನುವಂತಹ ಹಾಡು ಊರುಗಳಲ್ಲಿ ಮುಂಜಾನೆ ನೀವು ಕೇಳಿರಬಹುದು.

ಎಲ್ಲೇ ಹನುಮನು ಅಲ್ಲೇ ರಾಮನು
ಎಲ್ಲೆ ರಾಮನು ಅಲ್ಲೆ ಹನುಮನು ॥ಪ॥
ರಾಮನ ಹುಸಿರೇ ಹನುಮಾ
ಹನುಮನ ಉಸಿರೆ ರಾಮಾ ॥ಪ॥

ಈ ಮೇಲಿನ ಭಕ್ತಿಯ ಹಾಡಿನಲ್ಲಿ ರಾಮ ಹನುಮಂತರ ಗೆಳೆತನ ಮತ್ತು ಅವರು ಯಾವಾಗಲೂ ಒಬ್ಬರನ್ನು ಒಬ್ಬರು ಬಿಟ್ಟು ಇರುತ್ತಿರಲಿಲ್ಲ ಎಂಬ ಅರ್ಥವನ್ನು ನೀಡುತ್ತದೆ.

ಬಾಲದ ಹನುಮಂತ
ಎಷ್ಟು ಹೇಳಲಿ ನಿನ್ನ ಪಂತಾ
ಲಂಕಾ ಸುಟ್ಟು ಸುರುವಯ್ದೆಲ್ಲಾ
ಬಾಲದ್ಹನುಮಂತಾ
ಎಷ್ಟು ಹೇಳಲಿ ನಿನ ಪಂತಾ

ಈ ಮೇಲಿನ ಕೋಲು ಪದದಲ್ಲಿ ಹನುಮಂತನು ರಾವಣನ ಸಾಮ್ರಾಜ್ಯವನ್ನು ಸುಳ್ಳು ಹಾಡಿದ ಪ್ರಸಂಗ ಮತ್ತು ಆತನಿಗಿರುವ ಪಂತವನ್ನು ತಿಳಿಸುತ್ತದೆ.

**ಗಣನಾಯ್ಕ**

ಶರಣು ಶರಣಯ್ಯ ಗಣನಾಯ್ಕ
ನಮ್ಮ ಕರುಣದಿಂದಲಿ ಕಾಯೋ ಗಣನಾಯ್ಕ

ಎಳ್ಳುಂಡೆ ಜೇನುತುಪ್ಪ ಗಣನಾಯ್ಕ
ನಮಗೆ ವಿದ್ಯಾವ ಕಲಿಸಯ್ಯ ಗಣನಾಯ್ಕ
ಉದ್ದು ಹೋಳಿಗೆ ತುಪ್ಪ ಗಣನಾಯ್ಕ
ನಿಮಗೆ ತಪ್ಪದೆ ಒಪ್ಪಿಸುವೆ ಗಣನಾಯ್ಕ

ಮೂಷಿಕ ವಾಹನ ಗಣನಾಯ್ಕ
ನಮ್ಮ ಶಿವನ ಕುಮಾರನಯ್ಯ ಗಣನಾಯ್ಕ
ನಿನ್ಗೆ ಹೆಂಡ್ರಿಲ್ಲ ಮಕ್ಳಿಲ್ಲ ಗಣನಾಯ್ಕ
ನೀ ಎದ್ದು ಬಾರಯ್ಯ ಸಿದ್ದಿ ಗಣನಾಯ್ಕ

ಬಿಲ್ಪತ್ರೆ ವನದಲ್ಲಿ ಗಣನಾಯ್ಕ
ನಿನ್ನ ಧ್ಯಾನಮಾಡಿ ನೆನದೇವಯ್ಯ ಗಣನಾಯ್ಕ
ಕಂಟಕ ಹರ ನೀನು ಗಣನಾಯ್ಕ
ನಮಗೆ ವರವನ್ನು ಪಾಲಿಸಯ್ಯ ಗಣನಾಯ್ಕ

ಈ ಮೇಲಿನ ಗಣೇಶನ ಸ್ತುತಿಯಲ್ಲಿ ಭಕ್ತರು, ನಮ್ಮನ್ನು ಸರಿಯಾದ ರೀತಿಯಲ್ಲಿ ಮುನ್ನೆಡೆಸು, ನಾವು ನಿನ್ನ ಧ್ಯಾನದಿಂದ ಕಾಣುತ್ತೇವೆ ನಾವು ಬೇಡಿದ ವರವನ್ನು ನಮಗೆ ದಯಪಾಲಿಸು ಎಂಬುದು ಭಕ್ತರು ಗಣೇಶನನ್ನು ಕೇಳಿಕೊಳ್ಳುವುದು ಈ ಮೇಲಿನ ಹಾಡಿನಲ್ಲಿದೆ.

ವಿಶೇಷವಾಗಿ ಈ ದೈವದ ಹೆಸರುಗಳು ಇರುವ ಮಕ್ಕಳು ವಿನಾಯಕನ ಹಬ್ಬದಲ್ಲಿ ಜನಿಸಿದವರಾಗಿರುತ್ತಾರೆ. ಮತ್ತು ಗಣೇಶನ ಮೇಲೆ ಭಕ್ತಿ ಇರುವ ದಂಪತಿಗಳು ತಮ್ಮ ಮಕ್ಕಳಿಗೆ ಈ ಮೇಲಿನ ರೀತಿಯಲ್ಲಿ ಹೆಸರುಗಳನ್ನು ಇಡುತ್ತಾರೆ. ಗಣೇಶನನ್ನು ಭಕ್ತಿಯಿಂದ ವಿಶೇಷವಾಗಿ ಪೂಜೆ ಮಾಡುವವರು ಮಹಿಳೆಯರೇ ಎಂಬುದು ಕ್ಷೇತ್ರಕಾರ್ಯದಿಂದ ಕಂಡುಕೊಳ್ಳಲಾಗಿದೆ.

**ದೇವರಗುಡ್ಡ ಮಲ್ಲಯ್ಯಸ್ವಾಮಿ ಹಾಡು**

ಆಂಧ್ರದ ಗಡಿಭಾಗವಾದ ಆಲೂರು ತಾಲೂಕಿನ ಪ್ರಸಿದ್ಧ ಕ್ಷೇತ್ರವಾದ ದೇವರಗುಡ್ಡ (ಮೀನುಗೊಂದಿ) ಮಲ್ಲಯ್ಯಸ್ವಾಮಿಯಿಂದಾಗಿ ಪ್ರಸಿದ್ಧವಾಗಿದೆ. ಗೊರವ ಸಂಪ್ರದಾಯಕ್ಕೆ ಸೇರಿದ ಈ ದೇವರ ಕುರಿತಾದ ಈ ಹಾಡನ್ನು ಜಾಜಿ ದೇವೇಂದ್ರಪ್ಪ ಅವರು 'ಆಂಧ್ರ-ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು' ಎಂಬ ಕೃತಿಯಲ್ಲಿ ಸಂಗ್ರಹಿಸಿದ್ದಾರೆ. ಅದನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ನೆರಣೇಕಿ ಸ್ವಾಮೇರು
ಕಾರಣಿಕಿ ಹೇಳ್ಯಾರು
ಮಲ್ಲಯ್ಯನ ಪಾದ ಸತ್ಯ ಎಂದಾರು
ಬಹುಪರಾಕ್ ಮಲ್ಲಯ್ಯ

ತುಪ್ಪದಾ ಮಾಳಮ್ಮ
ಏಳುಕೋಟಿ ಮಲ್ಲಯ್ಯ ಸಲಹೋ ನನ್ನಯ್ಯ॥
ಯಳ್ಳಾರ್ತಿಯೆಂಬೋದು ವಿದ್ಯಾದನಗರವೂ
ಆರತಿ ಹಚ್ಯಾರ ಮಲ್ಲಯ್ಯಗಾ
ಸುಳುವಾಯಿಯೆಂಬೋದು ಸುಗುಣರಾನಗರವೂ
ಸುರಿವಾರು ಮಲ್ಲೀಗಿ ಮಲ್ಲಯ್ಯಗಾ
ಹರಕೇರಿಯೆಂಬೋದು ಹಚ್ಚನಾ ಊರು
ಹರಿಸಾರು ದಾದಕ್ಕ ಗಂಗಮ್ಮನಾ
ಲಿಂಗದಹಳ್ಳಿಯೆಂಬೋದು ಲಿಂಬೆಯಾನಾಡಣ್ಣ
ಲಿಂಗಾಕ ಸೇವೆಯ ಮಾಡ್ಯಾರು
ನೆರಣಿಕೆಯೆಂಬೋರು ಕರಣಿಕರ ಊರು
ಪರಮರಕಿ ಮಾಡ್ಯಾರು ಮಲ್ಲಯ್ಯಗಾ
ಆಲೂರುಯೆಂಬೋದು ಭಕ್ತರಾ ಪಟ್ಟಣಾ
ಪಾದವ ತೊಳೆದಾರು ಮಲ್ಲಯ್ಯಗಾ
ಮುದ್ದನಗೇರಿಯು ಮದ್ದನಮಲ್ಲಿಗೆ ಊರು
ಮದ್ದಾನೆ ತಂದಾರು ಮಲ್ಲಯ್ಯಗಾ
ಕರಡಿಗುಡ್ಡ ಅಂಬೋದು ಮಂಗಮ್ಮನ ಹಾಡು
ಕತ್ರೀಯ ನೀಡ್ಯಾರು ಗೊರವಯ್ಯಗಾ
ಹೆಬ್ಬಾಟಯೆಂಬೋದು ಹಿರಿದಾದ ನಾಡಯ್ಯ
ಬೈಕೆ ಬುತ್ತಿ ತಂದಾರು ಮಾಳವ್ವಗಾ
ವಂದವಾಗಲಿಯೆಂಬೋದು ವಂದನೆಯ ಊರು
ವಂದೇಸರಿಗೆ ನೀಡ್ಯಾರು ಭಂಡಾರವ
ಹೊಳೆಗುಂದಿಯೆಂಬೋದು ಹಿರಿದಾದ ಪಟ್ಟಣ
ರಾಜಪಂಪನಗೌಡ ನೀಡ್ಯಾನು ಕುದರೀಯ
ಆದವಾನಿಯೆಂಬೋದು ನವಾಬರ ನಾಡು
ಮದ್ದಾನೆ ನೀಡ್ಯಾರು ಮಲ್ಲಯ್ಯಗಾ
ಕುರುಕುಂದೆಯೆಂಬೋದು ಕುಂತಲನಗರವು
ಕುರುಬತೆವ್ವಗ ನೀಡ್ಯಾರು ಮೂಗುತೀಯ
ಬಲ್ಲೂರುಯೆಂಬೋದು ಬಲ್ಲಂಥವರ ಊರು
ಒಡೆಯರು ಬಂದಾರು ದರುಶನಕ

ಚಿಗ್ಯಾಟೆಯೆಂಬೋದು ಚೆನ್ನರಾ ಊರು
ಚಿಗರೆಯ ನೀಡ್ಯಾರು ಮಾಳವ್ವಾ
ಹಿರ್ಯಾಟೆಯೆಂಬೋದು ವಿರಾಟನಗರವು
ಹೆಜ್ಜೆಯ ಹಾಕ್ಯಾರು ದರುಶನ
ಬೊಂಬಾನಳ್ಳಿಯು ಬೆಂಬಲದ ಊರು
ಬೆಂಬಲ ನೀಡ್ಯಾರ ಸದ್ಭಕ್ತರಿಗೆ
ಕುರುಬರು ಬಂದಾರ ಕಣೆಕಣೆಯೆಂದಾರ
ಗೊರವರ ಕೂಡ್ಯಾರ ಗೊಗ್ಗರಿಕೆ ಹಾಡ್ಯಾರ
.................
.................
.................
ಪಾವನವಾಯ್ತು ಭೂಮಿಯು ನನ್ನಯ್ಯ
ಏಳುಕೋಟಿ ಬಹುಪರಾಕ್ ಮಲ್ಲಯ್ಯ ಮಲ್ಲಯ್ಯ ॥

(ಸಂಗ್ರಹ: ದೇವೇಂದ್ರಪ್ಪ ಜಾಜಿ, ೨೦೦೪, ಪುಟ-೧೬೩-೧೬೪)

ಈ ಹಾಡಿನಲ್ಲಿ ಸುಮಾರು ಹದಿನೆಂಟು ಗ್ರಾಮಗಳ ಉಲ್ಲೇಖವಿದೆ, ಮಲ್ಲಯ್ಯ, ಮಾಳವ್ವ, ಗಂಗಮ್ಮ, ಕುರುಬತೆವ್ವ ದೇವರ ನಾಮಗಳಿವೆ. ಹಾಗೂ ರಾಜಪಂಪನಗೌಡನ ವ್ಯಕ್ತಿನಾಮವಿದೆ. ಹಾಗೂ ವಿವಿಧ ಜಾತಿಗಳು ಇದರಲ್ಲಿವೆ. ಹೀಗೆ ಜನಪದರಲ್ಲಿರುವ ಐತಿಹ್ಯ, ಗಾದೆ, ಒಗಟು, ಒಡಪು ಮತ್ತು ಹಾಡುಗಳಲ್ಲಿರುವ ವ್ಯಕ್ತಿ ಮತ್ತು ಸ್ಥಳನಾಮಗಳನ್ನು ಕೆದಕುತ್ತಾ ಹೋದಂತೆಲ್ಲಾ ಮಾನವ ಜೀವಿಸಿದ ವಿವಿಧ ಆಯಾಮಗಳು ಮತ್ತು ಅವರ ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗುತ್ತದೆ. ಆದ್ದರಿಂದ ಮೌಖಿಕ ದೃಷ್ಟಿಕೋನದಿಂದ ನಾಮಾಧ್ಯಯನವನ್ನು ಮಾಡುವುದು ಅಗತ್ಯವೆನಿಸುತ್ತದೆ.



## ಅಧ್ಯಾಯ : ಆರು

# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಆಧುನಿಕತೆ

೬.೧. ವ್ಯಕ್ತಿನಾಮಗಳು: ಆಧುನಿಕತೆ

೬.೧.೧. ಪರಂಪರೆ

೬.೧.೨. ಜಾತಿ

೬.೧.೩. ವೃತ್ತಿ

೬.೧.೪. ದೈವ

೬.೧.೫. ಚರಿತ್ರೆ

೬.೧.೬. ಸಾಮಾಜಿಕ ಆಯಾಮಗಳು

೬.೧.೭. ಲಿಂಗಸಂಬಂಧಿ ಆಯಾಮಗಳು

೬.೨. ಸ್ಥಳನಾಮಗಳು: ಆಧುನಿಕತೆ

೬.೩. ಸ್ಥಳನಾಮ ಬದಲಾವಣೆಗೆ ಕಾರಣಗಳು

೬.೩.೧. ಪ್ರಭುತ್ವದ ಕಾರಣ

೬.೩.೨. ಸಾಮಾಜಿಕ ಕಾರಣಗಳು

೬.೩.೩. ಸಂಸ್ಕೃತ ಭಾಷೆಯ ಪ್ರಭಾವ

೬.೩.೪. ಇಂಗ್ಲಿಷ್ ಭಾಷೆಯ ಪ್ರಭಾವ

೬.೩.೫. ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಸ್ಥಳನಾಮಗಳ ಬದಲಾವಣೆ

## ಅಧ್ಯಾಯ: ಆರು

# ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳು: ಆಧುನಿಕತೆ

ಕಾಲದಿಂದ ಕಾಲಕ್ಕೆ ಪ್ರತಿಯೊಂದು ಕ್ಷೇತ್ರಗಳಲ್ಲಿಯೂ ಆಯಾ ವಿಷಯಕ್ಕೆ ತಕ್ಕಂತೆ ಬದಲಾವಣೆಗೊಂಡಿರುವುದನ್ನು ನಾವು ನೋಡುತ್ತಾ ಬಂದಿದ್ದೇವೆ. ಇದಕ್ಕೆ ಪ್ರಮುಖ ಕಾರಣವೇನೆಂದರೆ ಆಧುನಿಕತೆ. ಇದರ ಪ್ರಭಾವದಿಂದ ವಿಜ್ಞಾನ, ತಂತ್ರಜ್ಞಾನ, ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ವಲಯಗಳು ವ್ಯಾಪಕವಾಗಿ ಹರಡಿ ತೀವ್ರತರವಾದ ಸ್ಥಿತ್ಯಂತರಗಳಿಗೆ ಕಾರಣವಾಗಿದೆ. ಬದಲಾವಣೆ ಎನ್ನುವುದು ಸಹಜವಾದ ಗುಣವೆ, ಆದರೆ ಕೆಲವೊಮ್ಮೆ ಅವು ನಮ್ಮ ಸಂಸ್ಕೃತಿಯ ಮೂಲ ಸೊಗಡನ್ನೆ ತಿಂದುಹಾಕುತ್ತವೆ. ಇದರಿಂದ ಹಳೆಯದನ್ನು ನಾವು ಕಡೆಗಣಿಸಿದಂತಾಗುತ್ತದೆ. ನಾವು ಯಾವುದೇ ಕ್ಷೇತ್ರದಲ್ಲಾಗಲಿ ಮೊದಲು ಇದ್ದುದನ್ನು ಹಾಗೆಯೇ ಉಳಿಸಿಕೊಳ್ಳುತ್ತೇವೆ ಎನ್ನುವಂತೆಯೂ ಇಲ್ಲ, ಹಾಗೇನಾದರು ನಾವು ಮಾಡಿದರೆ ಜಗತ್ತು ನಮ್ಮನ್ನು ಬಿಟ್ಟು ಬಹುದೂರ ಹೋಗಿರುತ್ತದೆ, ನಾವು ಇದ್ದಲ್ಲಿಯೇ ಇರಬೇಕಾಗುತ್ತದೆ. ಆದ್ದರಿಂದ ಆಧುನಿಕತೆಗೆ ನಾವು ಎಷ್ಟರಮಟ್ಟಿಗೆ ತೆರೆದುಕೊಳ್ಳಬೇಕು ಎನ್ನುವುದು ಪ್ರಮುಖವಾದ ಪ್ರಶ್ನೆಯಾಗಿದೆ. ದೈವಮೂಲ ವ್ಯಕ್ತಿ ಮತ್ತು ಸ್ಥಳನಾಮಗಳ ಮೇಲೆ ಆಧುನಿಕತೆಯು ಹೇಗೆ ಪ್ರಭಾವಗೊಂಡಿದೆ ಎಂಬುದನ್ನು ನಾವಿಂದು ಕಾಣುತ್ತಿದ್ದೇವೆ. ಹೆಸರುಗಳ ಮೇಲೆ ವ್ಯಾಪಕವಾದ ಬದಲಾವಣೆಯು ಇತ್ತೀಚಿನ ದಶಕಗಳಲ್ಲಿ ಕಂಡುಬರುತ್ತಿದೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

### ೬.೧. ವ್ಯಕ್ತಿನಾಮಗಳು: ಆಧುನಿಕತೆ

ಪುರಾತನ ಕಾಲದಿಂದ ಇಂದಿನವರೆಗೂ, ನಾವು ದೈವಮೂಲದ ಹೆಸರುಗಳನ್ನು ಇಟ್ಟುಕೊಂಡಿರುವುದನ್ನು ನೋಡುತ್ತಲೇ ಬಂದಿದ್ದೇವೆ. ಆಯಾ ಧರ್ಮದನುಸಾರವಾಗಿ ಅವರು ದೇವರ ಹೆಸರನ್ನು ತಮ್ಮ ಮಕ್ಕಳಿಗೆ ಇಟ್ಟಿರುತ್ತಾರೆ. ಎಲ್ಲಾ ಧರ್ಮದವರ ನಂಬಿಕೆ ಏನೆಂದರೆ ದೈವಮೂಲದ ಹೆಸರನ್ನು ಮಕ್ಕಳಿಗೆ ಇಟ್ಟರೆ ದೇವರು ಮಕ್ಕಳನ್ನು ಕಾಪಾಡುತ್ತಾನೆ ಎನ್ನುವುದು. ದೈವಮೂಲದ ಹೆಸರುಗಳ ಮೇಲೆ ಆಧುನಿಕತೆಯ ಛಾಯೆ ಮೂಡಿ ಸ್ವರೂಪದಲ್ಲಿ ಬದಲಾವಣೆಯಾಗಿರುವುದನ್ನು ನಾವಿಂದು ನೋಡುತ್ತಿದ್ದೇವೆ. ಮುಖ್ಯವಾಗಿ ಜಾತಿ, ವೃತ್ತಿ, ಚರಿತ್ರೆ, ಭಾಷಿಕ ಸಂದರ್ಭಗಳು, ಧರ್ಮ, ಸಿನಿಮಾ, ರಂಗಭೂಮಿ, ಸಾಹಿತ್ಯ, ಸಂಸ್ಕೃತಿ, ಕ್ರೀಡೆ, ತಂತ್ರಜ್ಞಾನ, ವಿಜ್ಞಾನ, ನಗರೀಕರಣ ಹಲವಾರು ಅಂಶಗಳು ಕಾರಣವಾಗುತ್ತವೆ.

ಇಲ್ಲಿ ಬಳ್ಳಾರಿ ಪರಿಸರದ ದೈವಮೂಲ ವ್ಯಕ್ತಿನಾಮಗಳು ಈ ಬಗೆಯ ಎಲ್ಲ ಧೋರಣೆಗೆ ಒಳಗಾಗುತ್ತವೆಂಬುದನ್ನು ಗಮನಿಸಿಕೊಂಡು, ಆಧುನಿಕತೆ ಪ್ರಕ್ರಿಯೆಯ ಕೆಲವು ಆಯಾಮಗಳನ್ನು ಚರ್ಚಿಸಲಾಗಿದೆ.

**೬.೧.೧ ಪರಂಪರೆ**

ಪರಂಪರೆ ಎನ್ನುವ ಪದವು ಮೂಲವನ್ನು ಉಳಿಸಿಕೊಳ್ಳುವುದು ಎನ್ನುವ ಅರ್ಥವನ್ನು ಸೂಚಿಸುತ್ತದೆ. ಜಾತಿ, ವೃತ್ತಿ, ಧರ್ಮದ ಹೆಸರುಗಳನ್ನು ಇಂದಿಗೂ ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಆದರೆ ಇವುಗಳು ಸಮಾಜದಲ್ಲಿ ಅಸಮಾನತೆಯನ್ನು ಉಂಟುಮಾಡುತ್ತವೆ. ಉದಾಹರಣೆಗೆ ಡಂಬರ ನಾಗಪ್ಪ, ಹೊಲೇರ್ ಮಸಣಪ್ಪ ಎನ್ನುವವರ ಹೆಸರುಗಳನ್ನು ಅವರ ಹೆಸರುಗಳನ್ನು ಕರೆಯದೇ ಡಂಬ, ಹೊಲಿಯ ಎನ್ನುವ ಜಾತಿಸೂಚಕ ಹೆಸರುಗಳನ್ನು ಕರೆಯುವ ಸಾಧ್ಯತೆಗಳೇ ಹೆಚ್ಚು. ಒಂದು ಕಾಲದಲ್ಲಿ ಜಾತಿಯ ಹೆಸರನ್ನು ತನ್ನ ಹೆಸರಿನ ಮುಂದೆ ಅಥವಾ ಹಿಂದೆ ಬಳಸಿಕೊಳ್ಳುತ್ತಿರುವುದು ಅಭಿಮಾನದ ಸಂಕೇತವಾಗಿತ್ತು. ಆದರೆ ಇಂದು ಜಾತಿಸೂಚಕ ಹೆಸರುಗಳು ಕಾಣಿಸುತ್ತಿವೆಯಾದರೂ ಅವುಗಳ ಪ್ರಮಾಣ ಕಡಿಮೆಯಾಗಿವೆ. ಪ್ರಮುಖವಾಗಿ ಕೆಳವರ್ಗದವರು ಹಿಂದೆ ತಮ್ಮ ಮಕ್ಕಳಿಗೆ ಹೆಸರಿಡುವಾಗ ಮಾರಿ, ಮಸಣಿ, ಚೌಡಿ, ಯಲ್ಲಮ್ಮ, ಕೆಂಚ, ಬೋರ ಈತರಹದ ದೈವಗಳ ಹೆಸರುಗಳನ್ನು ಅವಲಂಬಿಸಬೇಕಾಗಿತ್ತು. ಆದರೆ ಈಗ ಅವುಗಳು ಬದಲಾವಣೆಯತ್ತ ಸಾಗಿವೆ. ಕೆಲವರ್ಷಗಳ ಹಿಂದೆಯಷ್ಟೇ ಕೆಳವರ್ಗದವರು, ಮೇಲ್ವರ್ಗದ ದೈವದ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುತ್ತಿರಲಿಲ್ಲ. ಇತ್ತೀಚೆಗೆ ಬದಲಾವಣೆಯಾಗಿರುವುದನ್ನು ನೋಡಬಹುದು. ಉದಾ. ಶಿವ, ರುದ್ರ, ಮೃತ್ಯುಂಜಯ, ಜಗನ್ನಾಥ.

ಹೀಗೆ ಪರಂಪರೆಯಲ್ಲಿದ್ದ ಕೆಲವು ಲಕ್ಷಣಗಳು ಹೆಸರುಗಳಲ್ಲಿ ಬದಲಾಗುತ್ತಿರುವುದನ್ನು ಕಾಣಬಹುದಾಗಿದೆ. ಇದಕ್ಕೆ ಪ್ರಮುಖವಾದಂತಹ ಕಾರಣ ಆಧುನಿಕತೆಯೆನ್ನಬಹುದು.

**೬.೧.೨. ಜಾತಿ**

ಮೇಲ್ವರ್ಗದವರ ಹೆಸರುಗಳೊಂದಿಗೆ, ಅವರು ಮಾಡುವ ವೃತ್ತಿಗಳನ್ನು ನಮೂದಿಸಿದರೆ, ಕೆಳವರ್ಗದವರ ಹೆಸರುಗಳಲ್ಲಿ ನೇರವಾಗಿ ಅವರ ಜಾತಿಯನ್ನು ನಮೂದಿಸಲಾಗಿರುತ್ತದೆ. ಉದಾಹರಣೆಗೆ ಹರಿಜನ ಅರಿಯವ್ವ, ಡಂಬರ ಗುಡ್ಡಪ್ಪ, ಮಾದಾರ ಬಸಪ್ಪ, ಬ್ಯಾಗಾರ ತಾತಪ್ಪ, ಕೊರಚರ ಉಡುಸಲಮ್ಮ ಎಂಬ ಹೆಸರುಗಳನ್ನು ದಾಖಲೆಗಳಲ್ಲಿ ನಾವು ಕಾಣುತ್ತೇವೆ. ಸಭೆ ಸಮಾರಂಭಗಳಲ್ಲಿ ಶಾಲೆ, ಆಫೀಸುಗಳಲ್ಲಿ ದಾಖಲೆಗಳಲ್ಲಿರುವಂತೆಯೇ ಹೆಸರುಗಳನ್ನು ಅವರು ಕೇಳಿಸಿಕೊಂಡಾಗ ಒಂದು ತರಹದ ಕೀಳರಿಮೆಗೆ ಒಳಗಾಗುತ್ತಾರೆ. ಹಿಂದೆ ಮೇಲ್ಜಾತಿಯವರು ನೇರವಾಗಿ ಅವರ ಜಾತಿಯ ಹೆಸರನ್ನು ಕರೆಯುತ್ತಿದ್ದರು. ಇತ್ತೀಚಿಗೆ ಅದು ಕಡಿಮೆಯಾಗುತ್ತಿದೆ. ಹೆಸರಿನ ಹಿಂದೆ ಅಥವಾ ಮುಂದೆ ಜಾತಿಯನ್ನು ಸೇರಿಸುವುದು ಕ್ರಮೇಣವಾಗಿ ಕಡಿಮೆಯಾಗಿ ಅದರ ಬದಲಾಗಿ ಜಾತಿಯ ಮೊದಲನೇ ಅಕ್ಷರವನ್ನು ಇಂಗ್ಲೀಷಿನಿಂದ ನಮೂದಿಸಿ ಮುಂದೆ ಹೆಸರನ್ನು ಬರೆಸುತ್ತಾರೆ.

ಉದಾಹರಣೆಗೆ ವಡ್ಡರ ಮೈಲಾರವ್ವ–ವಿ. ಮೈಲಾರವ್ವ, ಕೊರವರ ಕೊರಕಲಮ್ಮ–ಕೆ. ಕೊರಕಲಮ್ಮ, ಡಂಬರ ಉಡುಸಲವ್ವ–ಡಿ. ಉಡುಸಲವ್ವ, ಬ್ಯಾಗಾರ ಓಬಳಪ್ಪ–ಬಿ. ಓಬಳಪ್ಪ, ನಾಯಕರ ಹನುಮಯ್ಯ–ಎನ್. ಹನುಮಯ್ಯ.

ಹೀಗೆ ಆಧುನಿಕ ಪ್ರಭಾವದಿಂದಾಗಿ ತಮ್ಮ ಮಕ್ಕಳ ಹೆಸರುಗಳನ್ನು ದಾಖಲಾತಿಗಳಲ್ಲಿ ಜಾತಿಯನ್ನು ನಮೂದಿಸುವುದು ಕಡಿಮೆಯಾಗಿದೆ. ಮೇಲ್ಜಾತಿಯ ಹೆಸರುಗಳಲ್ಲಿ ಜಾತಿಯನ್ನು ಸೇರಿಸಿರುವುದು ಕಡಿಮೆಯೆಂದೇ ಹೇಳಬೇಕು. ಹಾಗಾದರೆ ಈ ಜಾತಿಯ ಹೆಸರನ್ನು ಕೆಳಜಾತಿಯವರ ಹೆಸರುಗಳಲ್ಲಿ ಯಾರು ಸೇರಿಸಿದರು ಎನ್ನುವ ಪ್ರಶ್ನೆ ಮೂಡುತ್ತದೆ. ಇದರಿಂದ ತಿಳಿದುಬರುವುದೇನೆಂದರೆ ಮೊದಲು ಅಕ್ಷರಸ್ತರಾಗಿರುವುದು ಮೇಲ್ಜಾತಿಯವರು ಅವರು ದಾಖಲಿಸಿಕೊಳ್ಳುವಾಗಿನ ಸಂದರ್ಭದಲ್ಲಿ ಕೆಳಜಾತಿಯವರ ಹೆಸರುಗಳೊಂದಿಗೆ ಅವರ ಜಾತಿಯನ್ನೂ ನಮೂದಿಸಿದ್ದಾರೆ ಎಂದು ಹೇಳಲು ಸಾಧ್ಯವಾಗುತ್ತದೆ.

### ೬.೧.೩. ವೃತ್ತಿ

ವೃತ್ತಿಯೂ ಕೂಡಾ ವ್ಯಕ್ತಿನಾಮಗಳಲ್ಲಿ ಇಂದು ವಿಸ್ತಾರತೆಯನ್ನು ಪಡೆದುಕೊಂಡಿದೆ. ಹಿಂದೆ ಆಯಾ ಜಾತಿಯವರೇ ಅವರವರ ವೃತ್ತಿಗಳನ್ನು ಮಾಡುತ್ತಿದ್ದರು. ಉದಾಹರಣೆಗೆ ಕುಂಬಾರಿಕೆಯನ್ನು ಕುಂಬಾರರು, ಚಪ್ಪಲಿ ಹೊಲಿಯುವುದನ್ನು ಮಾದಿಗರು, ಪುಟ್ಟಿ ಹೆಣೆಯುವುದನ್ನು ಕೊರಚರು, ಬಡಗಿತನವನ್ನು ಬಡಿಗೇರರು, ಬಟ್ಟೆ ಹೊಗೆಯುವುದನ್ನು ಮಡಿವಾಳರು ಹೀಗೆ ಆಯಾ ಜಾತಿಗಳೇ ಅವರ ವೃತ್ತಿಗಳನ್ನು ಮಾಡಿಕೊಳ್ಳುತ್ತಿದ್ದರು. ಇತ್ತೀಚಿಗೆ ಅದು ಬದಲಾವಣೆಗೊಂಡಿದೆ. ಬೇರೆ ಜಾತಿಯವರೂ ಕೂಡ ಮೂಲದಲ್ಲಿ ತಮ್ಮ ವೃತ್ತಿಯಲ್ಲದವುಗಳನ್ನು ಮಾಡತೊಡಗಿದ್ದಾರೆ. ಆಯಾ ಜಾತಿಗಳೇ ಅವರವರ ಕೆಲಸಗಳನ್ನು ಮಾಡಬೇಕು ಎನ್ನುವ ನಿರ್ಬಂಧವು ಸಡಿಲಾಗಿದೆ. ಇದಕ್ಕೆ ಕಾರಣಗಳು ಹಲವಾರು ಇರಬಹುದು. ಉದಾಹರಣೆಗೆ ಜಾಗತೀಕರಣ, ಆಧುನೀಕತೆ ಮತ್ತು ಹಸಿವನ್ನು ನೀಗಿಸಿಕೊಳ್ಳುವುದು ಯಾವುದಾದರೂ ಆಗಬಹುದು. ಅವರನ್ನು ಕರೆಯಬೇಕಾದ ಸಂದರ್ಭದಲ್ಲಿ ಜನರು ಅವರ ಮಾಡುವ ವೃತ್ತಿಯೊಂದಿಗೆ ಹೆಸರನ್ನೂ ಸೇರಿಸಿ ಕರೆಯುವ ಒಂದು ಸಂದರ್ಭವಾದರೆ, ಕೆಲವೊಂದು ವೇಳೆ ಅವರು ಮಾಡುವ ವೃತ್ತಿಯೊಂದನ್ನೇ ಹೆಸರಿಸಿ ಕರೆಯುತ್ತಿರುತ್ತಾರೆ. ಉದಾಹರಣೆಗೆ ಕಾರ್ಪೆಂಟರ್, ಡ್ರೈವರ್, ವೆಲ್ಡರ್, ಕಂಬಾರ, ಮಡಿವಾಳ, ಬಡಿಗೇರ ಹೀಗೆ ಕರೆಯುತ್ತಾರೆ.

ಆಧುನಿಕತೆಯ ಪ್ರಭಾವದಿಂದಾಗಿ ಯಾರು ಬೇಕಾದರೂ ಅವರಿಗಿಷ್ಟವಾದ ವೃತ್ತಿಗಳನ್ನು ಮಾಡಿಕೊಳ್ಳಬಹುದಾಗಿದೆ. ಇದರಿಂದ ಮೂಲವೃತ್ತಿ ಮಾಡುವವರಿಗೆ ಕೆಲಸವು ಕಡಿಮೆ ಸಿಗುತ್ತದೆ ಎನ್ನುವ ಅಳುಕು ಒಂದುಕಡೆಯಾದರೆ, ಇನ್ಯಾವುದೇ ವೃತ್ತಿಯನ್ನು ಮಾಡಲಿಕ್ಕೆ ಅವಕಾಶವೂ ದೊರಕಿದಂತಾಗುತ್ತದೆ.

ಹೀಗೆ ಹಲವು ವೃತ್ತಿಗಳಿಗೆ ಸಂಬಂಧಿಸಿದ ಹೆಸರುಗಳೂ ಕೂಡ ಇಂದು ವ್ಯಕ್ತಿನಾಮದ ಭಾಗವಾಗಿ ಸೇರ್ಪಡೆಯಾಗುತ್ತಿರುವುದು ಹೆಚ್ಚಾಗಿ ಕಂಡುಬರುತ್ತದೆ. ಈ ಮೇಲೆ ಹೆಸರಿಸಿದ ವೃತ್ತಿಗಳನ್ನು

ಮೊದಲು ಪುರುಷರೇ ಮಾಡುತ್ತಿದ್ದರು. ಇತ್ತೀಚೆ ಮಹಿಳೆಯರೂ ಕೂಡಾ ಮಾಡತೊಡಗಿದ್ದಾರೆ. ಇದೆಲ್ಲವೂ ಆಧುನಿಕತೆಯ ಪ್ರಭಾವವಾಗಿದೆ.

### ೬.೧.೪. ದೈವ

ಬಳ್ಳಾರಿ ಪರಿಸರದಲ್ಲಿಯ ದೈವಗಳು, ವ್ಯಕ್ತಿನಾಮಗಳ ಮೇಲೆ ಅನೇಕ ರೀತಿಯಲ್ಲಿ ಪ್ರಭಾವ ಬೀರಿವೆ. ಇಂದಿಗೂ ಕೂಡಾ ದೈವಮೂಲದ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುವುದು ಬಿಟ್ಟಿಲ್ಲ. ದೈವದ ಹೆಸರನ್ನು ಇಟ್ಟರೆ ತಮ್ಮ ಮಕ್ಕಳನ್ನು ದೇವರು ಕಾಪಾಡುತ್ತಾನೆ ಎನ್ನುವ ನಂಬಿಕೆಯಿಂದಲೋ, ದೇವರ ಹೆಸರನ್ನು ಇಡದೇ ಹೋದರೆ ನಮಗೆ ಅಪಾಯವಾಗುತ್ತದೆ ಎನ್ನುವ ದೃಷ್ಟಿಯಿಂದಲೋ ಇಂದಿಗೂ ದೇವರ ಹೆಸರುಗಳನ್ನು ಇಡುತ್ತಲೇ ಬಂದಿದ್ದಾರೆ. ಆದರೆ ಅವುಗಳ ಸ್ವರೂಪದಲ್ಲಿ ಇಂದು ಬದಲಾವಣೆಯನ್ನು ಕಾಣುತ್ತಿದ್ದೇವೆ. ಮೂರನೇ ತಲೆಮಾರಿನ ಇಂದಿನ ಜನತೆಗೆ ಈ ಹೆಸರುಗಳು ಕೊಂಚ ಮಾರ್ಪಾಡಿನೊಂದಿಗೆ ಇಡಲಾಗುತ್ತದೆ.

ಉದಾಹರಣೆಗೆ ದುರುಗಪ್ಪ–ದುರುಗೇಶ, ಜಡಿಯಪ್ಪ–ಜಡೇಶ, ಸಿಧ್ಧಪ್ಪ –ಸಿದ್ದೇಶ, ಮರಿಯಪ್ಪ–ಮರಿಸ್ವಾಮಿ, ಯರ್ರಿಯಪ್ಪ–ಯರ್ರಿಸ್ವಾಮಿ, ಹಾಲಪ್ಪ–ಹಾಲಸ್ವಾಮಿ, ಮಾಯಮ್ಮ–ಮಾಯಾ, ದುರುಗಮ್ಮ–ದುರ್ಗಾ ಹೀಗೆ ಇಂದಿನ ತಲೆಮಾರಿನ ಜನರು ತಮ್ಮ ಮಕ್ಕಳಿಗೆ ಅಪ್ಪ, ಅಮ್ಮ ವಾರ್ಗಿಕಗಳನ್ನು ಬಿಟ್ಟು ಸ್ವಲ್ಪ ಬದಲಾವಣೆಯನ್ನು ಮಾಡಿಕೊಂಡು ಇತ್ತ ದೇವರನ್ನು ಬಿಡಲೊಲ್ಲದೆ, ಆಧುನಿಕತೆಯನ್ನು ಸಂಪೂರ್ಣ ಸ್ವೀಕರಿಸದೇ ತಮ್ಮ ಮಕ್ಕಳಿಗೆ ಹೆಸರುಗಳನ್ನು ಇಡತೊಡಗಿದ್ದಾರೆ.

### ೬.೧.೫ ಚರಿತ್ರೆ

ಒಂದು ನಿರ್ದಿಷ್ಟ ಸ್ಥಳದ ಇತಿಹಾಸವನ್ನು ತಿಳಿಯಲು ಶಾಸನಗಳು, ಚರಿತ್ರೆ, ಜಾನಪದ, ಪುರಾಣ ಮತ್ತು ಕಲೆಗಳು ಹೇಗೆ ಸಹಾಯಕ್ಕೆ ಬರುತ್ತವೋ ಹಾಗೆಯೇ ವ್ಯಕ್ತಿನಾಮಗಳ ಚರಿತ್ರೆಯನ್ನು ತಿಳಿಯಲು ಸಹಾಯಕ್ಕೆ ಬರುತ್ತವೆ. ವ್ಯಕ್ತಿನಾಮಗಳ ಅಧ್ಯಯನವನ್ನು ಚಾರಿತ್ರಿಕ ನೆಲೆಯಿಂದ ಅಧ್ಯಯನ ಮಾಡುವುದಕ್ಕಿಂತ ಧಾರ್ಮಿಕ ನೆಲೆಯಿಂದ ಶೋಧಿಸುವುದು ಸೂಕ್ತ. ಏಕೆಂದರೆ ನಮ್ಮ ಪ್ರಾಚೀನ ಮತ್ತು ಸಮಕಾಲೀನ ರಾಜಮನೆತನಗಳು ಪುರುಷ ಮತ್ತು ಸ್ತ್ರೀನಾಮಗಳು ಮತ್ತು ಸಾಮಾನ್ಯ ಜನರ ಸ್ತ್ರೀ ಮತ್ತು ಪುರುಷರ ನಾಮಗಳು ಹೆಚ್ಚಿನ ಪ್ರಮಾಣದಲ್ಲಿ ಧಾರ್ಮಿಕ ಮೂಲದಿಂದ ಹುಟ್ಟಿಕೊಂಡಿವೆ. ಚರಿತ್ರೆಯ ಹಲವು ವ್ಯಕ್ತಿನಾಮಗಳು ಇಂದಿನ ಜನತೆಗೆ ಒಂದು ಫ್ಯಾಶನ್ ಆಗಿಯೂ ಕಂಡುಬಂದಿರುವುದು ತಿಳಿಯುತ್ತದೆ.

ಇತಿಹಾಸದಲ್ಲಿ ಆಗಿಹೋದಂತಹ ಪ್ರಸಿದ್ಧ ವ್ಯಕ್ತಿಗಳನ್ನು ನಮ್ಮ ಜನ ದೇವರೆಂದು ಪೂಜಿಸಿ ಇಂದಿಗೂ ಅವರ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುವಂತಹ ಮನಸ್ಸನ್ನು ತೋರುತ್ತಾ ಬಂದಿದ್ದಾರೆ. ಉದಾಹರಣೆಗೆ ಶ್ರೀಕೃಷ್ಣದೇವರಾಯ, ಅಶೋಕ, ಬುದ್ಧ, ಮಹಾವೀರ, ಕಿತ್ತೂರು ರಾಣಿ ಚೆನ್ನಮ್ಮ, ಒನಕೆ ಓಬವ್ವ, ಸಂಗೊಳ್ಳಿ ರಾಯಣ್ಣ, ಪಂಪ ಹೀಗೆ ಅವರು ಮಾಡಿದ ಸಾಧನೆಯನ್ನು ಗಮನಿಸಿ ಜನರು ತಮ್ಮ ಮಕ್ಕಳಿಗೆ ಅವರ ಹೆಸರುಗಳನ್ನು ಇಡಲು ಮುಂದಾಗುತ್ತಿದ್ದಾರೆ. ಇದೆಲ್ಲವೂ ಆಗಿರುವುದು

ಆಧುನಿಕ ಶಿಕ್ಷಣದಿಂದಾಗಿ. ಇಂದಿಗೂ ಉತ್ತರ ಕರ್ನಾಟಕದಾದ್ಯಂತ ಜನಮಾನಸದಲ್ಲಿ ಪೂಜೆಗೊಳ್ಳುತ್ತಿರುವ ಚಾರಿತ್ರಿಕ ವ್ಯಕ್ತಿಯೆಂದರೆ 'ಕುಮಾರರಾಮ' ಆತ ಇಂದಿಗೂ ಕೂಡಾ ಪೂಜೆಗೊಳ್ಳುತ್ತಿದ್ದಾನೆ. ಹಲವು ಮನೆತನಗಳ ದೈವವಾಗಿದ್ದಾನೆ. ಆತನನ್ನು ನೆನಪಿಸಿಕೊಳ್ಳಲು, ಆತನ ವ್ಯಕ್ತಿತ್ವವನ್ನು ಕೊಂಡಾಡಲು ಮತ್ತು ತಮ್ಮ ಮನೆದೇವರ ಹೆಸರುಗಳನ್ನು ಉಳಿಸಿಕೊಳ್ಳಲು 'ಕುಮಾರರಾಮ'ನ ಹೆಸರನ್ನು ಹೀಗೆ ಬಳಸಿಕೊಳ್ಳುತ್ತಿದ್ದಾರೆ. ಕುಮಾರ, ರಾಮಸ್ವಾಮಿ, ರಾಮಪ್ಪ, ರಾಮಲಿ, ರಾಮ, ಕುಮಾರರರಾಮ ಹೀಗೆ ವಿವಿಧ ರೂಪದಲ್ಲಿ ಕಂಡುಬರುತ್ತವೆ. ವಿಜಯನಗರ ಸಾಮ್ರಾಜ್ಯದ ಸುತ್ತಮುತ್ತಲು ಹಳ್ಳಿಗಳಲ್ಲಿ ಕಾಣಸಿಗುವ ಈ ಮೇಲಿನ ಹೆಸರುಗಳು ಚಾರಿತ್ರಿಕ ವ್ಯಕ್ತಿಯಾದ ಕುಮಾರರಾಮನನ್ನು ಪ್ರತಿನಿಧಿಸುತ್ತವೆಯೇ ಹೊರತು ರಾಮಾಯಣದ ರಾಮನನ್ನು ಅಲ್ಲ ಎನ್ನುವುದು ತಿಳಿದುಬರುತ್ತದೆ.

**೬.೧.೬. ಸಾಮಾಜಿಕ ಆಯಾಮಗಳು**

ಹೆಸರುಗಳು ಆಯಾ ಕಾಲದ ಸಾಮಾಜಿಕ ಪರಿಸರವನ್ನು ಅವಲಂಬಿಸಿ ನಿರ್ದೇಶನವಾಗುತ್ತವೆ. ಇಂದಿನ ಆಧುನಿಕ ವಿದ್ಯಮಾನದ ಹಲವಾರು ಸಂಗತಿಗಳು ಹೊಸಬಗೆಯ ಹೆಸರಿಗೆ ಕಾರಣವಾಗಬಹುದು. ಧಾರ್ಮಿಕ ಹಿನ್ನೆಲೆಯಿಂದ ಕೂಡಿದ್ದ ಹೆಸರುಗಳು ಮತ್ತೊಂದು ರೂಪ ತಾಳುವ ಮೂಲಕ ಹೊಸ ರೂಪವನ್ನು ಪಡೆಯಬಹುದು. ಹೀಗೆ ಸಮಾಜದ ಹಲವು ಸಂದರ್ಭಗಳು, ಹೆಸರುಗಳು ಆಧುನೀಕರಣಕ್ಕೆ ಪ್ರೇರಕವಾಗಿವೆ ಎನ್ನಬಹುದು.

ಮಾಧ್ಯಮ ಇಂದು ಅನೇಕ ಕ್ಷೇತ್ರಗಳ ಮೇಲೆ ಪ್ರಭಾವ ಬೀರಿದೆ ಅಂತೆಯೇ ಹೆಸರಿಡುವಿಕೆಯಲ್ಲಿ ತನ್ನ ಪ್ರಭಾವ ಬೀರಿರುವುದನ್ನು ನಾವಿಂದು ನೋಡುತ್ತಲಿದ್ದೇವೆ. ದೂರದರ್ಶನ, ರೇಡಿಯೋ, ಪತ್ರಿಕೆ, ಸಿನಿಮಾ, ರಂಗಭೂಮಿ, ಕ್ರೀಡೆ, ಸಾಹಿತ್ಯ, ಸಂಗೀತ ಮುಂತಾದವುಗಳಲ್ಲಿನ ಹೆಸರುಗಳು ಸಹಜವಾಗಿಯೇ ಎಂಬಂತೆ ಜನರಲ್ಲಿ ನಿರ್ದೇಶನಗೊಳ್ಳುತ್ತಿರುವುದು ಕಂಡುಬರುತ್ತದೆ. ಅಂದರೆ

ಅ. ದೈವಮೂಲದ ಹೆಸರುಗಳ ಸ್ವರೂಪದಲ್ಲಿ ಬದಲಾಗುತ್ತಿರುವುದು.

ಬ. ದೈವತ್ವಕ್ಕೇರಿದ ವ್ಯಕ್ತಿಗಳ ಹೆಸರುಗಳನ್ನು ಅಲ್ಪಸ್ವಲ್ಪ ಬದಲಾವಣೆಮಾಡಿಕೊಳ್ಳುವುದು.

ಕ. ದೈವಮೂಲದ ಸಿನೆಮಾ ತಾರೆಯರ ಹೆಸರುಗಳನ್ನು ಅನುಕರಿಸುವುದು ಕಂಡುಬರುತ್ತದೆ.

**ಅ. ದೈವಮೂಲದ ಹೆಸರುಗಳು ಸ್ವರೂಪದಲ್ಲಿ ಬದಲಾಗುತ್ತಿರುವುದು:** ಈಗಾಗಲೇ ಇರುವ ದೈವಗಳ ಹೆಸರುಗಳನ್ನು ಸ್ವಲ್ಪ ಬದಲಾವಣೆ ಮಾಡಿಕೊಂಡು ಆ ಹೆಸರಿನ ಮೊದಲಿನ ಅಕ್ಷರವನ್ನೋ ಅಥವಾ ಹೆಸರಿನ ಅರ್ಧಭಾಗವನ್ನೋ ಬಳಸಿಕೊಂಡು ಬರುವುದು ಇತ್ತೀಚಿನ ಜನರ ಮನೋಭಾವವಾಗಿದೆ. ಉದಾ. ಮಲ್ಲಮ್ಮ – ಮಲ್ಲಿಕಾ, ಕೊರಕಲಮ್ಮ – ಕೋಕಿಲಾ, ಕಲ್ಲವ್ವ – ಕಲಾಶ್ರಿ, ಮಲಿಯಮ್ಮ – ಮಾಲಾಶ್ರಿ, ಉಡುಸಲಮ್ಮ – ಉಮಾ, ಸುಂಕಲಮ್ಮ–ಸುಮಾ ಆಗಿ ಬದಲಾವಣೆಗೊಂಡಿರುವುದು ಇಂದಿನ ಜನರ ಆಧುನಿಕ ಮನೋಭಾವನೆಯಾಗಿದೆ. ದೇವರ ಹೆಸರನ್ನು ಹಾಗೆಯೇ ಇಟ್ಟರೆ ತಮ್ಮ ಮಕ್ಕಳು ಮುಂದೆ ನಮ್ಮನ್ನು ಬಯ್ಯುಕೊಳ್ಳುತ್ತಿದ್ದಾರೆ ಎನ್ನುವ ಕಾರಣದಿಂದಾಗಿ

ಸ್ವಲ್ಪ ವ್ಯತ್ಯಾಸದ ಮೂಲಕ ದೇವರ ಹೆಸರನ್ನು ಉಳಿಸಿಕೊಳ್ಳುವ ಪ್ರಯತ್ನ ಇಂದಿನ ಜನರು ಮಾಡುತ್ತಿದ್ದಾರೆ.

**ಬ. ದೈವತ್ವಕ್ಕೇರಿದ ವ್ಯಕ್ತಿಗಳ ಹೆಸರನ್ನು ಸ್ವಲ್ಪ ವ್ಯತ್ಯಾಸದೊಂದಿಗೆ ಹೆಸರಿಸುವುದು:** ಬಳ್ಳಾರಿ ಪರಿಸರದ ದೈವತ್ವಕ್ಕೇರಿದ ವ್ಯಕ್ತಿಗಳಲ್ಲಿ ಅವಧೂತರು ಪ್ರಮುಖ ಪಾತ್ರವನ್ನು ವಹಿಸುತ್ತಾರೆ. ಕ್ಷೇತ್ರಕಾರ್ಯಕ್ಕೆ ಹೋದಂತಹ ಸಂದರ್ಭದಲ್ಲಿ ಅವಧೂತರು ಸಮಾದಿಯಾದ ಊರುಗಳಿಗೆ ಭೇಟಿಕೊಟ್ಟು ಅಲ್ಲಿರುವ ಜನರನ್ನು ಮಾಹಿತಿ ಕೇಳಿದಾಗ ಅವರು ದೈವಸಂಬೂತ ವ್ಯಕ್ತಿಗಳು ಏಕೆಂದರೆ ಪವಾಡಗಳ ಮೂಲಕ ತಮ್ಮ ಜ್ಞಾನ ಮಂತ್ರಶಕ್ತಿಯ ಮೂಲಕ ಜನರ ಕಷ್ಟಗಳನ್ನು ಪರಿಹರಿಸುತ್ತಿದ್ದರು. ಅವರನ್ನು ನೆನಪಿಸಿಕೊಳ್ಳುವುದಕ್ಕೆ ತಮ್ಮ ಮಕ್ಕಳಿಗೆ ಈಗಲೂ ಅವಧೂತರ ಹೆಸರನ್ನು ಇಟ್ಟಿದ್ದೇವೆ ಎನ್ನುವ ಮಾಹಿತಿ ಕೊಟ್ಟರು. ಆ ಮಾಹಿತಿಯ ಪ್ರಕಾರ ಬಳ್ಳಾರಿ ಪರಿಸರದಲ್ಲಿ ಅವಧೂತರ ಪ್ರಭಾವ ಮಕ್ಕಳ ಹೆಸರಿನ ಮೇಲೆ ಪ್ರಭಾವ ಬೀರಿರುವುದನ್ನು ಈ ಕೆಳಗಿನಂತೆ ನೋಡಬಹುದು. ಅವಧೂತರ ಹೆಸರುಗಳನ್ನು ಆಧುನಿಕ ಮನೋಭಾವಕ್ಕೆ ಸ್ವಲ್ಪ ಪರಿವರ್ತಿಸಿಕೊಂಡು ಈ ಕೆಳಗಿನಂತೆ ಇಡಲಾಗಿದೆ.

ಎರ್ರಿತಾತ – ಯರಿಯಪ್ಪ, ಯರಿಸ್ವಾಮಿ, ಸ್ವಾಮಿ

ವೆಂಕಾವದೂತ –ವೆಂಕಣ್ಣ, ಯಂಕಪ್ಪ, ವೆಂಕಟೇಶ, ವೆಂಕಯ್ಯ

ಸುಡುಗಾಡಪ್ಪ ತಾತ – ಸುರೇಶ, ಸೂರಪ್ಪ, ಸುಡುಗಾಡಪ್ಪ, ಸುಡುಗಾಡವ್ವ

ಜಡೆಪ್ಪತಾತ – ಜಡಿಯಪ್ಪ, ಜಡೇಶ

ಮಲ್ಲಪ್ಪ ತಾತ –ಮಲ್ಲೇಶ, ಮಲ್ಲಿಕಾರ್ಜುನ, ಮಲ್ಲಪ್ಪ

ಹೀಗೆ ಬಳ್ಳಾರಿ ಪರಿಸರದಲ್ಲಿ ಅವಧೂತರ ಹೆಸರುಗಳು, ಮಕ್ಕಳ ಹೆಸರುಗಳಲ್ಲಿ ಕಂಡುಬರುವುದನ್ನು ನೋಡಬಹುದಾಗಿದೆ.

**ಕ. ದೈವಮೂಲದ ಸಿನೆಮಾ ತಾರೆಯರ ಹೆಸರುಗಳನ್ನು ಅನುಕರಿಸುವುದು:** ಶಿವರಾಜಕುಮಾರ್, ದೇವರಾಜ, ರವಿಚಂದ್ರನ್, ಲಕ್ಷ್ಮಿ, ವಿಷ್ಣುವರ್ಧನ, ಭಾರತಿ, ವೆಂಕಟೇಶ, ನಾಗಾರ್ಜುನ ಈ ಸಿನೆಮಾ ತಾರೆಯರ ಹೆಸರುಗಳಲ್ಲಿ ದೈವಮೂಲವನ್ನು ನೋಡಬಹುದು. ಇಂದಿನ ಜನರು ತಮ್ಮ ಮಕ್ಕಳಿಗೆ ಅತ್ಯಂತ ಪ್ರಜ್ಞಾಪೂರ್ವಕವಾಗಿ ಆಧುನಿಕ ಮನೋಭಾವದೊಂದಿಗೆ ತಮ್ಮ ಮಕ್ಕಳಿಗೆ ಹೆಸರುಗಳನ್ನು ಇಡುವತ್ತ ಸಾಗಿದ್ದಾರೆ. ಈ ಮೇಲಿನ ಹೆಸರುಗಳು ಕೇವಲ ಪಟ್ಟಣಗಳಲ್ಲಿ ಮಾತ್ರವಲ್ಲದೇ ಗ್ರಾಮೀಣ ಪ್ರದೇಶಗಳಲ್ಲಿಯೂ ನಾವಿಂದು ಕಾಣಬಹುದಾಗಿದೆ.

ದೈವದ ಬಗೆಗೆ ಈಗಲೂ ಜನರಲ್ಲಿ ನಂಬಿಕೆ ಇರುವುದರಿಂದ ಮಗು ಹುಟ್ಟಿದಾಗ ಶಾಸ್ತ್ರ ಕೇಳಿಸಿ ತಮ್ಮ ಮನೆದೇವರ ಹೆಸರಾಗಲಿ, ಅಜ್ಜನ ಹೆಸರಾಗಲಿ, ಅಪ್ಪ ತೀರಿಹೋಗಿದ್ದರೆ, ಅಪ್ಪನ ಹೆಸರಾಗಲಿ ಇಡುವುದು ಸಾಮಾನ್ಯ ಆದರೆ ಆಧುನೀಕತೆಯ ಪ್ರಭಾವದಿಂದಾಗಿ ಸಂಪೂರ್ಣವಾಗಿ ದೇವರ ಹೆಸರನ್ನು ಇಡದೆ ಹೆಸರಿನ ಅರ್ಧಭಾಗವನ್ನೋ ಅಥವಾ ಮೊದಲಿನ ಅಕ್ಷರವನ್ನೋ

ಉಪಯೋಗಿಸಿಕೊಂಡು ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುವುದು ಕಂಡುಬರುತ್ತದೆ. ಸಿನೆಮಾ, ನಾಟಕ, ಪತ್ರಿಕೆ, ಪುಸ್ತಕಗಳಲ್ಲಿ ಹೊಸಹೊಸ ಹೆಸರುಗಳನ್ನು ನೋಡಿದರು ಸಹಾ ಜನಾಭಿಪ್ರಾಯದಲ್ಲಿ ದೇವರು ಇನ್ನೂ ಜೀವಂತವಾಗಿದ್ದಾನೆ. ಆದ್ದರಿಂದ ಪ್ರಸ್ತುತದಲ್ಲಿಯೂ ದೇವತೆಗಳ ಹೆಸರುಗಳನ್ನು ಕಾಣಬಹುದಾಗಿದೆ.

### ೬.೧.೭. ಲಿಂಗಸಂಬಂಧಿ ಆಯಾಮಗಳು

ವ್ಯಕ್ತಿನಾಮಗಳನ್ನು ಲಿಂಗಸಂಬಂಧಿ ನೆಲೆಯಲ್ಲಿ ಚರ್ಚಿಸಲು ಅವಕಾಶವಿದೆ. ಏಕೆಂದರೆ ಇಲ್ಲಿ ಪುರುಷ ಮತ್ತು ಸ್ತ್ರೀಯರ ಹೆಸರುಗಳಲ್ಲದೇ ಒಂದೇ ಹೆಸರನ್ನು ಇಬ್ಬರೂ ಇಟ್ಟುಕೊಳ್ಳುವಲ್ಲಿ ಆಧುನಿಕತೆಯನ್ನು ಕಾಣಬಹುದು. ಇಂದು ವ್ಯಕ್ತಿಗಳು ನಿರ್ದೇಶಿಸಿಕೊಳ್ಳುತ್ತಿರುವ ಕೆಲವು ಭಾವನಾಮಗಳಿಗೆ ಲಿಂಗದ ನೆಲೆಯೇ ಇರುವುದಿಲ್ಲ. ಈ ದೃಷ್ಟಿಯಿಂದ ಲಿಂಗಸಂಬಂಧಿ ಆಯಾಮವನ್ನು, ಹೆಸರನ್ನು ಇಡುವವರೆ ಸೃಷ್ಟಿಸುತ್ತಾರೆ. 'ವಿನಯ' ಎಂಬ ಸಾಮಾನ್ಯ ಲಿಂಗವಾದ ಭಾವವನ್ನು 'ವಿನಯ್' ಎಂಬುದಾಗಿ ಕರೆದರೆ ಅದು ಪುರುಷನಿಗೆ ಸಂಬಂಧಿಸಿರುತ್ತದೆ. ಇಲ್ಲಿ ವಿನಯ್ ಎಂಬುದು 'ವಿನಾಯಕನನ್ನು' ಸ್ಮರಣೆಮಾಡುವುದಕ್ಕೋಸ್ಕರ ಇಟ್ಟಂತಹುದು ಎಂಬುದನ್ನು ಕ್ಷೇತ್ರಕಾರ್ಯ ಮಾಡುವಲ್ಲಿ ಗಮನಿಸಲಾಗಿದೆ. ಆದ್ದರಿಂದ ಈ ಹೆಸರುಗಳಲ್ಲಿ ಪರೋಕ್ಷವಾಗಿ ದೈವನಾಮವಿರಬಹುದು. ಆದರೆ ಅವುಗಳನ್ನು ನೇರವಾಗಿ ಇಂದಿನ ಜನರು ತಮ್ಮ ಮಕ್ಕಳಿಗೆ ಇಡಲು ಬಯಸದೆ ಈ ಕೆಳಗಿನಂತೆ ನಾಮನಿರ್ದೇಶನ ಮಾಡಲು ಮುಂದಾಗುತ್ತಿದ್ದಾರೆ. ಉದಾಹರಣೆಗೆ 'ಭುವನ್' ಎಂಬ ಹೆಸರು ಭುವನೇಶ್ವರಿ ತಾಯಿಯನ್ನು ನೆನಪಿಸಿಕೊಳ್ಳಲೂ ಇಟ್ಟಿರಬಹುದು ಆದರೆ ಅದು ನಮಗೆ ಇಂತಹ ಹೆಸರುಗಳಿಂದ ಗೊತ್ತಾಗುವುದಿಲ್ಲ. ಅಂತಹ ಹೆಸರುಗಳನ್ನು ಇಲ್ಲಿ ನೋಡೋಣ. ಉದಾಹರಣೆಗೆ.

| ಸ್ತ್ರೀ | ಪುರುಷ |
|---|---|
| ಭುವನಾ | ಭುವನ್ |
| ರಕ್ಷಿತಾ | ರಕ್ಷಿತ್ |
| ಭಾವನಾ | ಭಾವನ್ |
| ರಂಜನಾ | ರಂಜನ್ |
| ನವನೀತಾ | ನವನೀತ್ |
| ಕಿರಣ | ಕಿರಣ್ |
| ಪ್ರವೀಣಾ | ಪ್ರವೀಣ್ |
| ವಿನಯ | ವಿನಯ್ |
| ಸಂಜನಾ | ಸಂಜನ್ |

| | |
|---|---|
| ಸೃಜನಾ | ಸೃಜನ್ |
| ಮನ್ವಿತಾ | ಮನ್ವಿತ್ |
| ಪ್ರಣೀತಾ | ಪ್ರಣೀತ್ |
| ಸುಚಿತಾ | ಸುಚಿತ್ |
| ಸಹನಾ | ಸಹನ್ |
| ಮದನಾ | ಮದನ್ |
| ಸಂಕಲ್ಪಾ | ಸಂಕಲ್ಪ್ |
| ಅಂಜನಾ | ಅಂಜನ್ |
| ಅಂಚಿತಾ | ಅಂಚಿತ್ |
| ಅಂಬರಾ | ಅಂಬರ್ |
| ಅಂಬುಜಾ | ಅಂಬುಜ್ |

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ ಸ್ತ್ರೀಯರ ಹೆಸರುಗಳ ಕೊನೆಯ ಅಕ್ಷರಗಳು ಸಾಮಾನ್ಯವಾಗಿ ದೀರ್ಘವಾಗಿವೆ. ಉದಾಹರಣೆಗೆ ಭಾವನಾ, ಸಂಜನಾ ಹಾಗೆಯೇ ಪುರುಷರ ಹೆಸರುಗಳನ್ನು ಗಮನಿಸಿದಾಗ, ಹೆಸರುಗಳ ಕೊನೆಯ ಅಕ್ಷರ ವ್ಯಂಜನಾಂತಗೊಂಡಿವೆ. ಉದಾಹರಣೆಗೆ. ಭುವನ್, ರಕ್ಷಿತ್, ಸೃಜನ್. ಇಲ್ಲಿ ಮುಖ್ಯವಾದ ಸಮಸ್ಯೆಯೇನೆಂದರೆ ಕರೆಯುವಾಗ ಕೆಲವೊಮ್ಮೆ ಪುರುಷ ಯಾರು ಸ್ತ್ರೀಯಾರು ಅಥವಾ ಈ ಹೆಸರು ಪುರುಷನದೋ, ಅಥವಾ ಸ್ತ್ರೀಯರದೋ ಎಂದು ಗುರುತಿಸಲಿಕ್ಕೆ ಸಮಸ್ಯೆಗಳಾಗಬಹುದು.

ಉದಾಹರಣೆಗೆ ಒಬ್ಬ ತಾಯಿ ತನ್ನ ಮಗುವನ್ನು 'ವಿನಯ' ಎಂದು ಕರೆದಾಗ ಕೇಳಿಸಿಕೊಂಡವರಿಗೆ ಇದು ಹುಡುಗನ ಹೆಸರೋ ಅಥವಾ ಹುಡುಗಿಯ ಹೆಸರೋ ಎಂದು ಗುರುತಿಸಿಕೊಳ್ಳಲು ಕಷ್ಟವಾಗುತ್ತದೆ.

ಗ್ರಾಮೀಣ ಪ್ರದೇಶದ ಜನರು ಅಲ್ಲಿ ಕಲಿತವರಿಂದ, ತಮ್ಮ ಮಕ್ಕಳಿಗೆ ಒಂದು ಲೇಟೆಸ್ಟ್ ಆಗಿರುವ ಹೆಸರನ್ನು ಹುಡುಕಿಕೊಂಡು ತಮ್ಮಾ ಎಂದು ಹೇಳಿದಾಗ ಅವರು ಈ ತರಹದ ಹೆಸರನ್ನು ಹೇಳುತ್ತಾರೆ. ಆ ಹೆಸರುಗಳನ್ನು ನಾಮನಿರ್ದೇಶನ ಮಾಡುತ್ತಾರೆ. ಜೊತೆಗೆ ಕರೆಯುವಾಗ ಈ ಮೇಲಿನ ತರಹದ ಯಡವಟ್ಟುಗಳಾಗುತ್ತವೆ ಮತ್ತು ಶಾಲೆಯಲ್ಲಿಯೂ, ತಮ್ಮ ಮಗನ ಹೆಸರು ರಕ್ಷಿತ್ ಎಂದು ಇದ್ದರೆ ಇವರು ಉಚ್ಚಾರ ಮಾಡುವ ರೀತಿಯಲ್ಲಿ 'ರಕ್ಷಿತಾ' ಎಂದು ಬರೆದುಕೊಳ್ಳಿ ಎಂದಾಗ ಶಿಕ್ಷಕರು ಹಾಗೆಯೇ ಬರೆದುಕೊಂಡರೆ ಮುಂದೆ ನಗೆಪಾಟಲಿಗೆ ಈಡಾಗಬೇಕಾಗುತ್ತದೆ. ಹೀಗೆ ಈತರಹದ ಒಂದು ಹೆಸರನ್ನು ಹುಡುಗಿಗೂ, ಮತ್ತು ಹುಡುಗನಿಗೂ ಇಡುವುದು ಒಂದು ಫ್ಯಾಶನ್ ರೀತಿಯಲ್ಲಿ ಕಂಡುಬರುತ್ತಿದೆ.

**ಭಾವನಾಮಗಳ ವ್ಯಾಪಕತೆ**

ಇಂದಿನ ಮಕ್ಕಳ ಹೆಸರುಗಳಲ್ಲಿ, ಹೆಚ್ಚು ಭಾವನಾಮಗಳೇ ತುಂಬಿಕೊಂಡಿವೆ. ತಮ್ಮ ಮಕ್ಕಳ ಹೆಸರುಗಳು ಚಿಕ್ಕದಾಗಿದ್ದು, ಕರೆಯಲಿಕ್ಕೂ ಸುಲಭವೆನಿಸಿರಬೇಕು ಅಂತಹ ಹೆಸರುಗಳನ್ನು ಇಂದು ಜನರು ತಮ್ಮ ಮಕ್ಕಳಿಗೆ ನಿರ್ದೇಶನಮಾಡುತ್ತಿದ್ದಾರೆ. ಈ ಹಿಂದೆ ಇದ್ದಂತಹ ನಾಮನಿರ್ದೇಶನದ ಆಕರ ಇಂದಿನ ಹೆಸರುಗಳಲ್ಲಿ ಕಂಡುಬರುವುದಿಲ್ಲ. ಹಿಂದಿನ ಹೆಸರುಗಳಲ್ಲಿ ದೈವ, ಚರಿತ್ರೆ, ವಿಶೇಷಣಗಳನ್ನು ನೋಡಬಹುದಾಗಿತ್ತು. ಇಂದು ಕೇವಲ ಭಾವನೆಗಳ ಪ್ರತಿನಿಧಿಯಾಗಿರುವುದನ್ನು ತಿಳಿಯಬಹುದು. ಇಂದು ವ್ಯಾಪಕವಾಗಿ ಹರಡಿರುವ ಆಧುನಿಕತೆಯ ಪ್ರೇರಣೆಯಿಂದ ಎಲ್ಲೆಡೆಯೂ ಈ ರೀತಿಯ ಭಾವನಾಮಗಳು ಕಂಡುಬರುತ್ತವೆ. ಭಾವನಾಮಗಳು ಹೆಚ್ಚಾಗಿ ನಿರ್ದೇಶನ ಗೊಳ್ಳುತ್ತಿರುವುದರಿಂದ ಮುಖ್ಯವಾಗಿ ಇಂದಿನ ವ್ಯಕ್ತಿನಾಮಗಳಲ್ಲಿ ವಾರ್ಗಿಕಗಳು ಮರೆಯಾಗುತ್ತಿವೆ ಮತ್ತು ವಿಶೇಷಣಗಳೂ ಕಂಡುಬರುವುದಿಲ್ಲ.

ಅಪ್ಪ, ಅಮ್ಮ, ಅಯ್ಯ, ಅವ್ವ, ಅಣ್ಣ, ಅಕ್ಕ, ತಮ್ಮಗಳಂತಹ ಹೆಸರಿನ ಮುಂಭಾಗದಲ್ಲಿರುವ ವಾರ್ಗಿಕ ಪದಗಳನ್ನು ಹಳ್ಳಿಗಳಲ್ಲಿ ಮಾತ್ರ ಸ್ವಲ್ಪ ಪ್ರಮಾಣದಲ್ಲಿ ನೋಡಬಹುದಾಗಿದೆ. ನಗರ ಪರಿಸರದಲ್ಲಿ ಈ ರೀತಿಯಾದ ಹೆಸರುಗಳನ್ನು ಹುಡುಕುವುದು ಕಷ್ಟವೆಂದೆನಿಸುವಷ್ಟು ಪ್ರಮಾಣದಲ್ಲಿ ಕಡಿಮೆಯಾಗಿದೆ. ಹಾಗೆಯೇ ವಿಶೇಷಣ ಪದಗಳಾದ ಸಣ್ಣ, ದೊಡ್ಡ, ಕರಿಯ, ಬಿಳಿಯ, ಕೆಂಚ ಮುಂತಾದ ಹೆಸರಿನ ಮೊದಲನೇ ಭಾಗವಾಗಿ ಕಾಣಿಸುತ್ತಿಲ್ಲ. ಉದಾಹರಣೆಗೆ ಈ ಹಿಂದೆ ಒಂದು ಅವಿಭಕ್ತ ಕುಟುಂಬದಲ್ಲಿ ಒಂದೇ ಹೆಸರಿನ ಹಲವಾರು ಜನರು ಇರುವುದನ್ನು ನಾವು ಒಂದು ವಂಶಾವಳಿಯ ಮೂಲಕ ಅದನ್ನು ಗಮನಿಸಬಹುದು.

ದೊಡ್ಡ ರಾಮಪ್ಪ – ಗೋಣೆವ್ವ

ಗಂಡುಮಕ್ಕಳು ಸಣ್ಣಹನುಮಂತಪ್ಪ, ಸಣ್ಣರಾಮಪ್ಪ, ಭೀಮಪ್ಪ

ರಮೇಶ (ಮಗ) ರಾಮಜ್ಜ (ಮಗ)

ಹೆಣ್ಣುಮಕ್ಕಳು – ರಾಮಕ್ಕ, ಹನುಮಂತವ್ವ, ಅಂಜಿನವ್ವ, ಲಕ್ಷ್ಮವ್ವ, ರೇಣುಕವ್ವ

ರಾಮಪ್ಪ ರಾಮಜ್ಜ

ಈ ಮೇಲಿನ ಹೆಸರುಗಳಲ್ಲಿ ದೊಡ್ಡರಾಮಪ್ಪ ಮತ್ತು ಗೋಣೆವ್ವ ಎಂಬ ದಂಪತಿಗಳಿಗೆ ಮೂವರು ಗಂಡುಮಕ್ಕಳು ಮತ್ತು ಐದು ಜನ ಹೆಣ್ಣುಮಕ್ಕಳಿರುವುದನ್ನು ನೋಡಬಹುದು. ದೊಡ್ಡರಾಮಪ್ಪ ಬದುಕಿರುವಾಗಲೇ ತನ್ನ ಮಗಳಿಗೆ 'ರಾಮಕ್ಕ' ಎಂದು ಮತ್ತು ತನ್ನ ಸಣ್ಣ ಮಗನಿಗೆ ಸಣ್ಣರಾಮಪ್ಪ ಎಂದು ತಾನೇ ಹೆಸರಿಟ್ಟಿದ್ದಾನೆ. ಆತ ಸತ್ತ ನಂತರ ತಮ್ಮ ತಂದೆಯನ್ನು ನೆನಪಿಸಿಕೊಳ್ಳಲು ಮೊಮ್ಮಕ್ಕಳಿಗೆ ನಾಲ್ಕು ಜನರಿಗೆ, ರಾಮ, ರಮೇಶ, ರಾಮಜ್ಜ, ರಾಮಯ್ಯ ಎಂಬ ನಾಲ್ಕು ಹೆಸರುಗಳನ್ನು ಇಟ್ಟಿದ್ದಾರೆ. ಒಟ್ಟಾರೆ ೭ ಹೆಸರುಗಳು ಒಂದೇಯಾಗಿರುವುದನ್ನು ನಾವು

ನೋಡಬಹುದಾಗಿದೆ. ಹಾಗೆಯೇ ಒಂದೇ ಹೆಸರು ಇರುವುದರಿಂದ ಅವರನ್ನು ಗುರುತಿಸಲಿಕ್ಕೆ ಸಣ್ಣ, ದೊಡ್ಡ, ಎಂಬ ಪ್ರಮಾಣವಾಚಕಗಳು ಇರುವುದನ್ನು ನಾವು ಗಮನಿಸಬಹುದು. ಇಂದು ಈ ರೀತಿಯಲ್ಲಿರುವ ಹೆಸರುಗಳು ಕಾಣುವುದಿಲ್ಲ.

ಭಾವನಾಮಗಳ ನಿರ್ದೇಶನವು ಗ್ರಾಮೀಣ ಪರಿಸರಕ್ಕೆ ಪ್ರವೇಶ ಪಡೆದಿರುವುದನ್ನು ಬಳ್ಳಾರಿ ಪರಿಸರದಲ್ಲಿ ಈ ಕೆಳಕಂಡಂತೆ ನೋಡಬಹುದು.

ಉದಾಹರಣೆಗೆ ಕಲ್ಪನಾ, ಭಾವನಾ, ವಂದನಾ, ಮಾನಸ, ಕೌಶಲ, ತೃಪ್ತಿ, ಪ್ರೀತಿ, ಮಂಗಳ, ಪ್ರೇಮ, ಭಾವನ್, ಆಕರ್ಷಕ್, ಪ್ರವೀಣ್, ಸಂತೋಷ್, ಆನಂದ, ಉಲ್ಲಾಸ್, ಮೌನ ಇತ್ಯಾದಿ.

ಈ ಮೇಲಿನವುಗಳನ್ನು ಹೊರತುಪಡಿಸಿ ವಿವಿಧ ರೀತಿಯ ಹೆಸರುಗಳು ಬಳ್ಳಾರಿ ಪರಿಸರದಲ್ಲಿರುವುದನ್ನು ನಾವು ಗಮನಿಸಬಹುದು. ಅವುಗಳ ಅರ್ಥ ಸಮೇತ ಈ ಕೆಳಗಿನಂತೆ ಕೆಲವು ಹೆಸರುಗಳನ್ನು ಪಟ್ಟಿ ಮಾಡಲಾಗಿದೆ.

**ಗಂಡುಮಕ್ಕಳ ಹೆಸರುಗಳು**

ಅಂಚಿತ್ – ಹೊಳೆಯುವ, ಪೂಜಿಸಲ್ಪಟ್ಟವನು ಎಂಬರ್ಥವಿದೆ. ಈ ಹೆಸರನ್ನು ಅಂಚಿತ್ ಎಂದು ಗಂಡುಮಗುವಿಗೂ ಇಡಬಹುದು.

ಅಂಜನ – ಕಾಡಿಗೆ, ಅಂಜನಾದೇವಿಯ ಸ್ಮರಣೆಗಾಗಿಯೂ ತಮ್ಮ ಮಕ್ಕಳಿಗೆ ಹೆಸರನ್ನು ಇಟ್ಟಿದ್ದಾರೆ.

ಅಂಶುಮಾನ – ಸೂರ್ಯ

ಅಕಳಂಕ – ಪಾಪರಹಿತ

ಅಚಿಂತ್ಯ – ಚಿಂತನೆಗೆ ನಿಲುಕದ ಪರಮಾತ್ಮ

ಅದೀತ – ಕಲಿತ, ಪಾಂಡಿತ್ಯವುಳ್ಳ

ಅನೀತ – ಸ್ವತಂತ್ರ, ಒಡೆಯನಿಲ್ಲದ

ಅವನೀಶ – ಭೂ ಒಡೆಯ

ಆಶಾಧರ – ೧೩ನೇ ಶತಮಾನದ ಒಬ್ಬ ಜೈನಕವಿ

ಏಕೇಶ – ಶಿವ

ಓಮೇಶ – ಶಿವ

ಓಜಸ್ – ಕಾಂತಿ

ಕಲಾಧರ – ಚಂದ್ರ

ಕಲಕಂಠ – ಕೋಗಿಲೆ

ಕಾಶೀಶ – ಕಾಶಿಯ ವಿಶ್ವನಾಥ

ಕುಶಾಲ್ – ಆನಂದ

ಕುಶಾ – ನೀರು

ಗಗನೇಶ – ಸೂರ್ಯ

ಚಕ್ರೇಶ – ಶ್ರೀವಿಷ್ಣು

ಚೇತಸ್ – ಹೃದಯ, ಮನಸ್ಸು

ಛಾಯೇಶ್ – ಸೂರ್ಯದೇವ

ಜಗನ್ – ಪ್ರಪಂಚ

ಜಯದೀಪ್ – ಯಶಸ್ಸಿನ ಬೆಳಕು

ತಪನ್ – ತಪಸ್ಸು

ತೋಷಿತ್ – ಆನಂದಿಂದಿರುವವ

ದಿನೇಂದ್ರ– ಸೂರ್ಯ

ನವನೀತ್ – ಬೆಣ್ಣೆ

ನಿಹಾರ್ – ಇಬ್ಬನಿ

ಮಯಂಕ್ – ಚಂದ್ರ

ಮುಖೇಶ – ಮುಂದಾಳು, ಹಿಂದಿನ ಶ್ರೇಷ್ಠ ಗಾಯಕ

ರತ್ನಾಕರ – ಸಮುದ್ರದ ರಾಜ

ರಜಾಕ್ – ಅನ್ನವನ್ನು ಕೊಡುವವ

ಸರೂಪ – ಚೆಲುವ

**ಹೆಣ್ಣುಮಕ್ಕಳ ಹೆಸರುಗಳು**

ಅಜಲಾ – ಭೂಮಿ

ಅಮಲ – ಬಿಳಿಯ

ಅನಿಶಾ – ನಿರಂತರ

ಅಸಿತಾ – ಕಪ್ಪುಬಣ್ಣ

ಕನಕಲತಾ – ಬಂಗಾರದ ಬಳ್ಳಿ

ಕಶಲಾ – ಮೊಳಿಕೆ, ಅಂಕುರಾ

ಚಮೇಲಿ – ಒಂದು ಹೂ ಬಳ್ಳಿ

ಚಿತ್ರಿತಾ – ಚಿತ್ರಿಸಲ್ಪಟ್ಟ

ಚಿತ್ರಾಕ್ಷಿ –ಸುಂದರವಾದ ಕಣ್ಣುಳ್ಳುವಳು

ತಪಿತಾ – ಅಪರಂಜಿ

ನಗೀನಾ – ಆಭರಣ

ನಿಶಾ – ರಾತ್ರಿ

ನೂಪುರ – ಕಾಲ್ಗೆಜ್ಜೆ

ಪರಿಣಿತಾ – ನೈಪುಣ್ಯವುಳ್ಳವಳು

ಪರ್ಣಿಕಾ – ಚಿಕ್ಕ ಎಲೆ, ಪಾರ್ವತಿ

ಪಗೀತಾ – ಸೊತು

ಬಂಧುರಾ – ಮನೋಹರವಾದ, ಸುಂದರವಾದ

ಬಿಂದಿಯಾ – ಹನಿ

ಭೂವಿಕಾ – ನೈಜ, ಭಾವಜೀವಿ

ಮಂಜಿರಾ – ಗೆಜ್ಜೆ

ಮನೀಷಾ – ಬುದ್ಧಿ, ಕಲ್ಪನೆ

ಮನೋಜ್ಞಾ – ಸುಂದರವಾದ

ಮಹಿತಾ – ಗೌರವಯುತ

ಮಾಲೀಕಾ – ಹಾರ

ಮಿತುಲಾ – ನೀಡುವಂತೆ

ಮಿಹಿರಾ – ಸೂರ್ಯನ ಪತ್ನಿ

ಮುಕುಲಾ – ಮೊಗ್ಗು

ಮುಕುರಾ – ಕನ್ನಡಿ

ಮೇಧಾ – ಬುದ್ಧಿ ಸರಸ್ವತಿ

ಮೈನಾ – ಒಂದು ಹಕ್ಕಿ

ರಮಿತಾ – ಮನೋಹರ

ರಿತಿಕಾ – ಪ್ರವಾಹ

ರುಚಿರಾ – ಸುಂದರ

ವಸ್ತುಶ್ರೀ – ಲಕ್ಷ್ಮಿ

ವಿದುಲಾ – ಚಂದ್ರ

ಶಾಲಿನಿ – ಸಂಪನ್ನಯುಕ್ತ

ಸಂಜಿತಾ – ವಿಜಯಶಾಲಿನಿ

ಸಲೋನಿ – ಸುಂದರಿ

ಸಾನಿಕಾ – ಕೊಳಲು

ಕಾಲ ಬದಲಾದಂತೆ, ಹೆಸರುಗಳೂ ಕೂಡಾ ಕ್ರಮೇಣವಾಗಿ ಮುನ್ನೆಡೆಯುತ್ತ ಹೊಸ ಆಲೋಚನೆಗಳೊಂದಿಗೆ ಬದಲಾಗುವತ್ತ ಸಾಗುತ್ತವೆ.

ಹೀಗೆ ಆಧುನಿಕತೆ ಎನ್ನುವುದು ಹೆಸರುಗಳಿಗೆ ಪ್ರವೇಶಿಸಿರುವುದು ಇಂದು ಹೊಸ ಮನೋಧರ್ಮವೇನಿಲ್ಲ. ಅದು ಆಯಾ ಭೌಗೋಳಿಕ ಪರಿಸರದಲ್ಲಿ, ಕಾಲಾನುಕ್ರಮದಲ್ಲಿ ನವೀಕೃತಗೊಳ್ಳುತ್ತಲೇ ಇರುತ್ತವೆ. ಇಂದು ರೂಢಿಯಲ್ಲಿರುವ ವ್ಯಕ್ತಿನಾಮಗಳು ಭವಿಷತ್‌ನಲ್ಲಿ ಬೇರೆಯದೇ ಸ್ವರೂಪವನ್ನು ಪಡೆಯಬಹುದು. ಆಧುನಿಕತೆ ಎನ್ನುವುದು ಎಲ್ಲಾ ಕ್ಷೇತ್ರಗಳಲ್ಲಿಯೂ ಲಗ್ಗೆ ಇಟ್ಟಿದೆಯಾದ್ದರಿಂದ, ಅದೊಂದು ಸಹಜ ಮನೋಧರ್ಮವಾಗಿದೆ.

**೬.೨. ಸ್ಥಳನಾಮಗಳು: ಆಧುನಿಕತೆ**

ಕಾಲ ಬದಲಾದಂತೆ ಪ್ರತಿಯೊಂದು ಕೂಡ ಬದಲಾವಣೆಯತ್ತ ಸಾಗುತ್ತದೆಂಬುದು ನಮಗೆಲ್ಲರಿಗೂ ತಿಳಿದಿರುವ ವಿಚಾರ. ಆಟ, ಊಟ, ಪಾಠ, ಸಿನೆಮಾ, ಬಟ್ಟೆ, ಕಾರು, ಜೀವನದ ರೀತಿ ಇವೆಲ್ಲವುಗಳು ಸಹಾ ಮೊದಲಿದ್ದಂತೆ ಇರುವುದಿಲ್ಲ. ಅದರಲ್ಲಿ ಬದಲಾವಣೆಯನ್ನು ಕಂಡಿರುತ್ತೇವೆ. ಅದಕ್ಕೆಲ್ಲಾ ಪ್ರಮುಖವಾದ ಕಾರಣ ದಿನದಿಂದ ದಿನಕ್ಕೆ ಬದಲಾಗುತ್ತಿರುವ ನಮ್ಮ ಮನೋಭಾವ. ಕಲ್ಯಾಣ್‌ಕುಮಾರ್, ರಾಜ್‌ಕುಮಾರ್, ವಿಷ್ಣುವರ್ಧನ್ ನಟಿಸಿದ ಹಿಂದಿನ ಚಿತ್ರಗಳಲ್ಲಿ ಹಾಡುಗಳು ಇರುವ ರೀತಿಯೇ ಬೇರೆ, ಇಂದಿನ ಹಾಡುಗಳ ಶೈಲಿಯೇ ಬೇರೆ. ಮೊದಲ ಹಾಡುಗಳನ್ನು

ಕೇಳುವುದಕ್ಕೆ ಚೆಂದ, ಅದೇತರಹದ ಹಾಡುಗಳನ್ನು ಇಂದಿನ ಚಿತ್ರಗಳಲ್ಲಿ ನಿರೂಪಿಸಿದರೆ, ನೋಡುವವರಾದರು ಯಾರು? ಎಂಬ ಪ್ರಶ್ನೆ ಮೂಡುತ್ತದೆ. ಹೀಗೆ ಪ್ರತಿಯೊಂದು ಕ್ಷೇತ್ರದಲ್ಲಿಯೂ ಬದಲಾವಣೆಯನ್ನು ಕಾಣುತ್ತಿದ್ದೇವೆ. ಅದರಂತೆಯೇ ಹಿಂದೆ ಇದ್ದಂತಹ ವ್ಯಕ್ತಿನಾಮಗಳಾಗಲಿ, ಪ್ರಾಚೀನ ಸ್ಥಳನಾಮಗಳ ಹೆಸರಾಗಲಿ ಇದ್ದಕ್ಕಿದ್ದಂತೆಯೇ ಇಲ್ಲ. ಉದಾಹರಣೆಗೆ ಬೆಸ್ತರಹಳ್ಳಿ, ಮಾದಿಗಹಳ್ಳಿ, ಚಿಕ್ಕಹೊಲಗೇರಿ, ದೊಡ್ಡ ಹೊಲಗೇರಿ, ಸೂಳೆಕೆರೆ, ಹೊಲತಿಹಾಳು ಈ ಸ್ಥಳನಾಮಗಳನ್ನು ಗಮನಿಸಿದಾಗ ಹೆಚ್ಚಾಗಿ ಜಾತಿಯ ಮೂಲಕವೇ ನಿರ್ದೇಶನಗೊಂಡಿವೆ. ಇವುಗಳನ್ನು ಕೇಳಿದ ನಮಗೆ ಒಂದು ರೀತಿಯ ಊರುಗಳ ಬಗೆಗೆ ನಿರ್ಲಕ್ಷ್ಯ ಮನೋಭಾವ ಉಂಟಾಗುತ್ತದೆ, ಇನ್ನು ಆ ಊರುಗಳಲ್ಲಿ ವಾಸಮಾಡುವ ಜನರಿಗೆ ಅವರ ಊರ ಹೆಸರನ್ನು ಕೇಳಿದಾಗ ಅಥವಾ ಹೇಳಿದಾಗ ಮುಜುಗರವಾಗದೇ ಇರದು. ಇದೊಂದೇ ಕಾರಣವಲ್ಲ ಅನೇಕ ವಿಚಾರಗಳಿಗಾಗಿ, ಸ್ಥಳನಾಮಗಳು ಆಧುನಿಕ ಮನೋಭಾವ ಹೊಂದಿ ಬದಲಾವಣೆಗೆ ಸರಿದಿವೆ.

### ೬.೩. ಸ್ಥಳನಾಮ ಬದಲಾವಣೆಗೆ ಕಾರಣಗಳು

ಜಗತ್ತಿನಲ್ಲಿ ಸ್ಥಳನಾಮಗಳ ಬದಲಾವಣೆ ಅಥವಾ ಪುನರ್ ನಾಮಕರಣದ ಪ್ರಕ್ರಿಯೆ ಒಂದಲ್ಲ ಒಂದು ರೀತಿಯಲ್ಲಿ ಬದಲಾವಣೆಯಾಗುತ್ತ ಬರುವ ವಿಚಾರವನ್ನು ಇತಿಹಾಸದಿಂದ ತಿಳಿಯಬಹುದಾಗಿದೆ. ಒಂದು ಸ್ಥಳಕ್ಕೆ ಹೆಸರಿಡಬೇಕಾದರೆ ಆ ಹೆಸರು ಅಲ್ಲಿನ ಭೌಗೋಳಿಕ ಮತ್ತು ಸಾಂಸ್ಕೃತಿಕ ಅಂಶಗಳಿಂದ ಮೂಡಿಬಂದಿರುತ್ತದೆ. ಸ್ಥಳನಾಮಗಳು ಭಾಷೆಯಿಂದಲೂ ಕೂಡ ಬದಲಾವಣೆಯಾಗುತ್ತವೆ. ಜನರು ತಮ್ಮ ಉಚ್ಚಾರಣಾ ವೈಫಲ್ಯದಿಂದಾಗಿಯೂ, ಅಕ್ಷರಗಳನ್ನು ಮೊಟುಕುಗೊಳಿಸಿ ಅಥವಾ ತಮಗೆ ಅಶ್ಲೀಲವೆನಿಸಿದ ಊರುಗಳ ಹೆಸರುಗಳೂ ಕೂಡಾ ಪರಿವರ್ತನೆಗಳಾಗುತ್ತವೆ. ಒಮ್ಮೆ ಅಸ್ತಿತ್ವಕ್ಕೆ ಬಂದ ಸ್ಥಳನಾಮ ಪ್ರಾಕೃತಿಕ ಹಾಗೂ ಸಾಮಾಜಿಕ ಬದಲಾವಣೆಗಳಿಂದ ಹೊಸ ಹೆಸರುಗಳನ್ನು ಪಡೆದುಕೊಳ್ಳಬಹುದು. ಹೊಸ ಹೊಸ ಸಂಶೋಧನೆಗಳು, ಆವಿಷ್ಕಾರಗಳು ನಡೆದಂತೆ, ಶೈಕ್ಷಣಿಕ ಮತ್ತು ಬೌದ್ಧಿಕ ಮಟ್ಟ ವಿಕಾಸವಾದಂತೆ, ವೈಜ್ಞಾನಿಕ ಪ್ರಗತಿ ಮುಂದುವರಿದಂತೆ, ಕೈಗಾರಿಕಾ ಮತ್ತು ವಾಣಿಜ್ಯ ಕೇಂದ್ರಗಳ ಬೆಳವಣಿಗೆ ಅಭಿವೃದ್ಧಿ ಹೊಂದಿದಂತೆ, ರಾಜಕೀಯ ಮತ್ತು ಸಾಂಸ್ಕೃತಿಕ ವಲಯಗಳು ವಿಕಾಸವಾದಂತೆ, ಸ್ಥಳನಾಮಗಳು ಸಹಜವಾಗಿ ಬದಲಾವಣೆಯಾಗುತ್ತವೆ. ಹಳೆಯ ಹೆಸರಿನ ಸ್ಥಳ ಅದು ಅಸುಂದರವೆನಿಸಿದಾಗ ಹೊಸದಾಗಿ ಅಂಕಿತನಾಮವನ್ನು ಇಡಲಾಗುತ್ತದೆ. ಇಂತಹ ಬದಲಾವಣೆಗೆ ಸಾಮಾನ್ಯವಾಗಿ ಪ್ರಭುತ್ವ, ಸಾಮಾಜಿಕ, ಧಾರ್ಮಿಕ, ರಾಜಕೀಯ, ಐತಿಹಾಸಿಕ, ಭಾಷಿಕ ಇನ್ನು ಅನೇಕ ಕಾರಣಗಳಿರುತ್ತವೆ. ಇಂತಹ ಬದಲಾವಣೆಗಳು ವಿಶ್ವವಾದ್ಯಂತ ಹಿಡಿದು ತಾಲ್ಲೂಕಿನ ಮಟ್ಟದವರೆಗೂ ಬದಲಾವಣೆಯಾಗಿರುವುದನ್ನು ಕೆಳಕಂಡ ಬದಲಾವಣೆಗಳಿಂದ ನೋಡಬಹುದಾಗಿದೆ.

ಪ್ರತಿಯೊಬ್ಬ ವ್ಯಕ್ತಿಗೂ ಪ್ರತ್ಯೇಕ ವ್ಯಕ್ತಿತ್ವವಿರುವಂತೆ, ಪ್ರತಿಯೊಂದು ಊರಿಗೂ ಪ್ರತಿಯೊಂದು ಸ್ಥಳಕ್ಕೂ ಅದರದೇಯಾದ ಮಹತ್ವವಿರುತ್ತದೆ.

* ಲಂಡನ್ ಎಂದ ಕೂಡಲೇ ಅದರ ಸಾಮ್ರಾಜ್ಯ ವೈಭವವೂ, ಸಾಂಸ್ಕೃತಿಕ ಸಂಪತ್ತೂ, ಬೌದ್ಧಿಕ ಶ್ರೀಮಂತಿಕೆಯೂ ಕಣ್ಮುಂದೆ ನಿಲ್ಲುತ್ತವೆ. ಜೊತೆಗೆ ಶೇಕ್ಸ್‌ಪಿಯರ್, ನೆಲ್ಸನ್, ವಿಕ್ಟೋರಿಯಾ ಮೊದಲಾದ ಮಹಾನ್ ವ್ಯಕ್ತಿಗಳು ಪ್ರತ್ಯಕ್ಷವಾದಂತೆ ಭಾಸವಾಗುತ್ತದೆ.
* ದೆಹಲಿಯ ಹೆಸರು ಕೇಳಿದೊಡನೆ ಸಮಗ್ರ ಭಾರತವು ನೆನಪಾಗುತ್ತದೆ. ಅಲ್ಲಿ ಆಳ್ವಿಕೆ ಮಾಡಿದಂತಹ ಮುಸ್ಲಿಂ ಮನೆತನಗಳು ಕಣ್ಣಂಚಲ್ಲಿ ಸುಳಿದುಹೋಗುತ್ತವೆ. ತಾಜಮಹಲ್‌ನ್ನು ನೋಡಿರದಿದ್ದರೂ ಆ ಹೆಸರು ಕಿವಿಗೆ ಇಂಪನ್ನು ನೀಡುತ್ತದೆ.
* ಬನವಾಸಿ, ಬಾಗೇವಾಡಿ, ಗದಗ, ಮೈಸೂರು ಇನ್ನಿತರ ಸ್ಥಳಗಳು ಸಾಂಸ್ಕೃತಿಕ ಚೈತನ್ಯದ ಚಿಲುಮೆಗಳಾಗಿವೆ.
* ವಿಜಯನಗರದ ಹೆಸರು ಕೇಳಿದೊಡನೆ ಯಾವ ಕನ್ನಡಿಗನಿಗೂ ರೋಮಾಂಚನವಾಗದೇ ಇರದು.
* ಕಾಶಿ, ರಾಮೇಶ್ವರ, ತಿರುಪತಿ, ಶ್ರವಣಬೆಳ್ಗೊಳ, ಪಂಡರಾಪುರ, ಉಡುಪಿ ಮೊದಲಾದ ತೀರ್ಥಕ್ಷೇತ್ರಗಳು ಭಕ್ತರನ್ನು ಸೆಳೆಯುವ ಧಾರ್ಮಿಕ ಕ್ಷೇತ್ರಗಳಾಗಿವೆ.

ಸೃಷ್ಟಿಯಲ್ಲಿ ಮಹಾಪರ್ವತಕ್ಕೆ ವೈಶಿಷ್ಟ್ಯವಿರುವಂತೆ ಅಣುವಿಗೂ ಒಂದು ವಿಶೇಷತೆ ಇದೆ. ಆನೆ ಇರುವೆಗಳಿಗೂ ಅಷ್ಟೇ ಅಂತೆಯೇ ಎಲ್ಲ ಊರು ಹಾಗೂ ಸ್ಥಳಗಳಿಗೂ ಅವುಗಳದೇಯಾದ ಸ್ವರೂಪವಿದೆ. ಈ ಮೇಲಿನ ಅಂಶಗಳಿಂದಾಗಿ ಸಾಮಾನ್ಯವಾಗಿ ಊರ ಹೆಸರುಗಳು ಅಥವಾ ಸ್ಥಳಗಳ ಹೆಸರುಗಳು ಬದಲಾವಣೆಯಾಗುವುದಿಲ್ಲ. ಹೆಸರೆಂಬುದು ಆಯಾ ವ್ಯಕ್ತಿಯ ಅಥವಾ ವಸ್ತುವಿನ ಆತ್ಮಶಕ್ತಿಯ ಅಥವಾ ವ್ಯಕ್ತಿತ್ವದ ಸಂಕೇತ ಅದನ್ನು ಆಗಾಗ್ಗೆ ಬದಲಾಯಿಸಿದ್ದಾದರೆ ಗೊಂದಲವುಂಟಾಗಿ, ಜ್ಞಾನವಿಕಾಸಕ್ಕೆ ತಡೆಯುಂಟಾಗಿ ಎಲ್ಲಾ ಬಗೆಯ ಪ್ರಗತಿಯೂ ಕುಂಠಿತವಾಗುತ್ತದೆ. ಆದರೂ ಕೂಡಾ ಊರುಗಳ ಹೆಸರು ಬದಲಾವಣೆಗೊಳ್ಳುವ ಸಂಭವವುಂಟು, ಈ ಮಾತು ಬೀದಿಗಳಿಗೂ ಅನ್ವಯವಾಗುತ್ತದೆ. ಭಾಷಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಮತ್ತು ಐತಿಹಾಸಿಕ ಕಾರಣಗಳು ಸ್ಥಳಗಳ ನಾಮಾಂತರಕ್ಕೆ ಕಾರಣವಾಗುತ್ತವೆ. ಇವುಗಳಲ್ಲಿ ಭಾಷಿಕ ವ್ಯತ್ಯಾಸಗಳು ಸಹಜವಾದುದೆಂದೂ, ಉಳಿದವು ಸಾಂಸ್ಕೃತಿಕ ಮೂಲವಾದುದೆಂದೂ ಗ್ರಹಿಸಬಹುದು. ಇಲ್ಲಿ ಪ್ರಮುಖವಾಗಿ ಈ ಕೆಳಗಿನ ಕಾರಣಗಳಿಂದ ಹೆಸರುಗಳು ಬದಲಾವಣೆಗೊಂಡಿರುವುದನ್ನು ನೋಡಬಹುದು.

**೬.೩.೧. ಪ್ರಭುತ್ವದ ಕಾರಣ**

ಬಹುತೇಕವಾಗಿ ಎಲ್ಲ ಊರ ಹೆಸರುಗಳು ಸಾಂಸ್ಕೃತಿಕ, ಚಾರಿತ್ರಿಕ ಹಾಗೂ ಭಾಷಿಕ ವೈಶಿಷ್ಟ್ಯಗಳನ್ನು ತಮ್ಮ ಬಸಿರೊಳಗೆ ಹುದುಗಿಸಿಟ್ಟುಕೊಂಡಿರುವ ಕಾರಣಕ್ಕಾಗಿ, ಅವುಗಳ ನಾಮಾಂತರವು ಸರಿಯಾದುದಲ್ಲ. ವಿದೇಶಿಯ ಆಕ್ರಮಣಕಾರರು ಕಾಲ್ತೆಗೆದ ನಂತರ ನದಿ, ಗ್ರಾಮ, ಪರ್ವತದ ಮೊದಲಾದ ಸ್ಥಳಗಳಿಗೆ

ಅವರು ಕೊಟ್ಟಿದ್ದ ವಿದೇಶಿ ನಾಮಗಳನ್ನು ತೆಗೆದುಹಾಕುವುದು ಸಹಜ. ಉದಾಹರಣೆಗೆ ಇರ್ವಿನ್‌ನಾಲೆ– ವಿಶ್ವೇಶ್ವರಯ್ಯನಾಲೆ ಆಗುವುದು. ಕ್ಲೋಸ್‌ಪೇಟೆ– ರಾಮನಗರ ವಾಗವುದರಲ್ಲಿ ತಪ್ಪಿಲ್ಲ. ಹಾಗೆಯೇ ಸ್ಥಳನಾಮಗಳನ್ನು ಇಂಗ್ಲಿಷರು ತಪ್ಪಾಗಿ ಉಚ್ಚರಿಸುತ್ತಿದ್ದಾರೆ. ಅವನ್ನು ಸರಿಪಡಿಸುವುದೂ ತಪ್ಪಲ್ಲ.

ಉದಾಹರಣೆಗೆ ಶ್ರೀರಂಗಪಟ್ಟಣ - Seringapathanum ಚಿತ್ರದುರ್ಗ - Chitaldurg ಎಂದು ತಪ್ಪಾಗಿ ಉಚ್ಚರಿಸುತ್ತಿದ್ದರೂ ಆಂಗ್ಲರು ಕಾಲ್ತೆಗೆದ ನಂತರ ಯುನೈಟೆಡ್ ಪ್ರಾವಿನ್ಸಸ್ ಉತ್ತರ ಪ್ರದೇಶವಾಗುತ್ತದೆ. ಇಂಡೋನೇಷಿಯಾದಿಂದ ಡಚ್ಚರು ಜಿರಿಯಾದ ನಂತರ ಬಟೇವಿಯಾ ಜಕಾತನ ಆಗುತ್ತದೆ. ಆದರೆ ರಾಜಕೀಯ ಅಧಿಕಾರ ಸೂತ್ರ ಹಿಡಿದ ಜನ ದೇಶಿಯವಾದ ಹಳೆಯ ಹೆಸರುಗಳನ್ನು ತೊಡೆದು ತಮ್ಮ ಹೆಸರನ್ನು ಅಂಕಿತಗೊಳಿಸುವುದು ಬರ್ಬರತನವಾಗುತ್ತದೆ.

ಪೆರಾನ್ ಅರ್ಜೈಂಟೈನಾ ದೇಶದ ಸರ್ವಾಧಿಕಾರಿಯಾಗಿದ್ದಾಗ ಅನೇಕ ಊರುಗಳ ಪುರಾತನ ನಾಮಗಳನ್ನು ತೆಗೆಸಿ ಅವುಗಳ ಸ್ಥಾನದಲ್ಲಿ ತನ್ನ ಮತ್ತು ಹೆಂಡತಿಯ ನಾಮಗಳನ್ನು ಕೆತ್ತಿಸಿದನು. ಅವನು ಅಧಿಕಾರ ಕಳೆದುಕೊಂಡ ನಂತರ ಹಳೆಯ ಹೆಸರುಗಳನ್ನು ಮತ್ತೆ ಪ್ರತಿಷ್ಠಾಪಿಸಿದ್ದು ವಿವೇಕಕ್ಕೆ ತೊಡಿಸಿದ ಕಿರೀಟವೆಂದೇ ಹೇಳಬಹುದು.

**ಅ. ಸೊಂಡೂರು ಸಂಸ್ಥಾನಿಕರ ಪ್ರಭಾವ:** ಬಳ್ಳಾರಿ ಪರಿಸರದಲ್ಲಿಯೂ ಕೂಡಾ ರಾಜಕೀಯ ಅಧಿಕಾರದಿಂದಾಗಿ ಹಲವು ಸ್ಥಳನಾಮಗಳನ್ನು ಬದಲಾಯಿಸಿರುವುದನ್ನು ಕಾಣಬಹುದು. ಸೊಂಡೂರು ಸಂಸ್ಥಾನದ ರಾಜರು ಸುತ್ತಮುತ್ತಲ ಸ್ಥಳಗಳಿಗೆ ತಮ್ಮ ಸಂಬಂಧಿಕರ ಹೆಸರುಗಳು ಇಟ್ಟಿರುವುದನ್ನು ನಾವು ಕಾಣಬಹುದಾಗಿದೆ.

| **ಮೂಲ ಸ್ಥಳನಾಮ** | **ಬದಲಾವಣೆಗೊಂಡ ಸ್ಥಳನಾಮ** |
|---|---|
| ಕಣಿಮೆಹಳ್ಳಿ | ಯಶವಂತಪುರ |
| ಕ್ವಾನಾಪುರ | ದೌಲತ್‌ಪುರ |
| ಎತ್ತಿನಹಟ್ಟಿ | ತಾರಾನಗರ |
| ಚಿಕ್ಕಸೊಂಡೂರು | ಲಕ್ಷ್ಮೀಪುರ |
| ನವಲಹಟ್ಟಿ | ವಿಠಲನಗರ |
| ಹೊಸಹಳ್ಳಿ | ಭುಜಂಗನಗರ |
| ಮುದುಕಲಪೇಟೆ | ರಣಜಿತ್‌ಪುರ |
| ಮ್ಯಾದಾರ್‌ಹಳ್ಳಿ | ಜಯಸಿಂಗಪುರ |
| ಬಾವಿಹಳ್ಳಿ | ಸುಶೀಲನಗರ |
| ನರಸಾಪುರ | ನರಸಿಂಗಾಪುರ |

(ದೇವೇಂದ್ರಪ್ಪ ಜಾಜಿ, ೨೦೦೪, ಪುಟ–೨೭೨)

ಈ ಮೇಲೆ ತಿಳಿಸಿದ ಪಟ್ಟಿಯಲ್ಲಿ ಘೋರ್ಪಡೆ ವಂಶಸ್ಥರು ತಮ್ಮ ಸಂಬಂಧಿಕರಾದ ಮುರಾರಿರಾವ್, ಕೃಷ್ಣೋಜಿರಾವ್, ಭುಜಂಗರಾವ್, ಯಶವಂತರಾವ್, ಸುಶೀಲ, ತಾರಾ ಲಕ್ಷ್ಮಿ ಹೀಗೆ ಈ ಹೆಸರುಗಳನ್ನು ಬಳಸಿಕೊಂಡು, ಮೂಲ ಸ್ಥಳನಾಮಗಳನ್ನು ಮರೆಗೆ ಸರಿಸಿರುವುದನ್ನು ಗುರುತಿಸಬಹುದು. ಅಲ್ಲದೆ ಬದಲಾವಣೆಗೊಂಡಂತಹ ಹೆಸರುಗಳು ಇಂದು ದಾಖಲೆಯಾಗಿವೆ. ಹಿರಿಯರಲ್ಲಿ, ಗ್ರಾಮೀಣ ಆಡು ನುಡಿಯಲ್ಲಿ, ದೈನಂದಿನ ವ್ಯವಹಾರಗಳಲ್ಲಿ ಮೂಲ ಹೆಸರುಗಳನ್ನೇ ಬಳಸುವುದು ಕಂಡುಬರುತ್ತಿದೆ. ಆದರೆ ರಾಜಕಾರಣದ ಪ್ರಭಾವದಿಂದ ಮೂಲ ಹೆಸರುಗಳೊಂದಿಗೆ ತಳುಕುಹಾಕಿಕೊಂಡಿರುವ ಸಾಂಸ್ಕೃತಿಕ ಅಂಶಗಳು ಮರೆಯಾಗುವ ಸಾಧ್ಯತೆಗಳಿವೆ. ಅದರಂತೆ ಸುಬ್ಬರಾಯನಹಳ್ಳಿ, ರಾಧಾನಗರ, ಕೃಷ್ಣಾನಗರ, ಧರ್ಮಾಪುರ, ರಾಜಾಪುರ, ರಾಮಗಡ, ವೆಂಕಟಗಿರಿ ತಾಂಡಾ ಮುಂತಾದ ಸ್ಥಳನಾಮಗಳು ಆಧುನಿಕ ರಾಜಕಾರಣದ ಪ್ರಭಾವದಿಂದ ಆ ವಂಶಸ್ಥರ ಹೆಸರುಗಳೇ ಇರುವುದು ತಿಳಿದುಬರುತ್ತದೆ.

ಆಧುನಿಕ ಜಗತ್ತಿನಲ್ಲಿ ಬದುಕುತ್ತಿರುವ ಸಮಕಾಲೀನ ಜನಜೀವನವು ಹೊಸದನ್ನು ಪ್ಯಾಶನ್ನಾಗಿ ಸ್ವೀಕರಿಸಿ, ಅದನ್ನು ಬೆಳೆಸುವ ವಕ್ತಾರರಂತೆ ಮುನ್ನುಗ್ಗುವುದರಿಂದ ಸಂಸ್ಕೃತಿಯ, ಪರಂಪರೆಯ ಅರಿವು ಮರೆಯಾಗತ್ತದೆ. ಆ ಎಚ್ಚರವಿದ್ದಲ್ಲಿ ಜಾಗೃತರಾಗಿ ಪರಂಪರೆಯ ಉಳಿಯುವಿಕೆಗಾಗಿ ಸ್ಥಳೀಯರೇ ಹೊಣೆಯನ್ನು ಹೊರಬೇಕಾಗುತ್ತದೆ. ಇದರೊಂದಿಗೆ ಸರ್ಕಾರವು ಬೆಂಬಲ ನೀಡುತ್ತದೆ. ಸ್ವಾತಂತ್ರ್ಯ ನಂತರದಲ್ಲಿ ಸರ್ಕಾರವು ಈ ಬಗ್ಗೆ ಕಾನೂನನ್ನು ಹೊರಡಿಸಿ, ಯಾವುದೇ ಕಾರಣವಿಲ್ಲದೇ ಗ್ರಾಮನಾಮಗಳ ಅಥವಾ ಸ್ಥಳನಾಮಗಳ ಹೆಸರುಗಳನ್ನು ಬದಲಿಸುವಂತಿಲ್ಲ ಎಂಬ ಸೂಚನೆಯನ್ನು ನೀಡಿದೆ.

**ಬ. ವಿಜಯನಗರದ ಅರಸರ ಪ್ರಭಾವ:** "ವಿಜಯನಗರದ ಅರಸರು ಹಂಪೆಯ ವಿರೂಪಾಕ್ಷನನ್ನು ಸಾಮ್ರಾಜ್ಯದ ಅಧಿದೇವತೆಯಾಗಿ ಸ್ವೀಕರಿಸಿ, ಆ ದೈವದ ಪ್ರತಿನಿಧಿಗಳಾಗಿ ರಾಜ್ಯವಾಳಿದರು. ತಮ್ಮ ಶಾಸನಗಳನ್ನು ಶ್ರೀ ವಿರೂಪಾಕ್ಷ ಎಂಬ ಅಂಕಿತದಲ್ಲಿ ಹೊರಡಿಸುತ್ತಿದ್ದರು. ಮತ್ತು ಅದನ್ನು ಕನ್ನಡದಲ್ಲಿ ಹಾಕಿಸಿರುವುದನ್ನು ನೋಡಿದಾಗ ಇವರು ಕನ್ನಡನಾಡು, ನುಡಿ, ಸಂಸ್ಕೃತಿ ಬಗೆಗೆ ವಿಶೇಷವಾದ ಪ್ರೀತಿ ಗೌರವ ಹೊಂದಿದ್ದರೆಂದು ಹೇಳಬಹುದು. ರಾಜಧಾನಿ ನಗರವು ವಿವಿಧ ಹೆಸರುಗಳಿಂದ ಉಲ್ಲೇಖಿಸಲ್ಪಟ್ಟಿದೆ. ಅವುಗಳೆಂದರೆ, ಆನೆಗೊಂದಿ, ಕುಂಜರಕೋಣ, ವಿರೂಪಾಕ್ಷಪುರ, ಹೊಸಪಟ್ಟಣ, ಹೊಸ ಹಂಪೆಯ ಪಟ್ಟಣ, ಹಂಪೆ ಹಸ್ತಿನಾವತಿ, ವಿದ್ಯಾನಗರ, ವಿಜಯನಗರ." (ದೇಸಾಯಿ ಪಿ.ಬಿ., ವಿಜಯನಗರ ಸಾಮ್ರಾಜ್ಯ, ಸ್ಮರಣೋತ್ತರ ಮಂಡಳಿ, ಧಾರವಾಡ, ೧೯೩೬)

ಹೀಗೆ ಅನೇಕ ಹೆಸರುಗಳನ್ನಿಟ್ಟುಕೊಂಡು, ಸಂಗಮ, ಸಾಳುವ, ತುಳುವ, ಅರವೀಡು ವಂಶಗಳು ವಿಜಯನಗರ ಸಾಮ್ರಾಜ್ಯವನ್ನು ಆಳಿದವು. ಅದರಲ್ಲಿ ಪ್ರೌಢದೇವರಾಯ, ಶ್ರೀಕೃಷ್ಣದೇವರಾಯ, ಅಳಿಯರಾಮರಾಯ ಇನ್ನೂ ಅನೇಕ ಪ್ರಸಿದ್ಧ ರಾಜರು ಆಳ್ವಿಕೆಯನ್ನು ನಡೆಸಿದ್ದಾರೆ. ಇವರ ಕಾಲಾವಧಿಯಲ್ಲಿ ಅನೇಕ ಸ್ಥಳನಾಮಗಳನ್ನು ಪುನರ್‌ನಾಮಕರಣ ಮಾಡಲಾಯಿತು. ಮತ್ತು ಹೊಸದಾಗಿ ಸೃಷ್ಟಿಯಾದ ಊರುಗಳಿಗೆ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಪಟ್ಟಂತಹ ಹೆಸರುಗಳನ್ನು ಇಡಲಾಯ್ತು ಅವುಗಳನ್ನು ಮಾದರಿಗಾಗಿ ಮುಂದೆ ನೋಡೋಣ.

ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಒಂದು ಗ್ರಾಮವು ಅಥವಾ ಸ್ಥಳವು ಪಡೆದುಕೊಂಡಿರುವ ಸ್ಥಿತ್ಯಂತರಗಳನ್ನು ವಸ್ತುನಿಷ್ಠವಾಗಿ ಸಂಶೋಧಿಸಿದರೆ ಅವುಗಳ ಪುನರ್‌ನಾಮಕರಣದ ವೈಶಿಷ್ಟ್ಯಗಳು ತಿಳಿಯುತ್ತವೆ. ಮೂಲತಃ ಸ್ಥಳೀಯರೇ ತಮ್ಮ ನೆಲೆಗಳಿಗೆ ಇಟ್ಟುಕೊಂಡ ಹೆಸರನ್ನು ಆ ಪ್ರಾಂತ್ಯದ ಅಥವಾ ಆಕ್ರಮಿತಿ ಪ್ರಭುತ್ವದ ಜನತೆಯು, ಒಂದು ಘಟನೆಯ ನೆನಪಿಗಾಗಿ ಬದಲಾಯಿಸಿ, ಪುನರ್‌ನಾಮಕರಣ ಮಾಡಿದುದು ತಿಳಿಯುತ್ತದೆ. ಯುದ್ಧದ ವಿಜಯವಲ್ಲದೆ ರಾಜನ ತಂದೆ, ತಾಯಿಯ ಆತನ ಮಕ್ಕಳ ನೆನಪಿಗಾಗಿಯೂ ಅನೇಕ ಗ್ರಾಮಗಳಿಗೆ ಪ್ರತಿನಾಮಕರಣ ಮಾಡಿದ್ದನ್ನೂ ಶಾಸನಗಳು ತಿಳಿಸುತ್ತವೆ. ವಿಜಯನಗರ ಕಾಲದ ಗ್ರಾಮಗಳ ಪ್ರತಿನಾಮಕರಣವನ್ನು ಈ ಕೆಳಗಿನಂತೆ ಗುರುತಿಸಬಹುದು. ಉದಾಹರಣೆಗೆ,

ನಾಗೇನಹಳ್ಳಿಗೆ – ನಾಗಲಾಪುರ

ಹಂಪಾದೇವನಹಳ್ಳಿ – ಶ್ರೀಕೃಷ್ಣರಾಮಾಪುರ

ಸೋಮಲಾಪುರ– ವಿರುಪಾಕ್ಷಪುರ

ದೇವಲಾಪುರ – ಮಲ್ಲಿಕಾರ್ಜುನಪುರ

ಗಂಗಲಾಪುರ– ಚಾಜರಕಲ್ಲು

ಕ್ರಿಯಾಶಕ್ತಿಪುರ – ಭೂಪಸಮುದ್ರ

ಗಾದಿಗಲೇರು – ಬುಕ್ಕರಾಯಪುರ

ಗೊರವನಹಳ್ಳಿ – ಲಕ್ಷ್ಮಿಸಾಗರ

ತೀರ್ಥ – ಹಿರೇಹಾಳು

ನಂದಲಪಾಡು – ವೀರನರಸಿಂಹರಾಯಪುರಂ

ಬೆಳಗುಪ್ಪ – ವೀರನರಸಿಂಹ ರಾಯಪುರ

ಮುತ್ಯಾಲಚೆರವು – ತಿಮ್ಮಸಮುದ್ರ

ಹೊರಮಲೆನಾಡು – ಅಚ್ಯುತರಾಯಪುರ

ಹೀಗೆ ಮುಂತಾದ ಉದಾಹರಣೆಗಳನ್ನು ನೋಡಬಹುದು. ಜೊತೆಗೆ ವಿಜಯನಗರದ ಕಾಲಾವಧಿಯಲ್ಲಿ ಜನರು ಹೆದರಿಕೊಂಡೋ ಅಥವಾ ವಿರೂಪಾಕ್ಷನ ದೈವಶಕ್ತಿಯಿಂದಲೋ, ರಾಜನನ್ನು ನೆನಪಿಸುವುದಕ್ಕೋಸ್ಕರವೋ ಅನೇಕ ಕಾರಣಗಳಿಂದ ಬಳ್ಳಾರಿ ಪರಿಸರದಲ್ಲಿ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಮತ್ತು ರಾಜರಿಗೆ ಸಂಬಂಧಿಸಿದ ಸ್ಥಳಗಳನ್ನು ನೋಡಬಹುದು.

ಅನಂತಶಯನ ಗುಡಿ, ಕೃಷ್ಣಾಪುರ, ತಿಮ್ಮಲಾಪುರ, ದೇವಲಾಪುರ, ದೇವಸಮುದ್ರ, ನಾಗಲಾಪುರ, ನಾಗೇನಹಳ್ಳಿ, ಬುಕ್ಕಸಾಗರ, ಮಲಪನಗುಡಿ, ವೆಂಕಟಾಪುರ, ಹಂಪಾದೇವನಹಳ್ಳಿ, ಹಂಪಾಪಟ್ಟಣ, ಹಂಪಿನಕಟ್ಟೆ, ಹಂಪಾಸಾಗರ.

ಕೃಷ್ಣದೇವರಾಯನು ತನ್ನ ಮಗನಾದ ತಿರುಮಲರಾಯನ ಹೆಸರಿನಲ್ಲಿ ಸಾಲೆತಿರುಮಲ ಮಹಾರಾಯಪುರ ಎಂಬ ಗ್ರಾಮವನ್ನು ನಿರ್ಮಿಸಿ, ಅಲ್ಲಿ ಅನಂತಪದ್ಮನಾಭ ದೇವರ ದೇವಾಲಯವನ್ನು ಕಟ್ಟಿಸಿದನೆಂದು ವಿದ್ವಾಂಸರು ಹೇಳುತ್ತಾರೆ ಅದು ಈಗ ಅನಂತಶಯನ ಗುಡಿಯಾಗಿದೆ. ಈ ಊರನ್ನು ತನ್ನ ಮಗನಿಗಾಗಿ, ಆತನ ಹೆಸರು ಉಳಿಯಲೆಂದು ಕಟ್ಟಿಸಿರುವುದು ತಿಳಿದುಬರುತ್ತದೆ.

ಹಾಗೆಯೇ ತನ್ನ ಹೆಂಡತಿಯರಾದ ತಿರುಮಲಾಂಬಿಕೆ, ನಾಗಲಾಂಬಿಕೆಯರ ಹೆಸರಿನಲ್ಲಿಯೂ ಸ್ಥಳಗಳನ್ನು ನಿರ್ಮಿಸಿದ್ದಾನೆಂಬುದು ಮೇಲಿನ ಉದಾಹರಣೆಗಳಿಂದ ತಿಳಿದುಬರುತ್ತದೆ. ಉದಾಹರಣೆಗೆ ಹೊಸಪೇಟೆ ತಾಲೂಕಿನಲ್ಲಿರುವ ತಿಮಲಾಪುರವೇ ಮೊದಲು ತಿರುಮಲಾಪುರವಿದ್ದಿರಬೇಕು ಆದರೆ ಈಗ ತಿಮ್ಮಲಾಪುರವೇ ಪ್ರಚಲಿತದಲ್ಲಿರುವುದನ್ನು ಕಾಣಬಹುದು.

ವಿಜಯನಗರದ ಅರಸನು ಮಲ್ಲಪ್ಪನಾಯಕನಿಗೆ ಉಂಬಳಿಯಾಗಿ 'ಮಲಪನಗುಡಿ'ಯನ್ನು ಕೊಟ್ಟನೆಂದು ತಿಳಿಯುತ್ತದೆ. ಅದು ಆತನ ಹೆಸರಿನಿಂದಲೇ 'ಮಲ್ಲಪ್ಪನಗುಡಿ'ಯಾಗಿತ್ತಂತೆ. ಮುಂದೆ ಲ ಮತ್ತು ಪ ಅಕ್ಷರಗಳ ಒತ್ತಕ್ಷರಗಳು ಜನರ ಬಾಯಲ್ಲಿ ಮಾಯವಾಗಿ 'ಮಲಪನಗುಡಿ'ಯಾಗಿದೆ. ಒಟ್ಟಾರೆ ಅಧಿಕಾರದಿಂದಾಗಿ ಅನೇಕ ಗ್ರಾಮಗಳಿಗೆ ಹೆಸರನ್ನು ವಿಜಯನಗರದ ಅರಸರು ಕೊಟ್ಟಿದ್ದರು ಎಂಬುದನ್ನು ಮೇಲಿನ ಉದಾಹರಣೆಗಳ ಮೂಲಕ ತಿಳಿಯಬಹುದಾಗಿದೆ. ಜೊತೆಗೆ ಜನರು ಕೂಡಾ ದೈವಭಕ್ತಿಗೆ ಮಾರುಹೋಗಿ ಹಂಪಮ್ಮ ಮತ್ತು ಪಂಪಾಪತಿ, ವಿರೂಪಾಕ್ಷನನ್ನು ನೆನಪಿಸುವಂತಹ ಗ್ರಾಮಗಳನ್ನು ನಿರ್ಮಿಸಿದ್ದಾರೆ.

**ಕ. ಕುಮ್ಮಟದ ಅರಸರ ಪ್ರಭಾವ:** ಹಂಪೆ ಪರಿಸರದಲ್ಲಿರುವ ಆನೆಗೊಂದಿಗೆ ಹತ್ತಿರದಲ್ಲಿರುವ ಕುಮ್ಮಟವನ್ನು ಕೇಂದ್ರವಾಗಿರಿಸಿಕೊಂಡು ಕುಮಾರರಾಮನ ವಂಶಜರು ಆಳ್ವಿಕೆ ನಡೆಸಿದುದರಿಂದ ಇವರನ್ನು ಕಮ್ಮಟದ ಅರಸರೆಂದೇ ಗುರುತಿಸಲಾಗುತ್ತದೆ.

"ಕುಮಾರರಾಮ ಕೇವಲ ಆನೆಗೊಂದಿ ಪರಿಸರದಲ್ಲಿ ಒಂದೇಯಲ್ಲದೇ ಇಡೀ ಕರ್ನಾಟಕದಾದ್ಯಂತ ಆತನನ್ನು ಜನಪದ ನಾಯಕನಾಗಿ, ದೈವವಾಗಿ ಕಂಡಿರುವುದನ್ನು ನೋಡುತ್ತೇವೆ. ಕುಮಾರರಾಮನನ್ನು ಆರಾಧಿಸುವವರಲ್ಲಿ ಎಲ್ಲಾ ಸಮುದಾಯದವರಿದ್ದರೂ ಕೂಡಾ ಮೂಲತಃ ನಾಯಕ ಸಮುದಾಯದವರು ತಮ್ಮ ಮನೆ ದೈವವಾಗಿ ಕುಮಾರರಾಮನನ್ನು ಆರಾಧಿಸುತ್ತಾರೆ. ಕುಮಾರರಾಮನ ಭಕ್ತರಲ್ಲಿ ಇವನ ವಂಶಸ್ಥರು ನಾಯಕ ಸಮುದಾಯದವರೆಂದು ಕೆಲವರು ಅಭಿಪ್ರಾಯಪಟ್ಟರೆ, ಇನ್ನು ಕೆಲವರು ಗಂಗಾಮತಸ್ಥ, ಕುರುಬ ಸಮುದಾಯದವರೆಂದು ಕೆಲವರು ಅಭಿಪ್ರಾಯಪಡುತ್ತಾರೆ." (ದಿವಾಕರ ಆರ್.ಬಿ., ಕರ್ನಾಟಕದಲ್ಲಿ ಕುಮಾರರಾಮನ ಹಬ್ಬ ಜಾತ್ರೆಗಳು, ಗಂಗೋತ್ರಿ ಪ್ರಕಾಶನ, ರಾಮಸಾಗರ, ೨೦೧೪)

ಕುಮ್ಮಟ ಅರಸರ ಪ್ರಭಾವದಿಂದಲೂ ಕೆಲವೊಂದು ಸ್ಥಳನಾಮಗಳು ಹುಟ್ಟಿಕೊಂಡಿರುವುದನ್ನು ಮಾದರಿಗಾಗಿ ಕೆಲವೊಂದು ನೋಡಬಹುದು. ಉದಾಹರಣೆಗೆ ರಾಮಸಾಗರ, ರಾಮನಮಲೆ, ರಾಮಘಡ, ಕಂಪಿಲ, ಗಡಿದುರ್ಗ ಮುಂತಾದವುಗಳು.

**ಡ. ಇಸ್ಲಾಂ ಅರಸರ ಪ್ರಭಾವ:** ಇಸ್ಲಾಂ ಧರ್ಮವು ಅರಬ್ ದೇಶದಲ್ಲಿ ಏಳನೆಯ ಶತಮಾನದಲ್ಲಿ ಉಗಮವಾಗಿ ಒಂದೆರಡು ಶತಮಾನದಲ್ಲೇ ಸುತ್ತಮುತ್ತ ಹರಡಿದ್ದಾಗಿ ತಿಳಿದುಬರುತ್ತದೆ. ಅರಬ್ಬೀ ವ್ಯಾಪಾರಸ್ಥರು ಕರ್ನಾಟಕದ ಪಶ್ಚಿಮ ತೀರದ ಪ್ರದೇಶಗಳೊಡನೆ ವ್ಯಾಪಾರ ನಡೆಸುತ್ತಿದ್ದರೆಂದು ತಿಳಿಯುವುದರಿಂದ ಸುಮಾರು ಈ ಕಾಲದಲ್ಲಿ ಇಸ್ಲಾಂ ಧರ್ಮ ಕರ್ನಾಟಕಕ್ಕೆ ಮೊದಲು ಬಂದಿತೆಂದು ತೋರುತ್ತದೆ. ರಾಷ್ಟ್ರಕೂಟ ಅರಸರ ಕಾಲದಲ್ಲಿ ಅವರ ರಾಜ್ಯದಲ್ಲಿ ಇಸ್ಲಾಂಮೀಯರು ಇದ್ದಂತೆಯೂ, ಸ್ಥಳೀಯ ಜನರ ವೇಷಭೂಷಣ ಧರಿಸುತ್ತಿದ್ದರೆಂದೂ ಕೆಲವು ಅರಬ್ಬೀ ಲೇಖಕರು ಹೇಳಿದ್ದಾರೆ. ಸುಮಾರು ೯೨೬ರ ಒಂದು ಶಾಸನದಲ್ಲಿ ಅರಬ್ಬಿಯೊಬ್ಬ ರಾಷ್ಟ್ರಕೂಟರಲ್ಲಿ ಪ್ರಾಂತ್ಯಾಧಿಕಾರಿಯಾಗಿದ್ದ ಎಂಬ ಉಲ್ಲೇಖಗಳಿವೆ.

ಮಲ್ಲಿಕಾಫರ್‌ನ ದಂಡೆಯಾತ್ರೆ ಮತ್ತು ಬಹುಮನೀ ಸಾಮ್ರಾಜ್ಯ ಸ್ಥಾಪನೆಯಾದೊಡನೆ ಇಸ್ಲಾಂ ಧರ್ಮ ತ್ವರಿತವಾಗಿ ಹರಡಲಾರಂಭಿಸಿತು. ಅದರ ಅಧಿಕಾರ ದಕ್ಷಿಣದಲ್ಲಿ ನೆಲೆಯೂರಿದ ಮೇಲೆ ಆ ಜನರು ಹೆಚ್ಚು ಕರ್ನಾಟಕದಲ್ಲಿ ನೆಲೆಸಲಾರಂಭಿಸಿದರು. ನಂತರ ಬಹುಮನಿ ಆ ರಾಜ್ಯದ ಐದು ಶಾಹಿ ಮನೆತನಗಳು, ಔರಂಗಜೇಬ್, ಹೈದರಾಲಿ, ಟಿಪ್ಪುಸುಲ್ತಾನ ಇವರುಗಳ ಕಾಲದಲ್ಲಿ ಇಸ್ಲಾಂ ಧರ್ಮ ವಿಶೇಷವಾಗಿ ಪ್ರೋತ್ಸಾಹ ಗಳಿಸಿ ಅನುಯಾಯಿಗಳ ಸಂಖ್ಯೆಯು ವರ್ಧಿಸಿ ಇಸ್ಲಾಂ ಸಂಸ್ಕೃತಿ ಬಹುಮುಖವಾಗಿ ಪಸರಿಸಿತು.

ಗುಲ್ಬರ್ಗಾದ ಪ್ರತಾಪಗಡದಲ್ಲಿ ಅಫಜಲಖಾನನು ಶಿವಾಜಿಯ ವಿರುದ್ಧದ ಹೋರಾಟದಲ್ಲಿ ಮಡಿದಿದ್ದರಿಂದ ಆ ಸ್ಥಳಕ್ಕೆ ಅಫಜಲಪುರ ಎಂದು ಪುನರ್‌ನಾಮಕರಣವಾಗಿರುವುದು ತಿಳಿದುಬರುತ್ತದೆ. ಕರ್ನಾಟಕದ ಉತ್ತರ ಭಾಗದ ಜಿಲ್ಲೆಗಳಲ್ಲಿನ ಸ್ಥಳನಾಮಗಳ ಬದಲಾವಣೆ ಕಾರ್ಯದ ಮೇಲೆ ಇಸ್ಲಾಮಿ ಆಡಳಿತ ಮತ್ತು ಭಾಷೆ ಉಂಟುಮಾಡಿರಬಹುದಾದ ಪ್ರಭಾವ ಗಣನೀಯವಾದುದು. ಉದಾಹರಣೆಗೆ ಗುಲ್ಬರ್ಗಾ ಜಿಲ್ಲೆಯ ಕೆಲ ಸ್ಥಳನಾಮಗಳು ಹೀಗಿವೆ ಅಫಜಲಪುರ, ಕಿನಿಸುಲ್ತಾನ, ಖದಿರಾಬಾದ್, ಆಝಾದ್‌ಪುರ, ಬಫರಾಬಾದ್, ಫರಹತಾಬಾದ್, ಪಿರೋಜಾಬಾದ್, ಬಹಮನಿಪುರ, ಸುಲ್ತಾನಪುರ ಮುಂತಾದವುಗಳು.

ಯಾದಗಿರಿ ಜಿಲ್ಲೆಯಲ್ಲಿ ದಸ್ತರಾಬಾದ್, ನವಾಬುರುಜು, ಸುರಪುರದ ಚಿಜಾಸಪುರ, ಸೇಡಂನ ತುರುಕಬೊಮ್ಮನಹಳ್ಳಿ, ಬೊಮ್ಮನಹಳ್ಳಿ ಎಂಬ ವಾರ್ಗಿಕವು ಪುನರ್‌ನಾಮಕರಣ ಆದಮೇಲೂ, ಉಳಿದು ಬಂದಿರುವುದು ಅಚ್ಚರಿ ಎನಿಸಿದರೂ ಇದಕ್ಕೆ ಕಾರಣವಿಲ್ಲದೇ ಇಲ್ಲವೆನಿಸುತ್ತದೆ. ಯಾವುದೋ ಕಾರಣಕ್ಕಾಗಿ ಸ್ಥಳನಾಮ ಪರಿವರ್ತನೆಯಾದ ಸಂದರ್ಭದಲ್ಲಿ ಕೆಲವು ಕಾಲ ಎರಡೂ ಹೆಸರುಗಳು ಬಳಕೆಯಲ್ಲಿದ್ದು ಕಾಲಕ್ರಮೇಣ ಹಳೆಯ ಹೆಸರು ಬಳಕೆಯಿಂದ ಬಿದ್ದು ಹೋಗಿ, ಹೊಸ ಹೆಸರು ಉಳಿದುಬರುತ್ತದೆ ಒಮ್ಮೊಮ್ಮೆ ಹೊಸ ಹೆಸರೇ ಬಳಕೆಯಿಂದ ತಪ್ಪಿಹೋಗಿ ಹಳೆಯ ಹೆಸರು ಉಳಿಯಬಹುದು. ಸಾಮಾನ್ಯವಾಗಿ ಯಾವುದೋ ರಾಜಕೀಯ ಕಾರಣಕ್ಕಾಗಿ ಒತ್ತಾಯಪೂರ್ವಕವಾಗಿ ಪರಿವರ್ತನೆ ಮಾಡಿದ ಅಥವಾ ದೊರೆಗಳ ಹೆಸರು ಇರುವ ಕಡೆಗಳಲ್ಲಿ ಹೀಗೆ ಆಗುವುದುಂಟು.

ಸುಲ್ತಾನಪುರ ಎಂಬ ಸ್ಥಳನಾಮವು ಹತ್ತಾರು ಕಡೆಗಳಲ್ಲಿ ಸ್ಥಾಪನೆಯಾಗಿರುವುದು ಗೋಚರಿಸುತ್ತದೆ. ಇಂಥ ಕಡೆಗಳಲ್ಲಿ ಊರುಗಳ ಸಂಖ್ಯೆ ಬೆಳೆದಂತೆ ಅವುಗಳಿಗೆ ಹೆಸರುಗಳನ್ನು ಕೊಡುವ ಅಗತ್ಯತೆ ಕಂಡುಬಂದಾಗ ಪುನರಾವರ್ತನೆಯಾಗುವ ಸಂಭವಗಳಿವೆ. ಇಲ್ಲವೇ ವ್ಯಕ್ತಿಯ ಗೌರವ, ವಿಶ್ವಾಸ ಇವುಗಳ ಕಾರಣದಿಂದಾಗಿ ಒಂದೇ ಹೆಸರಿನ ಹಲವು ಕಡೆ ಜಾರಿಯಲ್ಲಿ ಬಂದಿರುತ್ತವೆ. ಬಳ್ಳಾರಿ ಪರಿಸರದಲ್ಲಿಯೂ 'ಸುಲ್ತಾನಪುರ' ಎಂಬ ಊರುಗಳಿರುವುದನ್ನು ಗಮನಿಸಬಹುದು.

ಬೀದರ್ ಜಿಲ್ಲೆಯಲ್ಲಿ ಇಸ್ಲಾಮಿ ಪ್ರಭಾವದಿಂದಾಗಿ ಆದಂತಹ ಸ್ಥಳನಾಮ ಪರಿವರ್ತನೆ ಬೇರಾವ ಜಿಲ್ಲೆಯಲ್ಲೂ ಕಾಣಬರದು. ಉದಾಹರಣೆಗೆ,

| | |
|---|---|
| ಜಮಾಲ್‌ಪುರ | ದಾದಾಪುರ |
| ಖಾಸಿಪುರ | ನೇಮತಾಬಾದ್ |
| ಮೊಹಮ್ಮದಾಪುರ | ಬಂದಾಬಾದ |
| ಇಸ್ಲಾಂಪುರ | ನೌಬಾದ್ |
| ಮುತ್ತಾಪುರ | ನಿಜಾಮಪುರ |
| ಆಲ್ಮಸ್‌ಪುರ | ಬಾಗೆ-ಇ-ಇಬ್ರಾಹಿಂ |
| ಅಲ್ಲಾಪುರ | ಶಂಶೀರನಗರ |
| ಇಮಾಮ್‌ಪುರ | ಶೇಖಪುರ |
| ಇಮಾಮಬಾದ್ | ಶೇರ್-ಇ-ಚಂಪಾ |
| ಇಸ್ಲಾಂಪುರ-೨ | ಶೇರ್-ಇ-ಹುಸೈನಿ |
| ಝುಮಿಸ್ತಪುರ | ಸಿಕಂದರಪುರ |
| ಅವಿಯಾಬಾದ್ | ಜಾಗೀರ ಸುಲ್ತಾನಪುರ |
| ಖಾದರನಗರ | ಖದೀಮ ಸುಲ್ತಾನಪುರ |
| ಗೌಸಪುರ | ಅಲಿಯಾಬಾದ್ |
| ತಾಜಲಪುರ | ಅಹಮದಾಬಾದ್ |
| ಹುಮನಾಬಾದ್ | ಸಿಕದಂರಬಾದ್ |
| ಬಶೀರ್‌ಪುರ | ಜಮಾಲ್‌ಪುರ |
| ಹಿಲಾಲ್‌ಪುರ | ಶಮತಾಬಾದ್ |

ಕರ್ನಾಟಕದ ಉತ್ತರಭಾಗದ ಜಿಲ್ಲೆಗಳಲ್ಲಿ, ವಿಶೇಷವಾಗಿ ಬೀದರ್ ಮತ್ತು ಗುಲಬರ್ಗಾ ಜಿಲ್ಲೆಗಳಲ್ಲಿ ಸ್ಥಳನಾಮ ಬದಲಾವಣೆಯ ಕಾರ್ಯ ಇತರೆ ಜಿಲ್ಲೆಗಳಾದ ಧಾರವಾಡ, ಬಿಜಾಪುರ, ಬಳ್ಳಾರಿ ಮತ್ತು ರಾಯಚೂರುಗಳಿಗೆ ಹೋಲಿಸಿದಾಗ ಅಧಿಕ ಪ್ರಮಾಣದಲ್ಲಿ ನಡೆದಿರುವಂತೆ ಕಾಣುತ್ತದೆ.

ಬಳ್ಳಾರಿ ಪರಿಸರದಲ್ಲಿ ಸ್ಥಳಗಳ ಮರುನಾಮಕರಣ ನಡೆದ ಬಗ್ಗೆ ಕೆಳಗಿನ ಉದಾಹರಣೆಗಳಿಂದ ನೋಡಬಹುದು.

ಕೂಡ್ಲಿಗಿ ತಾಲೂಕಿನಲ್ಲಿ ಇಮಡಾಪುರ, ಅಮರಾಪುರ ಸಿ, ಬಡೇಲಡಕು

ಬಳ್ಳಾರಿ ತಾಲೂಕು ಇಬ್ರಾಹಿಮಪುರ, ಇಬ್ರಾಹಿಂಪುರ–೨

ಸಿರುಗುಪ್ಪ ತಾಲೂಕು ಇಬ್ರಾಹಿಮಪುರ

ಸಂಡೂರು ತಾಲೂಕು– ದೌಲತ್‌ಪುರ, ಕ್ವಾನಾಪುರ

ಹಗರಿಬೊಮ್ಮನಹಳ್ಳಿ ತಾಲೂಕು– ಪಿಂಜಾರ್ ಹೆಗ್ಡಾಳ್, ಲಡಕನಬಾವಿ

ಹೊಸಪೇಟೆ ತಾಲೂಕು ತುರುಕರ ಓಣಿ (ಕುತ್ತಂಗಲ್ಲಿ)

ಮಾನ್ವಿ ತಾಲೂಕು – ಸೈದಾಪುರ, ಮಲ್ಲಿಕ್‌ಪುರು (ಮಲಕಾಪುರ)

ಕೊಪ್ಪಳ ತಾಲೂಕು – ಹುಸೇನ್‌ಪುರ, ಹೈದರ್‌ನಗರ

ಸ್ಥಳ ನಿವಾಸಿಗಳಿಗೆ ರೂಢಿಯಲ್ಲಿ ಬಂದಿರುವ ಹೆಸರು ಯಾವುದೇ ಕಾರಣಕ್ಕೆ ಬೇಡವಾಯಿತೆಂದರೆ ಅದರ ಬದಲಿಗೆ ಬೇರೊಂದು ಹೆಸರು ರಾರಾಜಿಸುತ್ತದೆ. ಉದಾಹರಣೆಗೆ ಹೊಸಪೇಟೆ ನಗರದಲ್ಲಿ 'ಕುತ್ತಂಗಲ್ಲಿ' ಎಂಬ ಓಣಿಯಿದೆ. ಏಕೆ ಈ ಹೆಸರು ಬಂತು ಎಂಬ ಪ್ರಶ್ನೆಯನ್ನು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಪಕ್ಕದ ಓಣಿಯವರನ್ನು ವಿಚಾರಿಸಿದಾಗ, ಅಲ್ಲಿರುವ ಹಿರಿಯರು ಈ ರೀತಿಯಲ್ಲಿ ವಿವರಿಸುತ್ತಾರೆ.

ನಮ್ಮ ಅಜ್ಜನ ಕಾಲದಿಂದಲೂ ಅದು ಹೀಗೆಯೇ ಇದೆಯಂತೆ, ಏಕೆಂದರೆ, ಆ ಓಣಿಯಲ್ಲಿರುವ ಜನರು ಯಾವಾಗಲೂ ಒಂದಲ್ಲ ಒಂದು ಕಾರಣಕ್ಕೆ ಜಗಳವಾಡುತ್ತಿದ್ದರಂತೆ ಆದ್ದರಿಂದ ಆ ಓಣಿಗೆ ಪಕ್ಕದ ಓಣಿಗಳ ಜನರು 'ನಾಯಿ ಓಣಿ' ಎಂದು ಕರೆದರಂತೆ. ಆ ಓಣಿಯಲ್ಲಿ ಮುಸ್ಲಿಂರು ಇರುವ ಕಾರಣ 'ನಾಯಿ' ಎನ್ನುವುದನ್ನು 'ಕುತ್ತ' ಎಂದು 'ಓಣಿ' ಎನ್ನುವುದನ್ನು 'ಗಲ್ಲಿ' ಎಂದು ಬದಲಾಯಿಸಿಕೊಂಡು 'ಕುತ್ತಂಗಲ್ಲಿ' ಎಂದು ಬದಲಾಯಿಸಿಕೊಂಡರಂತೆ, ಬರುಬರುತ್ತಾ 'ಕುತ್ತಂಗಲ್ಲಿ' ದಾಖಲೆಗಳಲ್ಲಿಯೂ ಪ್ರಚಾರಪಡೆಯಿತು. ಇದರಿಂದ ಆ ಓಣಿಯಲ್ಲಿದ್ದ ಮುಸ್ಲೀಮರು 'ಕುತ್ತಂಗಲ್ಲಿ'ಗೆ ಬದಲಾಗಿ ಈಗ 'ರಹಮತ್‌ನಗರ' ಎಂದು ದೈವಮೂಲದ ಹೆಸರನ್ನು ಮರುನಾಮಕರಣ ಮಾಡಿದ್ದಾರೆ.

ಮೇಲಿನ ಕಾರಣವೊಂದೇಯಲ್ಲದೇ ಸುಲ್ತಾನನು ಅಧಿಕಾರದಲ್ಲಿದ್ದಾಗ ಅವನ ಹೆಸರಿನಲ್ಲಿ ಗೌರವಾರ್ಥವಾಗಿ ಮರುನಾಮಕರಣ ನಡೆದು ಅವನು ಪದಚ್ಯುತಿ ಹೊಂದಿದ ಅಲ್ಪಾವಧಿಯಲ್ಲಿಯೇ

ಮತ್ತೆ ಹಳೆಯ ಹೆಸರು ಕಾಣಿಸಿಕೊಳ್ಳುತ್ತದೆ. ಕೊಪ್ಪಳ ಪರಿಸರದಲ್ಲಿ ಕಂಡುಬರುವ 'ಹೈದರ್‌ನಗರ'ದ ವಿಷಯದಲ್ಲಿ ಈ ರೀತಿಯಾಗಿದೆ. ಹೀಗೆ ಇಂದು ನಮ್ಮೆದುರಿಗೆ ಪ್ರಭುತ್ವ ಮತ್ತು ಭಾಷೆಯ ಪ್ರಭಾವದಿಂದಾಗಿ ಹೆಸರುಗೊಂಡ ಸ್ಥಳನಾಮಗಳು ಮಾತ್ರ ಇವೆಯೇ ಹೊರತು ಬಹುಪಾಲು ಅವುಗಳ ಮೂಲ ಹೆಸರುಗಳು ಕಣ್ಮರೆಯಾಗಿವೆ.

**೬.೩.೨. ಸಾಮಾಜಿಕ ಕಾರಣಗಳು**

ಸ್ಥಳನಾಮಗಳ ಪುನರ್‌ನಾಮಕರಣಕ್ಕೆ ಅನೇಕ ಸಾಮಾಜಿಕ ಅಂಶಗಳು ಕಾರಣವಾಗುತ್ತವೆ. ತಮ್ಮ ಊರುಗಳು ಅಶ್ಲೀಲವೆನಿಸಿದಾಗ ಅಥವಾ ಅವುಗಳ ಹೆಸರನ್ನು ಬೇರೆಯವರ ಮುಂದೆ ಹೇಳಬೇಕಾದ ಸಂದರ್ಭ ಬಂದಾಗ ಕೆಲವೊಂದು ಊರ ಹೆಸರುಗಳನ್ನು ಹೇಳಲಿಕ್ಕೇ ಮನಸ್ಸು ಕಸಿವಿಸಿಯಾಗುತ್ತದೆ. ಕಾರಣ ಊರುಗಳ ಹೆಸರೇ ಆ ರೀತಿ ಇರುತ್ತವೆ. ಹಿಂದಿನವರಿಗೆ ಅಥವಾ ಈಗಲೂ ಎಂಬತ್ತು, ತೊಂಬತ್ತು ವಯಸ್ಸು ದಾಟಿದ ಹಿರಿಯರಿಗೆ ಅಂತಹ ಊರ ಹೆಸರುಗಳನ್ನು ಹೇಳಲಿಕ್ಕೆ ಯಾವ ಮುಜುಗರವೂ ಇಲ್ಲ ಆದರೆ ಇಂದಿನ ಯುವಜನತೆಯು ಅಂತಹವುಗಳನ್ನು ಸಹಿಸಿಕೊಳ್ಳುವುದಿಲ್ಲ. ಉದಾಹರಣೆಗೆ ಕತ್ತೆಬೆನ್ನೂರು, ಬ್ಯಾಗರಾಮದಿಣ್ಣೆ, ದೊಂಬರ ಹಳ್ಳಿ, ಈ ತರಹದ ಊರುಗಳ ಹೆಸರುಗಳನ್ನು ಹೇಳಲಿಕ್ಕೆ ಅಥವಾ ದಾಖಲಾದ ಪುಸ್ತಕಗಳಲ್ಲಿ ಕಡತಗಳಲ್ಲಿ ಅವುಗಳನ್ನು ನೋಡಲಿಕ್ಕೆ, ಒಂದು ತರಹದ ಮುಜುಗರವಾಗುತ್ತದೆ. ಆದ್ದರಿಂದ ಅವರು ಆ ಊರುಗಳಿಗೆ ಬೇರೆ ಹೆಸರನ್ನು ಇಡಲಿಕ್ಕೆ ಯೋಚನೆ ಮಾಡುತ್ತಾರೆ ಮತ್ತು ಅದಕ್ಕೆ ಬೇಕಾದ ಎಲ್ಲ ತಯಾರಿಗಳನ್ನು ಮಾಡಿಕೊಂಡು ಸ್ಥಳನಾಮಗಳನ್ನಾಗಲೀ ಅಥವಾ ತಾವಿರುವ ಓಣಿಗಳ ಹೆಸರುಗಳನ್ನಾಗಲಿ ಪುನರ್‌ನಾಮಕರಣಕ್ಕೆ ಮುಂದಾಗುತ್ತಾರೆ. ಉದಾಹರಣೆಗೆ ಕರ್ನಾಟಕದ ಕೆಲವೊಂದು ಹಳ್ಳಿಗಳನ್ನು ನೋಡಬಹುದು.

ಚಿಕ್ಕಹೊಲಗೇರಿ, ಬೆಸ್ತರಹಳ್ಳಿ, ದೊಡ್ಡಹೊಲಗೇರಿ, ಸೂಳೆಕೆರೆ, ಹೊಲತಿಹಾಳ್, ಗಿಡ್ಡನಹಳ್ಳಿ, ಹುಚ್ಚವ್ವನ ಹಳ್ಳಿ, ಬುಳ್ಳಾಪುರ, ಕುರುಬರಹಟ್ಟಿ, ನಾಯಿಗೆರೆ, ಎಮ್ಮಿಗನೂರು, ವಡ್ಡರಹಟ್ಟಿ, ಎಮ್ಮಿಗುಡ್ಡು, ಕಾಚಾಪುರ, ತುರುಕರಹಟ್ಟಿ, ಪುಟಗೋಸಿಪಲ್ಲಿ.

ಈ ಮೇಲಿನ ಹೆಸರುಗಳನ್ನು ಗಮನಿಸಿದಾಗ ಯಾರಿಗಾದರೂ ಮನಸ್ಸು ಈ ಊರಿಗೆ ಹೆಸರನ್ನು ಊರು ಇಟ್ಟಿದ್ದಾರೋ ಪುಣ್ಯಾತ್ಮರು ಅವೇನ್ ಹೆಸರಾ? ಹೆಸರಿನ ಹುಟ್ಟಾ ಎಂದು ಗುನುಗುತ್ತಾರೆ. ಇಲ್ಲಿ ಹೆಸರನ್ನು ಇಟ್ಟಿರುವವರ ತಪ್ಪಲ್ಲ ಇಂದಿನ ಜನತೆಗೆ ಅವುಗಳ ಸಹಿಸಿಕೊಳ್ಳುವ ಮನಸ್ಸು ಇಲ್ಲ ಏಕೆಂದರೆ ಪ್ರತಿಯೊಬ್ಬರ ಮನಸ್ಸು ಬದಲಾವಣೆಯತ್ತ ಚಿಂತನೆಮಾಡುತ್ತಿರುತ್ತದೆ. ಹಿಂದಿನವರು ಯಾವ ಮುಲಾಜು ಇಲ್ಲದೆ ಅಲ್ಲಿ ಯಾವ ಜಾತಿಯ ಜನರಿರುತ್ತಾರೋ ಆ ಜಾತಿಯನ್ನು ಇಟ್ಟುಕೊಂಡೇ ಆ ಊರುಗಳಿಗೆ ಹೆಸರುಗಳನ್ನು ಕೊಡುತ್ತಿದ್ದರು. ಉದಾಹರಣೆಗೆ ಗೊಲ್ಲರಹಟ್ಟಿ, ಕುರುಬರಹಟ್ಟಿ, ಕೊರಚರಹಟ್ಟಿ, ಬೇಡರಹಟ್ಟಿ ಮುಂತಾದವುಗಳು.

ಬಳ್ಳಾರಿ ಪರಿಸರದಲ್ಲಿಯೂ ಸಹಾ ಇಂತಹ ಊರುಗಳನ್ನು ಮಾದರಿಗಾಗಿ ನೋಡಬಹುದು.

ಕೇವಲ ಊರುಗಳ ಹೆಸರುಗಳೊಂದೇಯಲ್ಲದೇ ತಾವಿರುವ ಓಣಿಗಳ ಹೆಸರಂತು ವಿಚಿತ್ರವಾಗಿರುತ್ತವೆ. ಉದಾಹರಣೆಗೆ

ಬ್ಯಾಗರಾಮದಿಣ್ಣೆ (ಸಿರುಗುಪ್ಪ ತಾಲೂಕು)

ಎಮ್ಮಿಹಟ್ಟಿ (ಸಂಡೂರು ತಾಲೂಕು)

ದೊಂಬರಹಟ್ಟಿ (ಹಡಗಲಿ ತಾಲೂಕು)

ವಡ್ಡರಹಳ್ಳಿ (ಹೊಸಪೇಟೆ ತಾಲೂಕು)

ಮಿಟ್ಟಿಸೂಗೂರು (ಸಿರುಗುಪ್ಪ ತಾಲೂಕು)

ಕೆಸರಕೊಂಡಿ (ಸಿರುಗುಪ್ಪ ತಾಲೂಕು)

ಮುಸುಡಿಪುರ (ಬಳ್ಳಾರಿ ತಾಲೂಕು)

ದಾಸರನಾಗೇನಹಳ್ಳಿ (ಬಳ್ಳಾರಿ ತಾಲೂಕು)

ಬೊಗ್ಗೂರು (ಸಿರುಗುಪ್ಪ ತಾಲೂಕು)

ನಾಯಿಓಣಿ (ಹೊಸಪೇಟೆ ತಾಲೂಕು)

ವಂಕಾಯಿಕ್ಯಾಂಪ್ (ಹೊಸಪೇಟೆ ತಾಲೂಕು)

ಹರಿಜನಕೇರಿ

ಮಾದ್ರಓಣಿ

ಡಂಬರಗೇರಿ

ಬ್ಯಾಗಾರ್ಓಣಿ

ಕೊರಚರಹಟ್ಟಿ (ಗರಗ – ಹೊಸಪೇಟೆ ತಾಲೂಕು)

ಸೂಳೇರ್ಓಣಿ

ಈ ತರಹದ ಹೆಸರುಗಳಿದ್ದಾಗ ಅಲ್ಲಿರುವ ಜನರಲ್ಲಿ ಊರ ಹೆಸರನ್ನು ಅಥವಾ ಓಣಿಯ ಹೆಸರನ್ನು ಬದಲಾವಣೆ ಮಾಡಿಕೊಳ್ಳಬೇಕೆಂಬ ಭಾವನೆ ಬರುವುದು ಸಹಜವಾಗಿದೆ. ಬೇರೆಯವರ ಮುಂದೆ ನಮ್ಮ ಊರಿನ ಹೆಸರನ್ನು ಹೇಳಿಕೊಳ್ಳುವುದಕ್ಕೆ ಮುಜುಗರವಾಗುತ್ತದೆ ಎನ್ನುವ ಕಾರಣಕ್ಕೆ ಊರಿನ ಅಥವಾ ಓಣಿ, ಕೇರಿಯ ಹೆಸರನ್ನು ಬದಲಾವಣೆ ಮಾಡಿಕೊಂಡಿದ್ದಾರೆ. ಉದಾಹರಣೆಗೆ,

ಬ್ಯಾಡ್ರ ಓಣಿ – ವಾಲ್ಮೀಕಿ ನಗರ

ನಾಯಿ ಓಣಿ– ರಹಮತ್‌ನಗರ

ಹರಿಜನ ಕೇರಿ –ಅಂಬೇಡ್ಕರ್‌ನಗರ

ಮಾದ್ರ ಓಣಿ – ಜಗಜೀವನ್‌ರಾಮನಗರ

ಕುರುಬರ ಓಣಿ – ಕನಕನಗರ

ಈ ರೀತಿಯಾಗಿ ಹೆಸರುಗಳನ್ನು ಬದಲಾವಣೆಯನ್ನು ಮಾಡಿಕೊಂಡಿದ್ದರೂ ಸಹಿತಾ ಅಷ್ಟು ಸುಲಭವಾಗಿ ಹಳೆಯ ಹೆಸರುಗಳು ಮಾಯವಾಗುವುದಿಲ್ಲ. ಇನ್ನೊಂದು ಉದಾಹರಣೆಯನ್ನು ಕೊಡುವುದಾದರೆ, 'ಸೂಳೆಕೆರೆ' ಈ ಕೆರೆಯು ದೊಡ್ಡದಾದ ಕೆರೆಯೆಂದು ಜನಪ್ರಿಯವಾಗಿದೆ 'ಸೂಳೆಕೆರೆ' ಎಂದಿರುವುದನ್ನು ಬದಲಾಯಿಸಿ 'ಶಾಂತಿಸಾಗರ' ಎಂದು ಕರೆದರು ಆದರೆ ಈಗಲೂ ಅಲ್ಲಿರುವ ಕೆಲವು ಜನರು 'ಸೂಳೆಕೆರೆ' ಎಂದೇ ಮಾತಿನಲ್ಲಿ ಬಳಸುತ್ತಾರೆ. ಅದೇನೆಯಾಗಲಿ ಈ ಮೇಲಿನ ತರಹದ ಹೆಸರುಗಳು ಇತ್ತೀಚಿನ ಜನತೆಗೆ ಹಿಡಿಸುತ್ತಿಲ್ಲ ಆದ್ದರಿಂದ ಕೆಲವು ಹೆಸರುಗಳ ಬದಲಾವಣೆಯು ಇಂದು ಅನಿವಾರ್ಯವಾಗಿದೆ.

### ೬.೩.೩. ಸಂಸ್ಕೃತ ಭಾಷೆಯ ಪ್ರಭಾವ

ಜನಸಾಮಾನ್ಯರ ಆಡು ಭಾಷೆಯ ಮೇಲೆ ಸಂಸ್ಕೃತ ಭಾಷೆಯು ಬೀರಿರುವ ಪ್ರಭಾವ ಕಡಿಮೆಯೆಂದೇ ಹೇಳಬೇಕು. ಆದರೆ ಗ್ರಾಂಥಿಕ ಭಾಷೆಯ ಮೇಲೆ ಅದರ ಪ್ರಭಾವ ಸ್ಪಷ್ಟವಾಗಿ ಕಾಣಬಹುದು. ಪ್ರಾಚೀನ ಶಿಲಾಶಾಸನಗಳು, ತಾಮ್ರಶಾಸನಗಳು, ಚಂಪೂಕಾವ್ಯಗಳು, ವಿವಿಧ ಸಾಹಿತ್ಯ ಪ್ರಕಾರಗಳು, ಛಂದಸ್ಸು, ಅಲಂಕಾರ, ವ್ಯಾಕರಣ, ಜೋತಿಷ್ಯ ಮುಂತಾದ ಶಾಸ್ತ್ರ ಗ್ರಂಥಗಳು ಸಂಸ್ಕೃತದಿಂದ ಹೆಚ್ಚು ಪ್ರಭಾವಗೊಂಡಿವೆ. ಸ್ಥಳಮಹಿಮೆಯನ್ನು ವಿವರಿಸುವ ಸ್ಥಳಪುರಾಣಗಳು, ರಾಜಾಮಹಾರಾಜರ ಬಿರುದಾವಳಿಗಳು ಮುಂತಾದವುಗಳನ್ನು ವರ್ಣಿಸುವಾಗ ಅನಿವಾರ್ಯವಾಗಿ ಸ್ಥಳನಾಮಗಳನ್ನು ಹೇಳಲೇಬೇಕಾದ ಸಂದರ್ಭ ಬಂದಾಗ ಸ್ಥಳೀಯ ಭಾಷೆಯಲ್ಲಿದ್ದ ಸ್ಥಳನಾಮಗಳನ್ನು ಸಂಸ್ಕೃತೀಕರಿಸಿ ಬಳಸಿಕೊಂಡಿರುವುದನ್ನು ನಾವು ಗಮನಿಸಬಹುದು. ಉದಾಹರಣೆಗೆ

ಆನೆಗೊಂದಿ– ಗಜಗಹ್ವರ

ಆನೆಕಲ್ – ಗಜಶಿಲಾ

ಕಳ್ಳಹುಣಿಸಿ –ಚೋರತಿಂತ್ರಿಣಿ

ತಲಕಾಯಿಬೆಟ್ಟ – ಮಸ್ತಕಾದ್ರಿ

ಬನ್ನೂರು –ವಹ್ನಿಕ್ಷೇತ್ರ

ಬಸರೂರು – ಗರ್ಭಪುರಿ

ಬಿದನೂರು – ವೇಣುಪುರ

ಬೆಳಗೊಳ – ದವಳತಟಾಕ

ಮೊದಲಕಲ್ಲು – ಆದಿಶಿಲಾ

ಮೊಸರಕಲ್ಲು – ದಧಿಪಾಷಾಣ

ಸಂಪಿಗೆ ಹಳ್ಳಿ – ಚಂಪಕಪುರ

ಸಕ್ಕರೆಪಟ್ಟಣ – ಮಧುರಪುರ

ಹುಲ್ಲಹಳ್ಳಿ – ತೃಣಪುರ

ಹೊಸಹಳ್ಳಿ – ನೂತನಪುರ

ಹೆಳವನಕಟ್ಟೆ – ಪಂಗುತೀರ್ಥ

**೬.೩.೪. ಇಂಗ್ಲಿಷ್ ಭಾಷೆಯ ಪ್ರಭಾವ**

ಭಾಷೆಯ ಇತರ ಘಟಕಗಳಂತೆಯೇ ಸ್ಥಳನಾಮಗಳೂ ಅನ್ಯ ಭಾಷೆ, ಸಂಸ್ಕೃತಿಯಿಂದ ಪ್ರಭಾವಗೊಳ್ಳುತ್ತವೆ. ಅಂತೆಯೇ ಇಂದು ಚಾಲ್ತಿಯಲ್ಲಿರುವ ಕನ್ನಡದ ಸ್ಥಳನಾಮಗಳನ್ನು ಗಮನಿಸಿದರೆ ಅನ್ಯಭಾಷೆ ಆಡಳಿತ ಸಂಸ್ಕೃತಿಗಳ ಪ್ರಭಾವದಿಂದಾಗಿ ಅನೇಕ ಬಗೆಯ ಪರಿವರ್ತನೆ ವ್ಯತ್ಯಾಸಗಳಿಗೆ ಒಳಗಾಗಿರುವುದನ್ನು ಕಾಣಬಹುದು.

ಕಂದಾಯ, ಭೂಮಿ, ಕಾನೂನು ಮುಂತಾದ ಆಡಳಿತ ಸಂಬಂಧೀ ಕಡತಗಳಲ್ಲಿ ಮತ್ತು ದಾಖಲೆಗಳಲ್ಲಿ ಇಂಗ್ಲಿಷರು ದಾಖಲಿಸಿರುವ ಮಾದರಿಗಳು ಮತ್ತು ನಾಮಕರಣಗಳು, ಕನ್ನಡಿಗರು ಇಂಗ್ಲಿಷ್ ಗ್ರಹಿಸುವ ರೀತಿ ಈ ಎಲ್ಲಾ ಕಾರಣಗಳೂ ಸಾಮಾನ್ಯವಾಗಿ ಸ್ಥಳನಾಮಗಳ ಪ್ರಸ್ತುತ ಬಳಕೆಯಲ್ಲಿ ಅಂದರೆ ಸ್ಥಳನಾಮಗಳ ಬರಹದ ಹಾಗೂ ಉಚ್ಚಾರದ ಮೇಲೆ ಪ್ರಭಾವ ಬೀರುತ್ತಿರುವುದು ಕಂಡುಬರುತ್ತದೆ. ಕೆಲವು ಮಾದರಿಗಳನ್ನು ಆಯ್ದುಕೊಂಡು ಬಳ್ಳಾರಿ ಪರಿಸರದ ಸ್ಥಳನಾಮಗಳ ಮೇಲೆ ಆಂಗ್ಲ ಆಡಳಿತ ಮತ್ತು ಇಂಗ್ಲಿಷಿನ ಪ್ರಭಾವಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

**ಸ್ಥಳನಾಮಗಳ ವಾರ್ಗಿಕಗಳಲ್ಲಿ ಕಂಡುಬರುವ ಪರಿವರ್ತನೆಗಳು:** ವಾರ್ಗಿಕ ಎಂದರೆ ಸ್ಥಳನಾಮಗಳ ಉತ್ತರ ಭಾಗ ಕನ್ನಡದ ಸ್ಥಳನಾಮಗಳು ಸಾಮಾನ್ಯವಾಗಿ ವ್ಯಂಜನಾಂತ್ಯವಾಗಿರುತ್ತವೆ. ಕೆಲವು ವೇಳೆ ಕನ್ನಡ ಮಾತಿನ ನಡುವೆಯಾಗಲಿ, ಇಂಗ್ಲಿಷ್ ಮಾತಿನ ನಡುವೆಯಾಗಲಿ ವ್ಯಂಜನಾತಂವಾಗಿ ಉಚ್ಚಾರವಾಗುವುದು ಕಂಡುಬರುತ್ತದೆ. ಇದಕ್ಕೆ ಇಂಗ್ಲಿಷ್ ಪ್ರಭಾವವೂ ಒಂದು ಕಾರಣ. ಉದಾಹರಣೆ

| **'ಅ'ಪಟ್ಟಿ** | **'ಬ' ಪಟ್ಟಿ** |
|---|---|
| ಹೊಸಪೇಟೆ | ಹಾಸ್‌ಪೇಟ್ |
| ವಿಜಯನಗರ | ವಿಜಯ್‌ನಗರ್ |
| ಸೊಂಡೂರು | ಸಂಡೂರ್ |
| ಕೊಟ್ಟೂರು | ಕೊಟ್ಟೂರ್ |

| | |
|---|---|
| ಚಿತ್ರದುರ್ಗ | ಚಿತ್ರದುರ್ಗ್ |
| ಕೊಪ್ಪಳ | ಕೊಪ್ಪಳ್ |
| ಕೊಳಗಲ್ಲು | ಕೊಳಗಲ್ |
| ಚೋರನೂರು | ಚೋರನೂರ್ |
| ಕುರುಗೋಡು | ಕುರುಗೋಡ್ |
| ಬೈರಾಪುರ | ಬೈರಾಪುರ್ |
| ಕನಕಪುರ | ಕನಕ್‌ಪುರ್ |
| ವೆಂಕಟಾಪುರ | ವೆಂಕಟಾಪುರ್ |

ಮೇಲಿನ ಪಟ್ಟಿಯಲ್ಲಿರುವ ಸ್ಥಳನಾಮಗಳನ್ನು ಗಮನಿಸಿದರೆ ಅಂತ್ಯದಲ್ಲಿ ಸ್ವರವಿದ್ದರೂ ಎರಡನೇ ಮಾದರಿಯ ಬಳಕೆಯಲ್ಲಿ ವ್ಯಂಜನಾಂತವಾಗಿ ಉಚ್ಚಾರವಾಗಿರುವುದು ತಿಳಿಯುತ್ತದೆ.

ಇನ್ನೊಂದು ಮಾದರಿಯನ್ನು ಗಮನಿಸೋಣ

| **'ಅ' ಪಟ್ಟಿ** | **'ಬ'ಪಟ್ಟಿ** |
|---|---|
| ಕುಡುತಿನಿ | ಹುಲಿಕುಂಟೆ |
| ಕೊರ್ಲಗುಂದಿ | ತುಣನೇಗೆರೆ |
| ಆನೆಗುಂದಿ | ತೆಕ್ಕಲಕೋಟೆ |
| ಬಳ್ಳಾರಿ | ಜಾಲಿಬೆಂಚೆ |
| ಯರ್ರಗುಡಿ | ಏಳುಬೆಂಚೆ |
| ರೂಪನಗುಡಿ | ನೆಡುಗಿನಮೊಳೆ |
| ಇಟಗಿ | ಸಂಜೀವರಾಯನಕೋಟೆ |
| ಸೋಗಿ | ಗದ್ದೀಕೆರೆ |
| ಏಣಗಿ | ನಾರಾಯಣದೇವರ ಕೆರೆ |
| ಹಂಪಿ | ಅಡವಿಮಲ್ಲನ ಕೆರೆ |

ಮೇಲ್ಕಾಣಿಸಿದ ಅ ಮತ್ತು ಬ ಪಟ್ಟಿಗಳಲ್ಲಿ ಕ್ರಮವಾಗಿ 'ಇ' ಕಾರಾಂತ, 'ಎ' ಕಾರಾಂತ ಸ್ವರಗಳ ಹೆಸರುಗಳಿವೆ. ಮೊದಲು ಸೂಚಿಸಿದ ಮಾದರಿಯ ನಿಯಮದಂತೆ ಸ್ವರಾಂತವಾಗಿರುವ ಈ ಊರ ಹೆಸರುಗಳು ವ್ಯಂಜನಾಂತ್ಯವಾಗಿ ಉಚ್ಚರಿಸಲ್ಪಡುವುದಿಲ್ಲ. ಇಂಗ್ಲಿಷ್ ಅಥವಾ ಕನ್ನಡದ ಉಚ್ಚಾರಗಳಲ್ಲಿ ಈ ಮಾದರಿಗಳು ತಮ್ಮ ಸ್ವರಗಳನ್ನು ಬಿಟ್ಟುಕೊಡುವುದಿಲ್ಲ.

ಬಾಗಲಕೋಟೆ–ಬಾಗಲ್‌ಕೋಟ್ ಎಂದು ಬಳಕೆಯಾಗುವುದನ್ನು ನಾವು ಗಮನಿಸಬಹುದು. (ಉದಾ. ಬಾಗಲ್‌ಕೋಟ್ ಸಿಮೆಂಟ್) ಇದಕ್ಕೆ ಕಾರಣವನ್ನು ಊಹಿಸುವುದಾದರೆ ಸಾಮಾನ್ಯವಾಗಿ ಕರ್ನಾಟಕದ ದಕ್ಷಿಣ ಭಾಗದ ಕನ್ನಡದ 'ಎ' ಕಾರಾಂತ್ಯ ರೂಪಗಳು ಉತ್ತರ ಭಾಗದ ಕನ್ನಡದಲ್ಲಿ 'ಇ' ಕಾರ ಮತ್ತು 'ಅ'ಕಾರಾಂತ್ಯಗೊಳ್ಳುವುದು ಸಾಮಾನ್ಯ ನಿಯಮ ಈ ನಿಯಮದಂತೆ ಮೊದಲು ಕೋಟ್ಟೈ–ಕೋಟೆಯಾಗಿ ನಂತರ ಅದು ಕೋಟ ಆಗಿ ನಂತರ ಅದು 'ಕೋಟ್' ಎಂದು ವ್ಯಂಜನಾಂತ್ಯವಾಗಿ ಬಳಕೆಯಲ್ಲಿರುವುದು ಕಂಡುಬರುತ್ತದೆ.

ವಾರ್ಗಿಕಗಳಲ್ಲಿ ಕಂಡುಬರುವ ಇಂಗ್ಲಿಷಿನ ಪ್ರಭಾವಕ್ಕೆ ಈ ಕೆಳಗಿನ ಇನ್ನೊಂದು ಮಾದರಿಯನ್ನು ನೋಡೋಣ.

| 'ಅ'ಪಟ್ಟಿ | 'ಬ' ಪಟ್ಟಿ |
|---|---|
| ಶೇಷಾದ್ರಿ ಕ್ಯಾಂಪ್ | ಪಾಂಡುರಂಗ ಕಾಲೋನಿ |
| ಬಸವಣ್ಣ ಕ್ಯಾಂಪ್ | ಶಂಕರ್ ಕಾಲೋನಿ |
| ವೆಂಕಟೇಶ್ವರ ಕ್ಯಾಂಪ್ | ರಾಘವೇಂದ್ರ ಕಾಲೋನಿ |
| ಸತ್ಯನಾರಾಯಣ ಕ್ಯಾಂಪ್ | ಶಂಕರಗೌಡ ಕಾಲೋನಿ |
| ನಂದೀಪುರ ಕ್ಯಾಂಪ್ | ವಡ್ಡರ ಕಾಲೋನಿ |
| ವಿರುಪಾಪುರ ಕ್ಯಾಂಪ್ | ಬಿಡಿಸಿಸಿ ಬ್ಯಾಂಕ್ ಕಾಲೋನಿ |
| ಮಂಗಮ್ಮ ಕ್ಯಾಂಪ್ | ಗಾಂದಿ ಕಾಲೋನಿ |
| ಕೃಷ್ಣನಗರ ಕ್ಯಾಂಪ್ | ಜೈನ ಕಾಲೋನಿ |
| ನಾಗರಾಜ ಕ್ಯಾಂಪ್ | ಟೀಚರ್ಸ್ ಕಾಲೋನಿ |
| ಮಾರುತಿ ಕ್ಯಾಂಪ್ | ವೀವರ್ಸ್ ಕಾಲೋನಿ |

ಈ ಮೇಲಿನ ಊರ ಹೆಸರುಗಳಲ್ಲಿ ಕ್ಯಾಂಪ್ ಮತ್ತು ಕಾಲೋನಿ ಎಂಬ ಸ್ಪಷ್ಟ ಇಂಗ್ಲಿಷ ಪದಗಳು ಸೇರಿವೆ. ಕ್ಯಾಂಪ್‌ಗಳು ಸಾಮಾನ್ಯವಾಗಿ ಹೆದ್ದಾರಿ ಅಥವಾ ಸಾರಿಗೆ ರಸ್ತೆಯ ಬದಿಯಲ್ಲಿನ ಊರುಗಳಾಗಿರುತ್ತವೆ. ಕ್ಯಾಂಪ್‌ನೊಂದಿಗೆ ಸೇರಿರುವ ಹೆಸರಿನ ಊರುಗಳು ಹೆದ್ದಾರಿಯಿಂದ ಒಳಗಿರುವ ಹಳೆಯ ಊರುಗಳಾಗಿವೆ. ಇದಕ್ಕೆ ಕಾರಣ, ನೀರಾವರಿ, ಗಣಿಗಾರಿಕೆ, ಕೃಷಿ ಸಂಬಂಧೀ ಕೆಲಸಗಳಿಗೆ ಕಾರ್ಮಿಕರನ್ನು ಬೇರೆ ಕಡೆಯಿಂದ ಕರೆದು ತಂದು ಆಯಾ ಊರಿನ ಪಕ್ಕದಲ್ಲಿ ಸ್ಥಳಕೊಟ್ಟು ತಂಗಿಸಲಾಗುತ್ತಿದ್ದುದು ಕ್ಯಾಂಪ್‌ಗಳ ನಿರ್ಮಾಣಕ್ಕೆ ಕಾರಣ.

ಕ್ಯಾಂಪ್‌ಗಳಲ್ಲಿ ಕೆಲವೊಮ್ಮೆ ಆಯಾ ಊರಿನವರೂ ಇರಬಹುದು. ಹೆಚ್ಚಾಗಿ ವಲಸಿಗರಿರುತ್ತಾರೆ. ಬ್ರಿಟೀಷರು ತಮ್ಮ ತಾತ್ಕಾಲಿಕ ತಂಗುದಾಣಗಳಿಗೆ ಕ್ಯಾಂಪ್ ಎಂದು ಹೆಸರಿಸುತ್ತಿದ್ದ ಮಾದರಿಯಲ್ಲಿ

ಕ್ಯಾಂಪ್ ಎಂಬ ವಾರ್ಗಿಕದ ಸೇರ್ಪಡೆಯಾಗಿದೆ. ಹಾಗೆಯೇ ಕಾಲೋನಿಗಳು ಬ್ರಿಟೀಷರು ತಮ್ಮ ವಸಾಹತುಗಳಿಗೆ ಕೊಡುತ್ತಿದ್ದ ಹೆಸರುಗಳಾಗಿದ್ದು ಆ ಮಾದರಿಯಲ್ಲೇ 'ಕಾಲೋನಿ' ಎಂಬ ಮಾದಿರಯ ವಾರ್ಗಿಕಗಳು ಬಂದು ಸೇರಿವೆ.

**ಬರಹ ಮತ್ತು ಬಳಕೆ**

ಇಂಗ್ಲೀಷರು ನಾಮಕರಣ ಮಾಡಿ ಆಂಗ್ಲ ಆಡಳಿತದ ಹಿನ್ನೆಲೆಯಲ್ಲಿ ಪರಿವರ್ತಿತಗೊಂಡು ಪ್ರಭಾವಕ್ಕೊಳಗಾದ ಊರುಗಳು ಒಂದೆಡೆಯಾದರೆ ಅವರ ಪ್ರಭಾವ ಮತ್ತು ಮಾದರಿಯಲ್ಲಿ ಉಚ್ಚಾರ ಹಾಗೂ ಬರಹದಲ್ಲಿ ಬಳಕೆಯಾಗುತ್ತಿರುವ ಕೆಲವು ಮಾದರಿಗಳು ಈ ಕೆಳಗಿನಂತಿವೆ. ಉದಾಹರಣೆಗೆ,

Hubballi – ಹುಬ್ಬಳ್ಳಿ – Hubli

Madikeri – ಮಡಿಕೇರಿ – Mercara

Shivamogga – ಶಿವಮೊಗ್ಗ – Shimoga

Bengaluru – ಬೆಂಗಳೂರು – Bangalore

Ballary – ಬಳ್ಳಾರಿ – Bellary

Srirangapattana – ಶ್ರೀರಂಗಪಟ್ಟಣ – Serangapatam

ಈ ಮೇಲಿನ ಊರ ಹೆಸರುಗಳಿಗೆ ಎರಡು ಮೂರು ಬಗೆಯ ಉಚ್ಚಾರ ಮತ್ತು ಬರಹ ಬಳಕೆಯಲ್ಲಿವೆ. ಕನ್ನಡ ಬರಹದಲ್ಲಿ ಬಹುತೇಕ ಒಂದೇ ಮಾದರಿ ಉಳಿದುಕೊಂಡಿದ್ದರೂ ಇಂಗ್ಲಿಷಿನ ಬರಹದಲ್ಲಿ ನಮಗೆ ಭಿನ್ನವಾಗಿ ಗೋಚರಿಸುತ್ತವೆ.

ಹ್ರಸ್ವೀಕರಣಕ್ಕೆ ಇಂಗ್ಲಿಷ್ ವರ್ಣಮಾಲೆಯ ಅಕ್ಷರಗಳನ್ನು ಪಡೆಯುವುದನ್ನು ಈ ಕೆಳಗಿನ ಉದಾಹರಣೆಗಳನ್ನು ನೋಡಬಹುದು. ಉದಾಹರಣೆಗೆ

| | |
|---|---|
| ಪಾಪಿನಾಯಕನ ಹಳ್ಳಿ | ಪಿ.ಕೆ. ಹಳ್ಳಿ |
| ಗೊಲ್ಲರಹಳ್ಳಿ | ಜಿ.ಎಲ್. ಹಳ್ಳಿ |
| ಹಗರಿಬೊಮ್ಮನ ಹಳ್ಳಿ | ಹೆಚ್.ಬಿ. ಹಳ್ಳಿ |
| ಮರಿಯಮ್ಮನ ಹಳ್ಳಿ | ಎಮ್.ಎಮ್. ಹಳ್ಳಿ |
| ಡಣಾಯಕನ ಕೆರೆ | ಡಿ.ಎನ್. ಕೆರೆ |
| ಅಮರದೇವರ ಗುಡ್ಡ | ಎ.ಡಿ. ಗುಡ್ಡ |
| ಜಿ. ನಾಗಲಾಪುರ | ಜಿ.ಎನ್. ಪುರ |
| ಗಡ್ಡಿ ವಿರುಪಾಪುರ ಕ್ಯಾಂಪ್ | ಜಿ.ವಿ. ಕ್ಯಾಂಪ್ |

ಮೇಲಿನ ಊರುಗಳ ನಿರ್ದಿಷ್ಟಗಳಾದ ಪಾಪಿನಾಯಕನ, ಹಗರಿಬೊಮ್ಮನ, ಮರಿಯಮ್ಮನ, ದಣಾಯಕನ, ಅಮರದೇವರ, ಜಿ. ನಾಗಲಾಪುರ, ಗಡ್ಡಿ ವಿರುಪಾಪುರ ಹೀಗೆ ತುಂಬಾ ಉದ್ದುದ್ದ ಇರುವುದರಿಂದ ಹ್ರಸ್ವಗೊಳಿಸಲು ಇಂಗ್ಲಿಷ್ ಸಹಾಯವನ್ನು ಪಡೆದಿವೆ. ಆದರೆ ಈ ರೀತಿಯ ಬಳಕೆಗೆ ಆಂಗ್ಲ ಆಡಳಿತದ ಕಾರಣಕ್ಕಿಂತ ಹೆಚ್ಚಾಗಿ ಇಂಗ್ಲಿಷಿನ ಈ ಮಾದರಿ ಅನುಕೂಲಕರವಾಗಿರುವುದು ಕಾರಣವಾಗಿದೆ.

**೬.೩.೫. ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಸ್ಥಳನಾಮಗಳ ಬದಲಾವಣೆ**

ಪ್ರಪಂಚದಲ್ಲಿರುವ ವಿವಿಧ ದೇಶಗಳು, ಮೂಲ ಹೆಸರುಗಳನ್ನು ಬದಲಾಯಿಸಿಕೊಂಡಿವೆ. ಅಂತಹ ಉದಾಹರಣೆಗಳನ್ನು ನೋಡಬಹುದು. ಭಾರತ ದೇಶದಲ್ಲಿ ಬದಲಾದ ಕೆಲವು ಪ್ರಮುಖ ನಗರಗಳನ್ನು ನೋಡಬಹುದು. ಉದಾಹರಣೆಗೆ

ಅಸ್ಸಾಂ – ಅಸ್ಸೋಂ

ಬನಾರಸ್ – ವಾರಣಾಸಿ

ಬರೋಡ – ವಡೋದರ

ಬಾಂಬೆ – ಮುಂಬೈ

ಕಲ್ಕತ್ತ – ಕೊಲ್ಕತ್ತ

ಪಾಂಡಿಚೆರಿ – ಪುದುಚೆರಿ, ತ್ರಿವಂಡ್ರಂ– ತಿರುವನಂತಪುರಂ

**ಪ್ರಪಂಚದ ವಿವಿಧ ದೇಶಗಳ ಬದಲಾದ ಸ್ಥಳನಾಮಗಳು**

| **ಹಳೆಯ ಹೆಸರು** | **ಹೊಸ ಹೆಸರು** |
|---|---|
| ಸಿಲೋನ್ | ಶ್ರೀಲಂಕಾ |
| ಕಾಂಗೋ | ಚೈರೆ |
| ಫೋರ್ಮೋಸಾ | ಟೈವಾನ್ |
| ಗೋಲ್ಡ್‌ಕೋಸ್ಟ್ | ಘಾನಾ |
| ಹಾಲ್ಕೆಂಡ್ | ನೆದರ್‌ಲ್ಯಾಂಡ್ಸ್ |
| ಮಲಯ | ಮಲೇಷಿಯಾ |
| ಮೆಸೊಪೊಟೋಮಿಯಾ | ಇರಾಕ್ |
| ನಿಪ್ಪಾನ್ | ಜಪಾನ್ |
| ನಾರ್ತ್‌ರೋಡೇಷಿಯಾ | ಜಾಂಬಿಯಾ |
| ಪರ್ಷಿಯಾ | ಇರಾನ್ |
| ರಂಗೂನ್ | ಯಂಗಾನ್ |

| | |
|---|---|
| ದಕ್ಷಿಣ ರೊಡೋಷಿಯಾ | ಜಿಂಬಾಬ್ವೆ |
| ಸಿಯಾಮ್ | ಥೈಲ್ಯಾಂಡ್ |
| ಸೌತ್‌ವೆಸ್ಟ್ ಆಫ್ರಿಕಾ | ನಮಿಬಿಯಾ |
| ಅಬಿಸ್ಸಿನಿಯಾ | ಈಥಿಯೋಪಿಯಾ |
| ಬಟಾವಿಯಾ | ಜಕಾರ್ತ |
| ಬರ್ಮಾ | ಮ್ಯಾನ್ಮಾರ್ |
| ಪೀಕಿಂಗ್ | ಬೀಜಿಂಗ್ |
| ಡಚ್‌ಗಯಾನಾ | ಸೂರಿನಾಮ್ (ಎಚ್ಚಾರ್ಕೆ, ೨೦೧೬, ಪುಟ–೨೨೪–೨೨೮) |

ಸ್ಥಳನಾಮಗಳು ಭೂತ, ವರ್ತಮಾನ, ಭವಿಷತ್‌ಗಳನ್ನು ಸಂಪರ್ಕಿಸುವ ಸೇತುವೆಗಳು ಎಂಬುದನ್ನರಿತ ಸ್ವಾತಂತ್ರ್ಯ ನಂತರದ ಭಾರತ ಸರ್ಕಾರ ಸೂತ್ರ ರೂಪವಾಗಿ ರಾಜ್ಯಗಳಿಗೆ ನಾಮಾಂತರ ನಿಯಂತ್ರಣಕ್ಕಾಗಿ ಆದೇಶಗಳನ್ನು ರವಾನಿಸಿದ್ದು ಯಥೋಚಿತವಾಗಿದೆ.

೧. ವಿಶೇಷ ಕಾರಣವಿಲ್ಲದೆ ಬಳಕೆಯ ಹೆಸರನ್ನು ಬದಲಿಸಕೂಡದು.

೨. ಐತಿಹಾಸಿಕ ಸಂಬಂಧ ಅಥವಾ ಪ್ರಾಮುಖ್ಯವುಳ್ಳ ಗ್ರಾಮನಾಮಗಳನ್ನು ವ್ಯತ್ಯಾಸ ಮಾಡಕೂಡದು.

೩. ಸ್ಥಳಾಭಿಮಾನ ಅಥವಾ ಭಾಷಿಕ ಕಾರಣಗಳಿಗಾಗಿ ನಾಮಾಂತರ ಸಲ್ಲದು. ರಾಷ್ಟ್ರನಾಯಕರಿಗೆ ಗೌರವ ಸಲ್ಲಿಸುವ ಅಥವಾ ಸ್ಥಳೀಯ ಜನರ ಭಾವುಕತೆಯನ್ನು ತೃಪ್ತಿಪಡಿಸುವ ಸಲುವಾಗಿ ಹೆಸರು ಬದಲಾವಣೆ ಕೂಡದು.

೪. ಹೊಸ ಹೆಸರನ್ನು ಆರಿಸುವಾಗ ಒಂದೇ ಹೆಸರಿನ ಊರುಗಳು ಹಲವುಗಳಾಗಿ ಗೊಂದಲ ವುಂಟಾಗದಂತೆ ಎಚ್ಚರಿಕೆವಹಿಸಬೇಕು.

೫. ಯಾವುದಾದರೂ ಪುರಾತನ ಸ್ಥಳ ಖಿಲವಾಗಿದ್ದು, ಅದನ್ನು ಜೀರ್ಣೋದ್ಧಾರ ಮಾಡಬೇಕಾದ ಸಂದರ್ಭವೊದಗಿದಾಗ ಅದಕ್ಕೆ ಹಳೆಯ ಹೆಸರನ್ನೇ ಇಡತಕ್ಕದ್ದು.

ಭಾರತ ಸರ್ಕಾರದ ಸುತ್ತೋಲೆಯು ಸುಸ್ಪಷ್ಟವಾಗಿದ್ದರೂ ಸ್ಥಳೀಯ ಆಡಳಿತ ತಮಗೆ ಬೇಕಾದಂತೆ ತಿರುಚುವುದು ಕಂಡುಬರುತ್ತದೆ. ಬ್ರಿಟೀಷರು ಇಟ್ಟಿದ್ದ ಹೆಸರುಗಳನ್ನು ಮಾತ್ರ ಸಕಾರಣವಾಗಿ ತೆಗೆಯಬಹುದೆಂದು ಹೇಳಲಾಯಿತು. ಆದರೂ ಆಡಳಿತವೇ ಅನೇಕ ಬಾರಿ ಇದನ್ನು ಮೀರಿ ವರ್ತಿಸುವುದು ಕಂಡುಬರುತ್ತದೆ. 'ಸೂಳೆಕೆರೆ' ಎಂಬ ಪ್ರಸಿದ್ಧ ಕೆರೆಯ ಹೆಸರನ್ನು 'ಶಾಂತಿಸಾಗರ' ಎಂದು ಬದಲಿಸಲು ಹುನ್ನಾರ ನಡೆಸಿದ್ದನ್ನು ನಾಡಿನ ಸಾಹಿತಿಗಳು ಜನರು ಪ್ರತಿಭಟಿಸಿದ್ದನ್ನು ಗಮನಿಸಬಹುದು. ಆದ್ದರಿಂದ ಜನರು ಜಾಗೃತವಾಗಿರುವುದು ಅಗತ್ಯವಾಗಿದೆ.



## ಅಧ್ಯಾಯ: ಏಳು

# ಸಮಾರೋಪ

ಪ್ರಾರಂಭದ ದಿನಗಳಲ್ಲಿ ಪಶುಗಳಂತೆ ವಾಸಿಸುತ್ತಿದ್ದ ಆದಿಮಾನವರು ಗುಹೆ, ಪೊಟರೆಗಳಲ್ಲಿ, ವಾಸದ ನೆಲೆಯನ್ನು ಕಂಡುಕೊಂಡರು. ಆಹಾರಕ್ಕಾಗಿ ಕಾಡಿನಲ್ಲಿರುವ ಗಡ್ಡೆ, ಗೆಣಸುಗಳನ್ನು ಬಳಸಿಕೊಳ್ಳುತ್ತಿದ್ದರು. ಮುಂದೆ ಅಲೆಮಾರಿ ಜೀವನದಿಂದ ಸ್ಥಿರವಾಸಿ ಜೀವನದಕಡೆಗೆ ಸಾಗಿ, ತಾವು ನೆಲೆಸಿದ್ದ ಭೌಗೋಳಿಕ ಪ್ರದೇಶಕ್ಕೆ ಒಂದು ಹೆಸರನ್ನು ಕರೆಯುವ ಪ್ರಯತ್ನ ಮಾಡಿದರು. ಇದು ಆಗತಾನೆ ಬೇರುಬಿಡುತ್ತಿದ್ದ ನೆಲೆಯೂರಿಕೆಯ ಪ್ರಥಮಾವಸ್ಥೆಯಾಗಿದೆ. ನಂತರ ಬೆಟ್ಟ, ಗುಡ್ಡ, ಸರೋವರ, ಕಣಿವೆ, ಕಂದರ, ಹಳ್ಳ, ಕೊಳ್ಳ ಹೀಗೆ ಪ್ರಾಕೃತಿಕ ಸಂಬಂಧದೊಂದಿಗೆ ಇವರು ಹೊಂದಿಕೊಂಡಿದ್ದಾರೆ. ನಿಸರ್ಗದ ಒಂದೊಂದು ವಸ್ತುವು ಸ್ಥಳನಾಮಗಳಿಗೆ ಪ್ರೇರಣೆ ನೀಡಿರುವುದನ್ನು ಗಮನಿಸಬಹುದು. ಆಯಾ ಭೌಗೋಳಿಕ ವಲಯಕ್ಕೆ ತಕ್ಕಂತೆ ಭಿನ್ನತೆಗಳು ಕಾಣಿಸುತ್ತವೆ. ಬಳ್ಳಾರಿ ಪರಿಸರವು ಹೆಚ್ಚು ಒಣ ಹವೆಯಿಂದ ಕೂಡಿದ್ದರೂ ಸಹಿತ ಕೆರೆ, ಸಾಗರ, ಸಮುದ್ರದಿಂದ ಕೊನೆಗೊಳ್ಳುವ ಅನೇಕ ಗ್ರಾಮನಾಮಗಳಿವೆ. ಈ ಪರಿಸರಕ್ಕೆ ತಕ್ಕಂತೆ ಗುಡ್ಡ, ಬೆಟ್ಟ, ಪುರ, ಹಳ್ಳಿ ವಾರ್ಗಿಕಗಳಿಂದ ಕೊನೆಯಾಗುವ ಸ್ಥಳನಾಮಗಳನ್ನು ನೋಡಬಹುದಾಗಿದೆ.

ಗ್ರಾಮ ಸಮಾಜಗಳು ದೈವ ಧರ್ಮವನ್ನು ಸಂಸ್ಕೃತಿಯ ಅವಿಭಾಜ್ಯ ಅಂಗವೆಂದು ನಂಬಿವೆ. ದೇವರ ಮೇಲಿನ ಭಯಭಕ್ತಿಯ ಪರಿಣಾಮದಿಂದಾಗಿ, ದೈವನಾಮಗಳನ್ನು ವ್ಯಕ್ತಿಗೆ ಮತ್ತು ತಾವು ನೆಲೆಸಿರುವ ಸ್ಥಳಗಳಿಗೆ ಆರೋಪಿಸುವ ಪ್ರಕ್ರಿಯೆ ಚಾಲ್ತಿಗೆ ಬಂದಿತು. ದೇವರ ಹೆಸರುಗಳನ್ನು ತಮ್ಮ ಮಕ್ಕಳಿಗೆ ಇಡುವುದರಿಂದ ಅವರಿಗೆ ಬರುವ ಅಪಾಯಗಳು, ರೋಗರುಜಿನಗಳು ಪಾರಾಗುತ್ತವೆ ಎಂಬ ದೃಷ್ಟಿಯಿಂದ ನಾಮನಿರ್ದೇಶನ ಮಾಡುತ್ತಿದ್ದರು. ಆದ್ದರಿಂದ ತಲೆಮಾರುಗಳ ಅಂತರದಲ್ಲಿ ಹೆಸರುಗಳನ್ನು ಗಮನಿಸಿದಾಗ ಮೂರು ತಲೆಮಾರುಗಳಲ್ಲಿ ಒಟ್ಟಾರೆ ದೈವಮೂಲದ ಹೆಸರುಗಳೇ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ನಾವು ಗಮನಿಸುತ್ತೇವೆ. ಮನುಷ್ಯನ ಜೀವನಾವರ್ತನ ಆಚರಣಾ ಪದ್ಧತಿಗಳಲ್ಲಿ ದೈವದ ಪಾತ್ರ ಮಹತ್ವದ್ದಾಗಿದೆ. ಮದುವೆ, ಹಬ್ಬ, ಜಾತ್ರೆ, ನಾಮಕರಣ, ಮನೆ ಪ್ರವೇಶ, ಬಿತ್ತುವಾಗ ಧಾನ್ಯಗಳ ರಾಶಿಯನ್ನು ತುಂಬುವಾಗ ಪ್ರತಿಯೊಂದರಲ್ಲೂ ಪೂಜೆ ಇದ್ದೇ ಇರುತ್ತದೆ. ಇದೆಲ್ಲವೂ ನಡೆಯುವುದು ದೇವರ ಮೇಲಿನ ನಂಬಿಕೆಯಾಗಿರುತ್ತದೆ.

ಕಾಲಾಂತರದಿಂದಾಗಿ ಹೆಸರಿಗೂ ಮತ್ತು ವ್ಯಕ್ತಿಯ ವ್ಯಕ್ತಿತ್ವಕ್ಕೂ ಇದ್ದ ನೇರ ಸಂಬಂಧ ಕಳಚಿಕೊಂಡಿತು. ಬದಲಾಗಿ ಹೆಸರು ಸಾಂಸ್ಕೃತಿಕ ಆಯಾಮವನ್ನು ಪಡೆದುಕೊಂಡಿತು. ಇದರಿಂದಾಗಿ ಹೆಸರಿಗೆ ಅತ್ಯಂತ ಪ್ರಾಮುಖ್ಯತೆ ಬಂದಿತು. ಪ್ರಾದೇಶಿಕವಾಗಿ ದೈವಸಂಬಂಧಿ ವ್ಯಕ್ತಿನಾಮಗಳು ವೈವಿಧ್ಯಮಯವಾಗಿರುವುದರಿಂದ, ಸಂಸ್ಕೃತಿಯ ಹಲವು ಬಗೆಯ ಮಾಹಿತಿಗಳನ್ನು ತನ್ನ ಒಡಲಲ್ಲಿಟ್ಟು ಕೊಂಡಿರುತ್ತವೆ. ಉದಾಹರಣೆಗೆ, ಕೊಟ್ಟೂರಿನ ಕೊಟ್ಟೂರೇಶ್ವರ, ಕುರುಗೋಡಿನ ಬಸವೇಶ್ವರ, ಕೊಪ್ಪಳದ ಗವಿಸಿದ್ದೇಶ್ವರ, ಚೇಳಗುರಿಕೆಯ ಯರಿತಾತ, ನಾಯಕನಹಟ್ಟಿಯ ತಿಪ್ಪೇಸ್ವಾಮಿ, ಬಳ್ಳಾರಿಯ ದುರುಗಮ್ಮ, ಗಾಣಗಟ್ಟೆಯ ಮಾಯಮ್ಮ, ಸವದತ್ತಿಯ ಯಲ್ಲಮ್ಮ, ಹುಲಿಗೆಯ ಹುಲಿಗೆಮ್ಮ, ಹುಚ್ಚಂಗಿದುರ್ಗದ ಹುಚ್ಚೆಂಗೆಮ್ಮ, ಮೈಲಾರದ ಮೈಲಾರಲಿಂಗೇಶ್ವರ ಈ ದೇವತೆಗಳಿರುವ ಪ್ರದೇಶದ ಸುತ್ತಮುತ್ತಲೂ ಜಾತಿ, ಸಮುದಾಯಗಳನ್ನು ಮೀರಿ ಆಯಾ ದೇವತೆಗಳ ನಾಮನಿರ್ದೇಶನ ಮಾಡಿಕೊಂಡಿರುವುದನ್ನು ಬಳ್ಳಾರಿ ಪರಿಸರದಲ್ಲಿ ಗಮನಿಸಬಹುದು. ಆದ್ದರಿಂದ ಮೇಲೆ ತಿಳಿಸಿದ ದೈವಗಳಿರುವ ಸ್ಥಳಗಳನ್ನು ವ್ಯಕ್ತಿನಾಮ ದ್ವೀಪಗಳೆಂದು ಪರಿಭಾವಿಸಿಕೊಳ್ಳಲಾಗಿದೆ. ಶಿಷ್ಟದೇವತೆಗಳಾದ ಶಿವ, ನಂದಿ, ಬ್ರಹ್ಮ, ವಿಷ್ಣು, ಮಹೇಶ್ವರ, ಲಕ್ಷ್ಮಿ, ಸರಸ್ವತಿ, ವೆಂಕಟೇಶ್ವರ ಇನ್ನು ಮುಂತಾದ ಹೆಸರುಗಳನ್ನು ಕೆಳಸಮುದಾಯದ ಜನರು ತಮ್ಮ ಮಕ್ಕಳಿಗೆ ನಿರ್ದೇಶನ ಮಾಡಿರುವುದನ್ನು ಗಮನಿಸಬಹುದು. ಆದರೆ ಜನಪದ ದೇವತೆಗಳೆನಿಸಿದ ಮಾರಮ್ಮ, ಕರಿಯಮ್ಮ, ಸಾರೆಮ್ಮ, ದುರುಗಮ್ಮ, ಹುಲಿಗೆಮ್ಮ ಇಂತಹ ದೇವತೆಗಳ ಹೆಸರುಗಳನ್ನು ಮೇಲ್‌ಸಮುದಾಯದವರು ತಮ್ಮ ಮಕ್ಕಳಿಗೆ ಇಡಲಿಕ್ಕೆ ಇಷ್ಟಪಡುವುದಿಲ್ಲ. ಕಾರಣ ಜಾತಿ ತಾರತಮ್ಯವಿರಬಹುದು ಅಥವಾ ಕುರಿ, ಕೋಳಿಗಳನ್ನು ಬಲಿಕೊಡುವ ದೇವತೆಗಳನ್ನು ಇಷ್ಟಪಡದೇ ಇರಬಹುದು.

ಒಂದು ಗ್ರಾಮದಲ್ಲಿ ಹಲವು ಸಮುದಾಯಗಳು ಇರತ್ತವೆ. ಕುರುಬರು, ಗೊಲ್ಲರು, ಬೇಡರು, ಮೇದಾರರು, ಚಮ್ಮಾರರು, ಮಾದಿಗರು, ಬ್ಯಾಗಾರರು, ಕೊಂಗರು, ಕೊರಚರು, ಗೌಡರು, ಲಿಂಗಾಯತರು, ಬ್ರಾಹ್ಮಣರು ಇನ್ನು ಮುಂತಾದ ಸಮುದಾಯದವರನ್ನು ನೋಡಬಹುದು. ಪ್ರತಿಯೊಂದು ಸಮುದಾಯದಲ್ಲೂ ವಿಶೇಷ ಬಗೆಯ ಹೆಸರುಗಳಿರುವುದನ್ನು ಬಳ್ಳಾರಿ ಪರಿಸರದಲ್ಲಿ ಗಮನಿಸಬಹುದಾಗಿದೆ. ಉದಾಹರಣೆಗೆ ಕುರುಬರು ಆ ಸಮುದಾಯದ ದಾರ್ಶನಿಕ ವ್ಯಕ್ತಿಗಳ ಮತ್ತು ಸಮುದಾಯಕ್ಕೆ ಸಂಬಂಧಿಸಿದ ದೈವನಾಮಗಳನ್ನು ಇಟ್ಟುಕೊಂಡಿರುತ್ತಾರೆ. ಏಳುಕೋಟೆಪ್ಪ, ಬೀರಲಿಂಗಪ್ಪ, ಮೈಲಾರಪ್ಪ, ಗಟ್ಟೆಪ್ಪ ಈ ರೀತಿಯ ಹೆಸರುಗಳನ್ನು ಆ ಸಮುದಾಯದಲ್ಲಿ ಕಾಣುತ್ತೇವೆ. ಪ್ರಸ್ತುತ ಆ ಹೆಸರುಗಳ ಸ್ವರೂಪದಲ್ಲಿ ಬದಲಾವಣೆಯಾಗಿದೆ. ಹೀಗೆ ಪ್ರತಿಯೊಂದು ಸಮುದಾಯವು ತಮ್ಮ ಕುಲಕ್ಕೆ ಸಂಬಂಧಿಸಿದ ದೈವಮೂಲದ ಹೆಸರುಗಳನ್ನು ಇಟ್ಟುಕೊಳ್ಳುವುದು ರೂಢಿಯಿಂದ ಬಂದುದಾಗಿದೆ. ಆ ರೀತಿಯ ಹೆಸರುಗಳು ಈಗ ಕಡಿಮೆ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತಿವೆ. ಏಕೆಂದರೆ ಆಧುನಿಕತೆಯು ಅವುಗಳನ್ನು ಬದಲಾವಣೆಗೊಳಪಡಿಸಿರುವುದನ್ನು ಗಮನಿಸಬಹುದಾಗಿದೆ.

ಜನಪದ ಪ್ರಕಾರಗಳಾದ ಐತಿಹ್ಯ, ಗಾದೆ, ಒಗಟು, ಒಡಪು ಮತ್ತು ಹಾಡುಗಳು ವ್ಯಕ್ತಿ ಮತ್ತು ಸ್ಥಳನಾಮಗಳನ್ನು ತನ್ನ ಮಡಿಲಲ್ಲಿಟ್ಟುಕೊಂಡು ಅವುಗಳ ಸಂಸ್ಕೃತಿಯನ್ನು ಬಿತ್ತರಿಸುವ ಕೆಲಸ

ಮಾಡುತ್ತಿವೆ. ಐತಿಹ್ಯಗಳನ್ನು ಸಾರಸಗಟಾಗಿ ತಳ್ಳಿಹಾಕುವಂತಿಲ್ಲ. ಅದರಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳ ಸೂಕ್ಷ್ಮ ಎಳೆಗಳಿರುತ್ತವೆ. ಅವುಗಳ ಅಧ್ಯಯನದಿಂದ ವಿಶಿಷ್ಟ ಅಂಶಗಳನ್ನು ಬೆಳಕಿಗೆ ತರುವುದು ಪ್ರತಿಯೊಬ್ಬ ನಾಮಾಧ್ಯಯನಕಾರನ ಹೊಣೆಯಾಗಿದೆ. ಹಾಗೆಯೇ ಹಿರಿಯರು ಗಾದೆಗಳನ್ನು ಸುಮ್ಮನೆ ಕಟ್ಟಿಲ್ಲ. ನಿಜಾಂಶವನ್ನೇ ಇಟ್ಟುಕೊಂಡು ಗಾದೆಗಳು ನಿರ್ಮಾಣವಾಗಿರುತ್ತವೆ. ಆದ್ದರಿಂದ ಜಾನಪದ ಪ್ರಕಾರಗಳಲ್ಲಿ ವ್ಯಕ್ತಿ ಮತ್ತು ಸ್ಥಳನಾಮಗಳನ್ನು ಅಧ್ಯಯನ ಮಾಡಿದರೆ ಜನಸಂಸ್ಕೃತಿಯನ್ನು ಬೆಳಕಿಗೆ ತರಬಹುದು. ಇದರಿಂದ ಅಂದಿನ ಪರಿಸ್ಥಿತಿ, ಜನಜೀವನ ಗೊತ್ತಾಗುತ್ತದೆ. ಅದಕ್ಕಾಗಿಯೇ ಇವುಗಳ ಅಧ್ಯಯನ ಅವಶ್ಯಕವಾಗಿದೆ.

ಹೆಸರುಗಳು ಹಲವು ಸಂಕ್ರಮಣ ಸ್ಥಿತಿಗಳನ್ನು ದಾಟಿಬಂದಿವೆ. ಆಧುನೀಕರಣದಿಂದಾಗಿ ದೈವಮೂಲದ ವ್ಯಕ್ತಿನಾಮಗಳು, ಸಮಾಜನಿಷ್ಠ ವ್ಯಕ್ತಿನಾಮಗಳು ಮತ್ತು ಪ್ರಕೃತಿನಿಷ್ಠ ವ್ಯಕ್ತಿನಾಮಗಳು ಹಿಂದೆ ಸರಿದು ಭಾವನಿಷ್ಟವಾಗಿರುವುದನ್ನು ಗಮನಿಸುತ್ತಿದ್ದೇವೆ. ಕಾಲಸರಿದಂತೆ ಬದಲಾಗುವುದು ಕೂಡ ಸಾಮಾನ್ಯವಾದ ಸಂಗತಿಯಾಗಿದೆ. ಹಾಗೆಯೇ ಸ್ಥಳನಾಮಗಳು ಕೂಡ ಕಾಲಕ್ಕೆ ತಕ್ಕಂತೆ ಬದಲಾವಣೆಯತ್ತ ಸಾಗಿದೆ. ಪ್ರಭುತ್ವದ ಕಾರಣದಿಂದ ಮೂಲ ಸ್ಥಳನಾಮಗಳನ್ನು ಒಡೆದುಹಾಕಿ ತಮಗೆ ಬೇಕಾದಂತೆ ಹೆಸರುಗಳನ್ನು ಇಟ್ಟುಕೊಂಡಿರುವುದನ್ನು ನೋಡುತ್ತಿದ್ದೇವೆ. ಸಂಸ್ಕೃತ, ಉರ್ದು, ತೆಲುಗು ಮತ್ತು ಇಂಗ್ಲಿಷ್ ಭಾಷೆಗಳು ಸ್ಥಳನಾಮಗಳ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

**ಅಧ್ಯಯನದ ಫಲಿತಗಳು**

* ನಾಮಾಧ್ಯಯನದ ಬಗೆಗೆ ಈ ವರೆಗೆ ನಡೆದಿರುವ ಅಧ್ಯಯನಗಳನ್ನು ಗಮನಿಸಿ ಅವುಗಳ ನೆರವಿನಿಂದ ಪ್ರಸ್ತುತ ಪ್ರಬಂಧಕ್ಕೆ ಹೊಸ ಮಾದರಿಯೊಂದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ದತ್ತ ಮಾಹಿತಿಯ ಮೂಲಕ ಸಮಾಜದಲ್ಲಿರುವ ಕೆಳವರ್ಗ ಮತ್ತು ಮೇಲ್ವರ್ಗಗಳ ನಾಮರಚನಾ ಸ್ವರೂಪದಲ್ಲಿ ಕಂಡುಬರುವ ಕೆಲವು ಪ್ರಮುಖವಾದ ಅಂಶಗಳನ್ನು ಗುರುತಿಸಲಾಗಿದೆ. ಇದರ ಜೊತೆಗೆ ದ್ವಿಸಂಸ್ಕೃತಿಗಳಿಂದಾದ ನಾಮರಚನೆಯ ವೈಶಿಷ್ಟ್ಯಗಳನ್ನು ಕಂಡುಕೊಳ್ಳಲಾಗಿದೆ.

* ಬದಲಾಗುತ್ತಿರುವ ಸಮಾಜದಲ್ಲಿ ಕ್ರಮೇಣವಾಗಿ ದೈವಮೂಲ ವ್ಯಕ್ತಿನಾಮಗಳು ಎಲ್ಲಾ ವರ್ಗಗಳಲ್ಲೂ ತೆರೆಮರೆಗೆ ಸರಿಯುತ್ತಲಿವೆ. ಆದರೂ ಗ್ರಾಮೀಣ ಪರಿಸರದಲ್ಲಿ ಆ ಹೆಸರುಗಳ ಸ್ವರೂಪವು ಬದಲಾಗಿ ದೇವರ ಮೇಲಿರುವ ನಂಬಿಕೆಯನ್ನು ಅವುಗಳು ಉಳಿಸಿಕೊಂಡಿವೆ. ಉದಾ. ಮಾರಮ್ಮ ಮಲ್ಲಿಕಾ ಆಗಿ, ದುರುಗಮ್ಮ ಧರಿತ್ರಿಯಾಗಿ, ಸುಂಕಲಮ್ಮ ಸುಂದರಿಯಾಗಿ, ಹುಲುಗಪ್ಪ ಉಲ್ಲಾಸ್ ಆಗಿ, ಉಡುಸಲಮ್ಮ ಉಮಾಪತಿಯಾಗಿ, ಸಾರೆಮ್ಮ ಚಾರೇಶ್ ಆಗಿ ಉಳಿದುಕೊಂಡಿರುವುದನ್ನು ನೋಡಬಹುದು. ಹೀಗೆ ಬದಲಾವಣೆಗೊಂಡಿರುವ ಹೆಸರುಗಳನ್ನು ಹೆಚ್ಚಾಗಿ ಕೆಳವರ್ಗಗಳಲ್ಲಿ ಇರುವುದನ್ನು ಕಂಡುಕೊಳ್ಳಲಾಗಿದೆ.

* ವಿಜಯನಗರ ಸಾಮ್ರಾಜ್ಯದ ಅಧಿದೇವತೆಯಾದ 'ಹಂಪಮ್ಮ'ನ ಹೆಸರಿನಲ್ಲಿ ಅನೇಕ

ಸ್ಥಳಗಳಿರುವುದನ್ನು ಗುರುತಿಸಲಾಗಿದೆ. ಉದಾ. ಹಂಪಾದೇವನಹಳ್ಳಿ, ಹಂಪಿನಕಟ್ಟೆ, ಹಂಪಾಸಾಗರ, ಹಂಪಾಪಟ್ಟಣ ಜೊತೆಗೆ ಈ ಸಾಮ್ರಾಜ್ಯದ ಅರಸರ ಅಧಿಕಾರದಿಂದಾಗಿ ಹಲವು ಸ್ಥಳಗಳು ತಮ್ಮ ಕುಟುಂಬದವರ ಹೆಸರಿನಲ್ಲಿ ಸ್ಥಾಪಿಸಿರುವುದನ್ನು ಗುರುತಿಸಲಾಗಿದೆ. ಉದಾ. ತಿಮ್ಮಲಾಪುರ, ನಾಗಲಾಪುರ, ನಾಗೇನಹಳ್ಳಿ, ಅನಂತಶಯನಗುಡಿ, ಬುಕ್ಕಸಾಗರ.

* ಸ್ಥಳನಾಮಗಳ ಅಧ್ಯಯನದಲ್ಲಿ ಐತಿಹ್ಯ, ಗಾದೆ, ಒಗಟು, ಒಡಪು ಮತ್ತು ಹಾಡು ಮುಂತಾದ ಜನಪದ ಪ್ರಕಾರಗಳು ಮುಖ್ಯವೆಂಬುದು ತಿಳಿದುಬಂದಿದೆ. ಇವುಗಳ ಮೂಲಕ ಹೊಸ ಮಾದರಿಯೊಂದನ್ನು ರೂಪಿಸಲಾಗಿದೆ. ಬದಲಾವಣೆಗೊಂಡ ಸ್ಥಳನಾಮಗಳ ಮೂಲರೂಪವನ್ನು ಜನಪದರ ಹಾಡುಗಳಿಂದ ಕಂಡುಕೊಳ್ಳಲಾಗಿದೆ. ಸ್ಥಳನಾಮಗಳು ಪ್ರಾದೇಶಿಕ ಚರಿತ್ರೆಯನ್ನು ಕಟ್ಟಿಕೊಡುವ ಮುಖ್ಯ ಆಕರಗಳಾಗುತ್ತವೆ ಎಂಬುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

* ಸಮಾಜದಲ್ಲಿರುವ ಪ್ರತಿಯೊಂದು ವರ್ಗಗಳಲ್ಲಿ ಒಂದು ಮತ್ತು ಎರಡನೇ ತಲೆಮಾರುಗಳ ಹೆಸರುಗಳಲ್ಲಿ ಹೆಚ್ಚು ದೈವಮೂಲದ ಹೆಸರುಗಳಿರುವುದನ್ನು ಕ್ಷೇತ್ರಾಧ್ಯಯನದಿಂದ ಕಂಡುಕೊಳ್ಳಲಾಗಿದೆ. ಹಾಗೂ ಮೇಲೆ ತಿಳಿಸಿದ ತಲೆಮಾರುಗಳ ಹೆಸರುಗಳಲ್ಲಿ ಸಂಬಂಧವಾಚಿ, ವೃತ್ತಿ ಅಥವಾ ಜಾತಿವಾಚಿಗಳಿರುವುದನ್ನು ಗುರುತಿಸಲಾಗಿದೆ. ಮೂರನೇ ತಲೆಮಾರಿನ ಪಟ್ಟಿಯ ಹೆಸರುಗಳಲ್ಲಿ ಸಂಬಂಧವಾಚಿ, ವೃತ್ತಿ/ಜಾತಿವಾಚಿಗಳು ಕಂಡುಬರುವುದು ಕಡಿಮೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಆದರೂ ಮೀಸಲಾತಿ ಸೌಲಭ್ಯ ಸಿಗುತ್ತದೆ ಎನ್ನುವ ಕಾರಣಕ್ಕಾಗಿ ಕೆಲವು ವರ್ಗಗಳ ಹೆಸರಿನ ಪೂರ್ವ ಅಥವಾ ಉತ್ತರ ಭಾಗದಲ್ಲಿ ಜಾತಿವಾಚಿಗಳಿರುವುದನ್ನು ಗಮನಿಸಲಾಗಿದೆ. ಪ್ರಸ್ತುತ ಭಾವನಾಮಗಳು ಎಲ್ಲಾ ವರ್ಗಗಳಲ್ಲೂ ಹೆಚ್ಚು ಚಾಲ್ತಿಯಲ್ಲಿರುವುದನ್ನು ಗುರುತಿಸಲಾಗಿದೆ.

* ವ್ಯಕ್ತಿನಾಮಗಳ ರಚನೆಯ ಸ್ವರೂಪ ಮತ್ತು ಬಳಕೆಯನ್ನು ಗಮನಿಸಿ ವ್ಯಕ್ತಿಯ ಜಾತಿ ಮತ್ತು ಸಾಮಾಜಿಕ ಸ್ಥಾನಮಾನಗಳನ್ನು ಗುರುತಿಸಲಾಗಿದೆ. ಬಳ್ಳಾರಿ ಪರಿಸರದಲ್ಲಿ ವ್ಯಕ್ತಿನಾಮ ಸಂಬೋಧನೆಯು ಸಾಮಾಜಿಕವಾಗಿ ಭಿನ್ನವಾಗಿರುವುದು ಸ್ಪಷ್ಟವಾಗುತ್ತದೆ. ಕೆಳಸಮುದಾಯಗಳು ಮೇಲ್‌ಸಮುದಾಯಗಳ ಹೆಸರುಗಳನ್ನು ಅನುಸರಿಸುವುದರಿಂದ ವ್ಯಕ್ತಿನಾಮಗಳು ಕೆಳಮುಖವಾಗಿ ಚಲಿಸುತ್ತಿರುವುದನ್ನು ಕಂಡುಕೊಳ್ಳಲಾಗಿದೆ. ಹೆಸರಿನ ಬಳಕೆಗೆ ಮತ್ತು ನಿಷೇಧಕ್ಕೆ ಜಾತಿ, ವರ್ಗ, ಶಿಕ್ಷಣ, ಲಿಂಗ, ವಯಸ್ಸು, ಸಾಮಾಜಿಕ ಸ್ಥಾನಮಾನ, ವ್ಯಕ್ತಿಯ ವ್ಯಕ್ತಿತ್ವ, ಸಂಬಂಧ, ಸಂದರ್ಭಗಳು ಕಾರಣವಾಗಿವೆ ಎಂಬುದನ್ನು ಸ್ಪಷ್ಟಪಡಿಸಿಕೊಂಡಿದೆ. ಮೇಲ್ಜಾತಿಯವರನ್ನು ಕೆಳಜಾತಿಯವರು ಸಂಬೋಧನೆ ಮಾಡುವ ರೀತಿ ಮತತ್ತು ಕೆಳವರ್ಗದವರು ಮೇಲ್ಜಾತಿಯವರನ್ನು ಮಾತನಾಡಿಸುವ ರೀತಿಯನ್ನು ಕ್ಷೇತ್ರಕಾರ್ಯದ ಮಾಹಿತಿಯಿಂದ ಗುರುತಿಸಲಾಗಿದೆ.

* ವ್ಯಕ್ತಿ ಕುಟುಂಬದಲ್ಲಿ ಪ್ರಮುಖ ಪಾತ್ರವಹಿಸುತ್ತಾನೆ. ಅಂತಹ ಅನೇಕ ಕುಟುಂಬಗಳು ಸೇರಿ ಒಂದೆಡೆ ನೆಲೆನಿಲ್ಲುತ್ತಾರೆ ಅದುವೇ ಊರಾಗುತ್ತದೆ. ವಿಶೇಷವಾದ ನಡೆ-ನುಡಿ, ವ್ಯಕ್ತಿತ್ವವನ್ನು ಹೊಂದಿರುವವರ (ದೈವತ್ವಕ್ಕೇರಿದ ದಾರ್ಶನಿಕರು) ಹೆಸರುಗಳನ್ನು ಸ್ಥಳನಾಮಗಳಿಗೆ ನೀಡಲಾಗಿರುತ್ತದೆ.

ಅಲ್ಲದೆ ಆ ಊರಿಗೆ ಬಂದ ಆಪತ್ತುಗಳನ್ನು ಪರಿಹರಿಸಲು ಮುಂದಾದ ಕಾರಣಕ್ಕಾಗಿ ಅಂತಹ ವ್ಯಕ್ತಿಗಳ ಹೆಸರುಗಳನ್ನು ತಮ್ಮ ನೆಲೆಗಳಿಗೆ ಇಟ್ಟುಕೊಂಡಿರುವುದನ್ನು ಗುರುತಿಸಲಾಗಿದೆ. ಇದರಂತೆ ಹಳ್ಳಿಗಳು ದೇವರು ಮತ್ತು ಧರ್ಮವನ್ನು ತಮ್ಮ ಅವಿಭಾಜ್ಯ ಅಂಗವೆಂದು ನಂಬಿವೆ. ಭಕ್ತಿ ಮತ್ತು ಭಯದ ನೆಲೆಯಲ್ಲಿ ತಮ್ಮ ವಾಸದ ನೆಲೆಗಳಿಗೆ ಮತ್ತು ತಮ್ಮ ಮಕ್ಕಳಿಗೆ ದೈವಗಳ ಹೆಸರುಗಳಿಟ್ಟಿರುವುದನ್ನು ಬಳ್ಳಾರಿ ಪರಿಸರದಲ್ಲಿ ಕಂಡುಕೊಳ್ಳಲಾಗಿದೆ. ಈ ರೀತಿಯ ಹೆಸರುಗಳನ್ನು ಇಟ್ಟರೆ ತಮ್ಮನ್ನು ಮತ್ತು ತಮ್ಮ ವಾಸದ ನೆಲೆಗಳನ್ನು ದೇವರು ಕಾಪಾಡುತ್ತಾನೆ ಎನ್ನುವ ನಂಬಿಕೆಯನ್ನು ಹಲವು ಸಮುದಾಯಗಳು ಹೊಂದಿರುವುದನ್ನು ಗುರುತಿಸಲಾಗಿದೆ.

**ಅಧ್ಯಯನದ ಸಾಧ್ಯತೆಗಳು**

೧. 'ದೈವಮೂಲ ವ್ಯಕ್ತಿನಾಮಗಳು ಸಾಮಾಜಿಕ ಅಧ್ಯಯನ' ಎಂಬ ವಿಷಯವನ್ನು ಪ್ರತ್ಯೇಕವಾದ ಅಧ್ಯಯನ ಮಾಡಲು ಸಾಧ್ಯವಿದೆ.

೨. 'ದೈವಮೂಲದ ಚಾರಿತ್ರಿಕ ವ್ಯಕ್ತಿನಾಮಗಳು' ಎಂಬ ವಿಷಯದಲ್ಲಿ ಕಾಲಘಟ್ಟಗಳನ್ನಿಟ್ಟುಕೊಂಡು ಅಧ್ಯಯನ ಮಾಡಲು ಅವಕಾಶವಿದೆ.

೩. ಹೈದ್ರಾಬಾದ್ ಕರ್ನಾಟಕವನ್ನು ಅನುಲಕ್ಷಿಸಿ, 'ಸ್ತ್ರೀ ದೈವಮೂಲ ಸ್ಥಳನಾಮಗಳು: ಸಾಂಸ್ಕೃತಿಕ ಅಧ್ಯಯನ'ವನ್ನು ಮಾಡಬಹುದು.

೪. 'ವ್ಯಕ್ತಿ ಮತ್ತು ಸ್ಥಳನಾಮಗಳ ಸಂಬೋಧನೆಯ ರೂಪಗಳು' ಈ ಶೀರ್ಷಿಕೆಯಡಿಯಲ್ಲಿ ಮೇಲ್ಜಾತಿ ಮತ್ತು ಕೆಳಜಾತಿ ಸಮುದಾಯಗಳು ಬೇರೆ ಬೇರೆ ಸಂದರ್ಭಗಳಲ್ಲಿ ಸಂಬೋಧನೆ ಮಾಡುವ ವಿಧಾನವನ್ನು ಇಟ್ಟುಕೊಂಡು ಅಧ್ಯಯನ ಮಾಡಲು ಅವಕಾಶವಿದೆ.

೫. 'ವ್ಯಕ್ತಿ ಮತ್ತು ಸ್ಥಳನಾಮಗಳು: ಆಧುನಿಕ ದೃಷ್ಟಿಕೋನ' ಎಂಬ ವಿಷಯವನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಬಹುದು. ಕಾಲ ಬದಲಾದಂತೆ ಹೆಸರುಗಳ (ವ್ಯಕ್ತಿ ಮತ್ತು ಸ್ಥಳ) ನಾಮಕರಣದಲ್ಲಿ ಬದಲಾವಣೆಗಳಾಗುತ್ತಿವೆ. ಆ ಬದಲಾವಣೆಗೆ ಕಾರಣಗಳನ್ನಿಟ್ಟುಕೊಂಡು ಚರ್ಚಿಸಬಹುದು.

ಬಹುಮುಖ್ಯವಾಗಿ ನಾಮಾಧ್ಯಯನವು ವಿಸ್ತೃತವಾಗಿರುವುದರಿಂದ, ಸಾಮಾಜಿಕವಾಗಿ, ಭಾಷಿಕವಾಗಿ ಮತ್ತು ಧಾರ್ಮಿಕವಾಗಿ ಹಲವು ವಿಷಯಗಳು ಅಧ್ಯಯನಯೋಗ್ಯವಾಗಿದ್ದು, ಅವುಗಳನ್ನು ವೈಜ್ಞಾನಿಕ ನೆಲೆಯಲ್ಲಿ ಯೋಜಿಸುವ ಅಗತ್ಯವಿದೆ. ಈ ನಿಟ್ಟಿನಲ್ಲಿ ಅಧ್ಯಯನಗಳು ಸಾಗಬೇಕಿದೆ.



## ಪ್ರಶ್ನಾವಳಿ ೧. (ವ್ಯಕ್ತಿನಾಮಗಳಿಗೆ ಸಂಬಂಧಿಸಿದಂತೆ)

೧. ಹೆಸರು

೨. ತಂದೆ ಹೆಸರು

೩. ತಾಯಿ ಹೆಸರು

೪. ಅಜ್ಜನ ಹೆಸರು

೫. ಅಜ್ಜಿ ಹೆಸರು

೬. ವಿದ್ಯಾವಂತರೇ? ಸ್ಥಳೀಯರೆ? ವಲಸೆ ಬಂದವರೆ?

೭. ಮನೆ ದೇವರು ಯಾವುದು? ನಡೆದುಕೊಳ್ಳುವ ದೇವರು ಯಾವುದು?

೮. ದೈವದ ಹೆಸರನ್ನು ಇಟ್ಟುಕೊಂಡಿದ್ದರೆ?

ಅ. ದೈವದ ಹೆಸರನ್ನು ಇಟ್ಟಿದ್ದು ಯಾಕೆ?

ಆ. ದೈವದ ಹೆಸರಿಟ್ಟಿರುವುದಕ್ಕೆ ಕಾರಣಗಳೇನು?

೯. ಹೆಸರನ್ನು ಬದಲಾವಣೆ ಮಾಡಿಕೊಂಡಿದ್ದರೆ?

ಅ. ಮೊದಲಿದ್ದ ಹೆಸರು

ಆ. ಬದಲಾದ ಹೆಸರು

೧೦. ಹೆಸರಿನ ಬಳಕೆಯ ವಲಯಗಳು?

ಅ. ದಾಖಲೆ

ಆ. ಪರಸ್ಪರ ಸಂಬೋಧನೆಯಲ್ಲಿ

ಇ. ಗೈರು ಹಾಜರಿಯಲ್ಲಿ

೧೧. ಮಾತೃಭಾಷೆ ಯಾವುದು? ವ್ಯವಹಾರಿಕ ಭಾಷೆ ಯಾವುದು?

೧೨. ಊರಲ್ಲಿ ಯಾವ ಯಾವ ದೇವಸ್ಥಾನಗಳಿವೆ? ಯಾವುದು ಹೆಚ್ಚು ಪ್ರಸಿದ್ಧಿ? ನೀವು ಪೂಜೆ ಮಾಡುವ ದೇವರು ಯಾವುದು?

೧೩. ಮಕ್ಕಳಿಗೆ ಮನೆ ದೇವರ ಹೆಸರು ಬಿಟ್ಟು, ನಡೆದುಕೊಳ್ಳುವ ದೇವರ ಹೆಸರನ್ನು ಇಟ್ಟದ್ದೀರಲ್ಲಾ ಕಾರಣ (ಹೌದಾದರೆ)

೧೪. ಮಕ್ಕಳಿಗೆ ದೇವರ ಹೆಸರಿಡುವುದಕ್ಕೆ ನಂಬಿಕೆಗಳೇನಾದ್ರು ಇವೆಯೇ?

೧೫. ಮಗನನ್ನು ಶಾಲೆಗೆ ಸೇರಿಸುವಾಗ, ಜಾತಿಯೊಂದಿಗೆ ಹೆಸರನ್ನು ಬರೆಸುತ್ತೀರಿಯೇ (ಹೌದಾದರೆ ಏಕೆ)

೧೬. ಕುಲನಾಮದೊಂದಿಗೆ ಮಗುವಿನ ಹೆಸರನ್ನು ಬರೆಸುತ್ತೀರಾ?

೧೭. ಮತದಾರರ ಪಟ್ಟಿಯಲ್ಲಿ ಹೆಸರನ್ನು ಹೇಗೆ ಬರೆಸಿದ್ದೀರಿ?

೧೮. ಜಾತಿಯೊಂದಿಗೆ ಮಗನ ಹೆಸರನ್ನು ಶಾಲೆಯಲ್ಲಿ ದಾಖಲಿಸಲಾಗಿದೆಯೇ?

ಅ. ತಂದೆಯ ಪ್ರತಿಕ್ರಿಯೆ

ಆ. ಮಗನ ಪ್ರತಿಕ್ರಿಯೆ

೧೯. ಊರಿನಲ್ಲಿ ಯಾವ ಯಾವ ಜಾತಿಯ ಜನರಿದ್ದಾರೆ?

೨೦. ಊರಿನಲ್ಲಿರುವ ಗ್ರಾಮದೇವತೆಯ ಹೆಸರನ್ನು ಎಲ್ಲ ಜಾತಿಯವರು ಮಕ್ಕಳಿಗೆ ಇಡುತ್ತಾರೆಯೇ?

೨೧. ಮದುವೆಯ ಸಂದರ್ಭದಲ್ಲಿ ವಧುವಿನ ಹೆಸರನ್ನು ಬದಲಾಯಿಸುವ ಪದ್ಧತಿ ನಿಮ್ಮಲ್ಲಿದೆಯೇ? ಬದಲಾಯಿಸಿದರೆ ಯಾವ ಕಾರಣಕ್ಕಾಗಿ?

೨೨. ಊರಿನಲ್ಲಿ ದೇವದಾಸಿ ಪದ್ಧತಿ ಇದೆಯೇ? ಇದ್ದರೆ ಯಾವ ಯಾವ ಜಾತಿಯವರಲ್ಲಿ?

೨೩. ದೇವದಾಸಿಗೆ ಬಿಡುವ ಸಂದರ್ಭದಲ್ಲಿ ಹೆಸರನ್ನು ಬದಲಾಯಿಸುತ್ತಾರೆಯೇ

೨೪. ನಿಮ್ಮ ಹೆಸರನ್ನು ಕರೆಯುವ ರೀತಿ ಮನೆಯಲ್ಲಿ ಊಟ ತಿಂಡಿಗಾಗಿ ಮನೆಯವರು ನಿಮ್ಮನ್ನು ಕರೆಯುತ್ತಾರೆ ಎಂದಿಟ್ಟುಕೊಳ್ಳಿ, ಆಗ ಅವರು ಹೇಗೆ ಕರೆಯುತ್ತಾರೆ.

| | | |
|---|---|---|
| ತಾಯಿ | ತಂದೆ | ಮಾವ |
| ಅಣ್ಣ | ಅಕ್ಕ | ಅತ್ತೆ |
| ತಮ್ಮ | ತಂಗಿ | ಹೆಂಡತಿ |

೨೫. ಮನೆಗೆ ಯಾರೋ ಅಪರಿಚಿತರು ಬಂದಿದ್ದಾರೆ ಎಂದಿಟ್ಟುಕೊಳ್ಳಿ ಆಗ ಅವರೆದುರಿಗೆ ಮನೆಯವರು ನಿಮ್ಮನ್ನು ಏನೆಂದು ಕರೆಯುತ್ತಾರೆ?

| | | |
|---|---|---|
| ತಾಯಿ | ಅಕ್ಕ | ಮಾವ |
| ತಂದೆ | ತಂಗಿ | ಅತ್ತೆ |
| ಅಣ್ಣ | ತಮ್ಮ | ಹೆಂಡತಿ |

೨೬. ಇತರೆ ಸಮಾಜದ ಜನ ನಿಮ್ಮನ್ನು ಕರೆಯುವ ರೀತಿ ಸಂತೆ, ಆಟದ ಮೈದಾನದ, ಕಡೆ ಬೇಟಿಯಾದಾಗ, ಹರಟೆ ಸಂದರ್ಭದಲ್ಲಿ, ಜಗಳ ಸಂದರ್ಭದಲ್ಲಿ, ಸಭೆ-ಸಮಾರಂಭಗಳಲ್ಲಿ ಇತ್ಯಾದಿ.

೨೭. ಊರ ಹೆಸರಿನೊಂದಿಗೆ ನಿಮ್ಮಲ್ಲಿ ಕೆಲವರ ಹೆಸರುಗಳನ್ನು ಕರೆಯುವ ಪದ್ಧತಿ ಇದೆಯೇ?

೨೮. ಕುಟುಂಬಗಳಲ್ಲಿರುವ ಗಂಡುಮಕ್ಕಳ, ಮತ್ತು ಹೆಣ್ಣುಮಕ್ಕಳ ಹೆಸರುಗಳನ್ನು ತಿಳಿಸಿ

ಗಂಡು ಮಕ್ಕಳು ಹೆಣ್ಣು ಮಕ್ಕಳು

## ಪ್ರಶ್ನಾವಳಿ ೨. ಸ್ಥಳನಾಮಗಳಿಗೆ ಸಂಬಂಧಿಸಿದಂತೆ

**ಮಾಹಿತಿದಾರರ ವಿವರ**

೧. ಹೆಸರು

೨. ವಯಸ್ಸು

೩. ಕೆಲಸ

೪. ವಾಸವಿರುವ ಸ್ಥಳ

೫. ಊರಿನಲ್ಲಿ ಕಳೆದ ಅವಧಿ

೬. ಸಂಪರ್ಕ ವಿಳಾಸ

**ಊರಿನ ಮಾಹಿತಿ**

೧. ಊರಿನ ಹೆಸರು

೨. ತಾಲೂಕು

೩. ಜಿಲ್ಲೆ

೪. ಹಳೆಯ ಹೆಸರು (ಇದ್ದರೆ)

೫. ಗ್ರಾಮ ದೇವತೆ

೬. ಊರಿನ ಮುಖ್ಯ ಹಬ್ಬಗಳು

೭. ಊರಿನ ಹೆಸರಿಗೆ ಸಂಬಂಧಿಸಿದ ಕಥೆಗಳು (ಇದ್ದರೆ)

೮. ಊರಿನ ಇತಿಹಾಸ

೯. ಊರಿನ ಹೆಸರೊಡನೆ ಬೆರತ ಗಾದೆ, ನುಡಿಗಟ್ಟುಗಳು, ಒಗಟು, ಒಡಪು, ಇತ್ಯಾದಿ.

೧೦. ಇತರೆ ರೂಪಗಳು

೧೧. ಹ್ರಸ್ವರೂಪಗಳು (ಇದ್ದರೆ)

೧೨. ಪ್ರಾಕೃತಿಕ ಪರಿಸರ

೧೩. ಊರಿನ ಹೆಸರು ಬದಲಾವಣೆಯಾಗಿದ್ದರೆ

ಬದಲಾವಣೆಯಾಗಿದ್ದಕ್ಕೆ ಕಾರಣ ಹಿಂದೆ ಇದ್ದ ಹೆಸರು

ಹಿಂದಿನ ಹೆಸರಿನ ಅರ್ಥವೇನು? ಈಗಿರುವ ಊರಿನ ಅರ್ಥವೇನು

**ಸೂಚನೆಗಳು**

೧. ಅಧಿಕೃತ ರೂಪ ಎಂದರೆ ಕಚೇರಿ, ಶಾಲೆ, ಬ್ಯಾಂಕು, ಫಲಕಗಳಲ್ಲಿ ಬಳಕೆಯಾಗುವ ರೂಪ.

೨. ಹಳೆಯ ಹೆಸರು ಕಣಮೆಹಳ್ಳಿ ಎಂದು ಇದ್ದು, ಈಗ ಯಶವಂತನಗರ ಎಂದು ಹೆಸರಿರುವುದಾಗಿದೆ.

೩. ಇತರೆ ರೂಪಗಳು ಉಚ್ಚಾರಣೆಯಲ್ಲಿರುವ ಇತರ ರೂಪಗಳು ಉದಾ. ಹಗರಿಬೊಮ್ಮನಹಳ್ಳಿಯನ್ನು ಬೊಮ್ಮನಹಳ್ಳಿ ಎಂದು, ಅನಂತಶಯನ ಗುಡಿಯನ್ನು ಅಂಚಿನಗುಡಿ ಎಂದು ಕರೆಯುವ ರೀತಿ.

೪. ಹ್ರಸ್ವ ರೂಪಗಳು: ಡಣಾಯಕನ ಕೆರೆಯನ್ನು ಡಿ.ಎನ್. ಕೆರೆ, ಹಗರಿಬೊಮ್ಮನಹಳ್ಳಿಯನ್ನು ಹೆಚ್.ಬಿ. ಹಳ್ಳಿ ಎಂದು ಮರಿಯಮ್ಮನಹಳ್ಳಿಯನ್ನು ಎಂ.ಎಂ. ಹಳ್ಳಿ ಎಂದು ಕರೆಯುವುದು.

೫. ಪ್ರಾಕೃತಿಕ ಪರಿಸರ: ಊರಿನ ಸುತ್ತಮುತ್ತ ಇರುವ ನದಿ, ಕೆರೆ, ದೇವಸ್ಥಾನ, ಕೋಟೆ, ಕಣಿವೆ, ಮುಖ್ಯ ಬೆಳೆ ಇವುಗಳ ವಿವರ.

# ವಕ್ತೃ ವಿವರ

| ಕ್ರಸಂ. | ಹೆಸರು | ವಯಸ್ಸು | ಜಾತಿ | ವೃತ್ತಿ | ಸ್ಥಳ | ದಿನಾಂಕ |
|---|---|---|---|---|---|---|
| ೧. | ಸುಂಕಪ್ಪ | ೮೦ | ನಾಯಕ | ವ್ಯವಸಾಯ | ಸಂಕ್ಲಾಪುರ | ೩.೯.೨೦೧೩ |
| ೨. | ಹುಲುಗಪ್ಪ | ೭೦ | ಕುಂಬಾರ | ಕುಂಬಾರಿಕೆ | ಅಂಚಿನಗುಡಿ | ೩.೯.೨೦೧೩ |
| ೩ | ಗೂಗಿ ಶಂಕ್ರಪ್ಪ | ೬೬ | ಲಿಂಗಾಯತ | ವ್ಯವಸಾಯ | ಕೆ.ಎನ್.ಹಳ್ಳಿ | ೩.೯.೨೦೧೩ |
| ೪ | ಪ್ರಕಾಶ | ೩೬ | ಕುರುಬ | ಆಟೋಚಾಲಕ | ಮಲಪನಗುಡಿ | ೪.೯.೨೦೧೩ |
| ೫ | ಗಿರಿನಾಯ್ಕ | ೩೮ | ಲಂಬಾಣಿ | ನಿರುದ್ಯೋಗಿ | ಕಡ್ಡಿರಾಂಪುರ | ೪.೯.೨೦೧೩ |
| ೬ | ಸುಡುಗಾಡೆಪ್ಪ | ೪೫ | ನಾಯಕ | ಕೂಲಿ | ಕಮಲಾಪುರ | ೫.೯.೨೦೧೩ |
| ೭ | ಕೊಮರಪ್ಪ | ೫೫ | ನಾಯಕ | ವ್ಯವಸಾಯ | ಬೈಲುವದ್ದಿಗೆರೆ | ೬.೯.೨೦೧೩ |
| ೮ | ಗಾದಿಲಿಂಗಪ್ಪ | ೩೮ | ಕೊರವ | ಲಾರಿಮಾಲಿಕ | ಭುವನಹಳ್ಳಿ | ೬.೯.೨೦೧೩ |
| ೯ | ರಾಘವೇಂದ್ರ | ೩೫ | ಕುರುಬ | ಉಪನ್ಯಾಸಕರು | ಗಾದಿಗನೂರು | ೬.೯.೨೦೧೩ |
| ೧೦ | ಹುಲುಗಪ್ಪ | ೪೦ | ಹರಿಜನ | ನಿರುದ್ಯೋಗಿ | ಕೊಟಿಗನಾಳ | ೭.೯.೨೦೧೩ |
| ೧೧ | ಮಂಜುನಾಥ | ೪೫ | ವಡ್ಡ | ವ್ಯವಸಾಯ | ವಡ್ರಳ್ಳಿ | ೭.೯.೨೦೧೩ |
| ೧೨ | ಮಂಜಪ್ಪ | ೩೦ | ಕುರುಬ | ವ್ಯವಸಾಯ | ನಾಗೇನಹಳ್ಳಿ | ೭.೯.೨೦೧೩ |
| ೧೩ | ಹನುಮಯ್ಯ | ೫೮ | ನಾಯಕ | ವ್ಯವಸಾಯ | ಸುಗ್ಗೇನಹಳ್ಳಿ | ೭.೯.೨೦೧೩ |
| ೧೪ | ಲಕ್ಷ್ಮಪ್ಪ | ೬೦ | ನಾಯಕ | ವ್ಯವಸಾಯ | ಹೊಸೂರು | ೨೯.೧೦.೨೦೧೩ |
| ೧೫ | ರಾಜಣ್ಣ | ೩೮ | ಬಾರಿಕರ | ವ್ಯವಸಾಯ | ಬಸವನದುರ್ಗ | ೨೯.೧೦.೨೦೧೩ |
| ೧೬ | ಗಿರಿಮಲ್ಲನಗೌಡ | ೫೭ | ಲಿಂಗಾಯ್ತ | ವ್ಯವಸಾಯ | ಸಿದ್ಧಾಪುರ | ೨೧.೫.೨೦೧೪ |
| ೧೭ | ಚಂದ್ರಶೇಖರ | ೪೬ | ಕೊರಚ | ಹಂದಿಸಾಕಣಿಕೆ | ಗುಗ್ಗರಹಟ್ಟಿ | ೨೧.೫.೨೦೧೪ |
| ೧೮ | ಭೀಮಪ್ಪ | ೬೮ | ಹರಿಜನ | ವ್ಯವಸಾಯ | ಕೊಂಚಿಗೇರಿ | ೨೨.೫.೨೦೧೪ |
| ೧೯ | ನರಸಪ್ಪ | ೫೨ | ವಡ್ಡ | ಕೂಲಿ | ಸಿರುಗುಪ್ಪ | ೨೨.೫.೨೦೧೪ |

| | | | | | | |
|---|---|---|---|---|---|---|
| ೨೦ | ಮಲ್ಲಿಕಾರ್ಜುನಗೌಡ | ೩೫ | ಲಿಂಗಾಯತ | ವ್ಯವಸಾಯ | ಬೆಳಗಲ್ | ೨೨.೫.೨೦೧೪ |
| ೨೧ | ಮಹೇಶ್ ಕೆ. | ೩೫ | ಡಂಬ | ಶಿಕ್ಷಕ | ಸಿರುಗುಪ್ಪ | ೨೩.೫.೨೦೧೪ |
| ೨೨ | ಬಸಪ್ಪ ಕೆ | ೫೮ | ನೇಕಾರ | ನೇಕಾರಿಕೆ | ಬಳ್ಳಾರಿ | ೨೩.೫.೨೦೧೪ |
| ೨೩ | ರಾಮದಾಸ | ೩೯ | ಉಪ್ಪಾರ | ವ್ಯವಸಾಯ | ಸಿರಿಗೇರಿ | ೨೩.೫.೨೦೧೪ |
| ೨೪ | ಲಕ್ಷ್ಮಿಕಾಂತರೆಡ್ಡಿ | ೬೦ | ರೆಡ್ಡಿ | ವ್ಯವಸಾಯ | ಕುರುಗೋಡು | ೨೪.೫.೨೦೧೪ |
| ೨೫ | ಕರಿಬಸಪ್ಪ | ೭೦ | ಕುರುಬ | ವ್ಯವಸಾಯ | ಬಾದನಹಟ್ಟಿ | ೨೫.೫.೨೦೧೪ |
| ೨೬ | ತಿಮ್ಮಪ್ಪ | ೭೦ | ಮಾದಿಗ | ವ್ಯವಸಾಯ | ಸಿದ್ದಮ್ಮನಹಳ್ಳಿ | ೨೫.೫.೨೦೧೪ |
| ೨೭ | ಗೋವಿಂದಪ್ಪ | ೫೨ | ಲಿಂಗಾಯ್ತ | ಶಿಕ್ಷಕರು | ಓರ್ವಾಯಿ | ೨೬.೫.೨೦೧೪ |
| ೨೮ | ಮಲ್ಲೇಶಪ್ಪ | ೫೫ | ಗುರಿಕಾರ | ವ್ಯವಸಾಯ | ಗೆಣಿಕಿಹಾಳ | ೨೭.೫.೨೦೧೪ |
| ೨೯ | ಮಲ್ಲಯ್ಯ | ೮೦ | ನಾಯಕ | ಪೂಜಾರಿ | ಮೋಕಾ | ೨೮.೫.೨೦೧೪ |
| ೩೦ | ರುದ್ರಪ್ಪ | ೭೫ | ಐನೋರು | ವ್ಯವಸಾಯ | ನಿಟ್ಟೂರು | ೨೯.೫.೨೦೧೪ |
| ೩೧ | ಪ್ರಹ್ಲಾದ್ | ೪೮ | ನಾಯಕ | ಶಿಕ್ಷಕರು | ಚೌಡಾಪುರ | ೨೧.೮.೨೦೧೫ |
| ೩೨ | ಹುಡುಚಪ್ಪ | ೬೦ | ಕುರುಬ | ವ್ಯವಸಾಯ | ಧರ್ಮಾಪುರ | ೨೭.೮.೨೦೧೫ |
| ೩೩ | ಚನ್ನಬಸಪ್ಪ | ೮೫ | ಲಿಂಗಾಯತ | ವ್ಯವಸಾಯ | ಅಮಲಾಪುರ | ೨೧.೮.೨೦೧೫ |
| ೩೪ | ಗುರಿಕಾರ ಚೌಡಪ್ಪ | ೭೬ | ನಾಯಕ | ರೈತ | ಗಂಗಮ್ಮನಹಳ್ಳಿ | ೨೩.೮.೨೦೧೫ |
| ೩೫ | ಮುಂಗ್ಲಿಬಾಯಿ | ೮೦ | ಲಂಬಾಣಿ | ಗೃಹಿಣಿ | ಬಿ.ಬಸಾಪುರ | ೨೩.೮.೨೦೧೫ |
| ೩೬ | ರಂಗಮ್ಮ | ೬೫ | ಕೊರಚ | ಕೂಲಿ | ಬಿತ್ತನಹಳ್ಳಿ | ೨೩.೮.೨೦೧೫ |
| ೩೭ | ಶರಣಪ್ಪ | ೪೫ | ಲಿಂಗಾಯ್ತ | ಶಿಕ್ಷಕರು | ಕೂಡ್ಲಿಗಿ | ೨೪.೮.೨೦೧೫ |
| ೩೮ | ವೆಂಕಟೇಶ | ೪೯ | ನಾಯಕ | ವ್ಯವಸಾಯ | ಕೂಡ್ಲಿಗಿ | ೨.೮.೨೦೧೫ |
| ೩೯ | ಸಂತೋಷ | ೩೦ | ಲಿಂಗಾಯತ | ಪೊಲೀಸ್ | ವಡ್ಡಿನಕಟ್ಟೆ | ೨೪.೮.೨೦೧೫ |
| ೪೦ | ಸಣ್ಣಪಾಲಯ್ಯ | ೮೦ | ನಾಯಕ | ಟೈಲರಿಂಗ್ | ಸೂಲದಹಳ್ಳಿ | ೨೫.೮.೨೦೧೫ |
| ೪೧ | ಕೊಟ್ರಪ್ಪ | ೫೬ | ಕೊರಚ | ವ್ಯಾಪಾರ | ಬತ್ತನಹಳ್ಳಿ | ೨೫.೮.೨೦೧೫ |
| ೪೨ | ಹನುಮಂತಪ್ಪ | ೬೪ | ನಾಯಕ | ವ್ಯವಸಾಯ | ಎ.ಡಿ. ಗುಡ್ಡ | ೨೫.೮.೨೦೧೫ |
| ೪೩ | ಮೇಘರಾಜ | ೩೩ | ಗೊಲ್ಲರ | ಸಂಶೋಧಕ | ಸೂಲದಹಳ್ಳಿ | ೨೫.೮.೨೦೧೫ |
| ೪೪ | ಹುಚ್ಚಪ್ಪ | ೪೬ | ವಡ್ಡರ | ಕೂಲಿ | ಬಡೆಲಡುಕು | ೨೬.೮.೨೦೧೫ |
| ೪೫ | ವಾಸುದೇವರಾವ್ | ೬೪ | ಬ್ರಾಹ್ಮಣ | ಪುರೋಹಿತ | ಗುಣಸಾಗರ | ೨೬.೮.೨೦೧೫ |

| | | | | | | |
|---|---|---|---|---|---|---|
| ೪೬ | ಸಾರೆಪ್ಪ | ೬೯ | ಮಾದಿಗ | ಕೂಲಿ | ಗಂಗ್ಲಾಪುರ | ೨೬.೮.೨೦೧೫ |
| ೪೭ | ಖಾದರ್‌ಸಾಬ್ | ೭೦ | ಮುಸ್ಲಿಂ | ವ್ಯವಸಾಯ | ಚೌಡಾಪುರ | ೨೬.೮.೨೦೧೫ |
| ೪೮ | ಬಸಪ್ಪ | ೬೫ | ಹರಿಜನ | ವ್ಯವಸಾಯ | ಅಮಲಾಪುರ | ೨೬.೮.೨೦೧೫ |
| ೪೯ | ಕರಿಯಪ್ಪ | ೬೭ | ಗೊಲ್ಲರ | ವ್ಯವಸಾಯ | ಸಿರಿಬಿ | ೨೬.೮.೨೦೧೫ |
| ೫೦ | ಅಡಿವೆಪ್ಪ | ೭೦ | ಗಾಣಿಗ | ವ್ಯಾಪಾರ | MBಅಯ್ಯನಹಳ್ಳಿ | ೨೬.೮.೨೦೧೬ |
| ೫೧ | ಹುಚ್ಚಪ್ಪ | ೬೮ | ಕುರುಬ | ವ್ಯವಸಾಯ | ಧರ್ಮಾಪುರ | ೨೭.೮.೨೦೧೫ |
| ೫೨ | ರಮೇಶ | ೪೫ | ನಾಯಕ | ಲಾರಿ ಚಾಲಕ | ಸಂಡೂರು | ೨೭.೮.೨೦೧೫ |
| ೫೩ | ಕೊಮಾರಪ್ಪ | ೬೦ | ಕಮ್ಮಾರ | ಕಮ್ಮಾರಿಕೆ | ಕಾಳಿಂಗೇರಿ | ೨೭.೮.೨೦೧೫ |
| ೫೪ | ಚನ್ನಬಸಪ್ಪ | ೮೫ | ಲಿಂಗಾಯತ | ವ್ಯವಸಾಯ | ಅಂಕಮನಾಳು | ೨೮.೮.೨೦೧೫ |
| ೫೫ | ಜಗನ್ನಾಥರಾವ್ | ೬೫ | ಬ್ರಾಹ್ಮಣ | ಪುರೋಹಿತ | ಯಶವಂತನಗರ | ೨೮.೮.೨೦೧೫ |
| ೫೬ | ರೇಣುಕಾ | ೪೦ | ನಾಯಕ | ರಂಗಕರ್ಮಿ | ಸುಶೀಲನಗರ | ೨೮.೮.೨೦೧೫ |
| ೫೭ | ಕಂಪ್ಲೆಪ್ಪ | ೭೫ | ನಾಯಕ | ವ್ಯಾಪಾರಸ್ಥ | ಸಂಡೂರು | ೨೮.೮.೨೦೧೫ |
| ೫೮ | ಈರಪ್ಪ | ೭೦ | ಮರಾಠಿಗ | ಉದ್ಯೋಗಸ್ಥ | ದೇವಗಿರಿ | ೨೯.೮.೨೦೧೫ |
| ೫೯ | ಮೈಲಾರಪ್ಪ | ೭೧ | ವಡ್ಡ | ಉದ್ಯೋಗಸ್ಥ | ದೇವಗಿರಿ | ೨೯.೮.೨೦೧೫ |
| ೬೦ | ಈರಣ್ಣ | ೩೫ | ನಾಯಕ | ಗ್ರಾ.ಪಂ.ನೌಕರ | ಮಲ್ಲಾಪುರ | ೨೯.೮.೨೦೧೫ |
| ೬೧ | ಡಂಬ್ರ ನಾಗಪ್ಪ | ೭೫ | ಡಂಬ | ಕೂಲಿ | ಹೊಸಗರಗ | ೨೨.೧೨.೨೦೧೪ |
| ೬೨ | ಹೊಸೂರಪ್ಪ | ೬೦ | ನಾಯಕ | ಪೂಜಾರಿ | ಹೊಸಗರಗ | ೨೨.೧೨.೨೦೧೪ |
| ೬೩ | ಕಪ್ಪತಪ್ಪ | ೬೫ | ಕೊರಚ | ವ್ಯವಸಾಯ | ಹೊಸಗರಗ | ೨೨.೧೨.೨೦೧೪ |
| ೬೪ | ನಬೀಸಾಬ್ | ೭೦ | ಮುಸ್ಲಿಂ | ವ್ಯವಸಾಯ | ಹೊಸಗರಗ | ೨೨.೧೨.೨೦೧೪ |
| ೬೫ | ಬಗನಪ್ಪ | ೬೮ | ಮೇದರ | ಕುಲಕಸುಬು | ಗರಗ | ೨೩.೧೨.೨೦೧೪ |
| ೬೬ | ಹೊನ್ನೂರಪ್ಪ | ೫೮ | ವಡ್ಡ | ಗಾರೆಕೆಲಸ | ಗರಗ | ೨೩.೧೨.೨೦೧೪ |
| ೬೭ | ಆದೆಪ್ಪ | ೬೦ | ಲಿಂಗಾಯತ | ವ್ಯವಸಾಯ | ಗರಗ | ೨೩.೧೨.೨೦೧೪ |
| ೬೮ | ಪಕೀರಪ್ಪ | ೬೫ | ಗೊಲ್ಲ | ವ್ಯವಸಾಯ | ಗರಗ | ೨೩.೧೨.೨೦೧೪ |
| ೬೯ | ಹಾಲಪ್ಪ | ೭೮ | ಗೊಲ್ಲ | ವ್ಯವಸಾಯ | ಬ್ಯಾಲಕುಂದಿ | ೨೪.೧೨.೨೦೧೪ |
| ೭೦ | ಮಾರೆಪ್ಪ | ೬೫ | ಹರಿಜನ | ಕೂಲಿ | ಬ್ಯಾಲಕುಂದಿ | ೨೪.೧೨.೨೦೧೪ |
| ೭೧ | ಬೋರಯ್ಯ | ೬೫ | ನಾಯಕ | ನಿವೃತ್ತ ಪ್ರಿನ್ಸಿಪಾಲ್ | ನಾಗಲಾಪುರ | ೨೫.೧೨.೨೦೧೪ |

| | | | | | | |
|---|---|---|---|---|---|---|
| ೭೨ | ಕೆಂಚಪ್ಪ | ೩೬ | ಹರಿಜನ | ಚಾಲಕರು | ನಾಗಲಾಪುರ | ೨೫.೧೨.೨೦೧೪ |
| ೭೩ | ಬಾರಿಕರಭರಮ್ಮಪ | ೫೬ | ಬಾರಿಕರ | ಪೋಸ್ಟ್‌ಮನ್ | ನಾಗಲಾಪುರ | ೨೫.೧೨.೨೦೧೪ |
| ೭೪ | ನಾಗರಾಜ | ೪೦ | ಕಮ್ಮಾರ | ಕಮ್ಮಾರಿಕೆ | ಗೊಲ್ಲರಹಳ್ಳಿ | ೨೬.೧೨.೨೦೧೪ |
| ೭೫ | ಸತ್ಯಪ್ಪ | ೩೨ | ಕೊರವ | ಕೂಲಿ | ಗೊಲ್ಲರಹಳ್ಳಿ | ೨೬.೧೨.೨೦೧೪ |
| ೭೬ | ಹನುಮಂತಪ್ಪ | ೫೦ | ನಾಯಕ | ವ್ಯಾಪಾರ | ಡಣಾಯಕನಕೆರೆ | ೨೭.೧೨.೨೦೧೪ |
| ೭೭ | ಧರ್ಮಪ್ಪ | ೫೫ | ನಾಯಕ | ವ್ಯವಸಾಯ | ಮಗಿಮಾವಿನಹಳ್ಳಿ | ೨೮.೧೨.೨೦೧೪ |
| ೭೮ | ಜಿ. ಅಂಜಿನಪ್ಪ | ೪೦ | ಕುರುಬ | ಕೂಲಿ | ಮಗಿಮಾವಿನಹಳ್ಳಿ | ೨೮.೧೨.೨೦೧೪ |
| ೭೯ | ಕೆ. ಪಂಪಾಪತಿ | ೩೮ | ನಾಯಕ | ವಕೀಲ | ಮಗಿಮಾವಿನಹಳ್ಳಿ | ೨೮.೧೨.೨೦೧೪ |
| ೮೦ | ವೀರೇಶಪ್ಪ | ೬೮ | ಕುಂಬಾರ | ಕುಂಬಾರಿಕೆ | ಹಂಪಾಪಟ್ಟಣ | ೨೯.೧೨.೨೦೧೪ |
| ೮೧ | ಕೊಟ್ರಪ್ಪ | ೫೫ | ಕ್ಷತ್ರಿಯ | ರಾಜಕೀಯ | ಕೆಂಚಟನಹಳ್ಳಿ | ೨೯.೧೨.೨೦೧೪ |
| ೮೨ | ಸುಭಾಷ | ೩೫ | ಕುರುಬ | ಶಿಕ್ಷಕರು | ವರದಾಪುರ | ೨೯.೧೨.೨೦೧೪ |
| ೮೩ | ನಾಗರಾಜ ಜೆ. | ೩೬ | ನಾಯಕ | ಸಂಶೋಧಕ | ಆನಂದೇವನಹಳ್ಳಿ | ೩೦.೧೨.೨೦೧೪ |
| ೮೪ | ಮಲ್ಲಿಕಾರ್ಜುನ | ೫೦ | ನಾಯಕ | ಶಿಕ್ಷಕ | ಹೆಚ್.ಬಿ. ಹಳ್ಳಿ | ೩೦.೧೨.೨೦೧೪ |
| ೮೫ | ಅಂಜಿನಪ್ಪ | ೬೮ | ವಡ್ಡ | ವ್ಯವಸಾಯ | ಕಡ್ಲಬಾಳ | ೩೦.೧೨.೨೦೧೪ |
| ೮೬ | ಬಸವರಾಜ | ೪೦ | ನಾಯಕ | ವ್ಯವಸಾಯ | ಹಂಪಸಾಗರ | ೩೦.೧೨.೨೦೧೪ |

# ಪರಾಮರ್ಶನ ಗ್ರಂಥಗಳು


೧. ಅಂಗಡಿ ಎಸ್.ಎಸ್., **ವ್ಯಾಕರಣ ಪರಿಭಾಷೆ,** ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೫.

೨. ಅಂಗಡಿ ಎಸ್.ಎಸ್., **ಸಂಬಂಧವಾಚಕಗಳು ಮತ್ತು ಸಂಬೋಧನೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭.

೩. ಅಂಗಡಿ ಎಸ್.ಎಸ್., (ಸಂ), **ಜನಪದ ಸಾಹಿತ್ಯ, ಭಾಷೆ,** ವಿಕಾಸ ಪ್ರಕಾಶನ, ಹೊಸಪೇಟೆ, ೨೦೦೮.

೪. ಅಂಜಿನಪ್ಪ ಯಳನಾಡು, **ಹಗಲುವೇಷದವರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೫. ಆರ್ಕೆ ಮಣಿಪಾಲ, **ಹೆಸರನಲ್ಲೇನಿದೆ?,** ನ್ಯೂಸ್ಟಾರ್ ಪಬ್ಲಿಕೇಶನ್, ಸಾರಕ್ಕಿ, ಬೆಂಗಳೂರು, ೧೯೮೯.

೬. ಉಪಾಧ್ಯ ಜಿ.ಎನ್., **ಗೋದಾವರಿವರಂ ಇರ್ದ ಕನ್ನಡ ನಾಡು,** ಮುಂಬೈ ವಿಶ್ವವಿದ್ಯಾಲಯ, ೨೦೦೨.

೭. ಎಚ್ಚಾರ್ಕೆ, **ಮಿಲೆನಿಯಂ ಸಾಮಾನ್ಯ ಅಧ್ಯಯನ,** ಸಪ್ನ ಪ್ರಕಾಶನ, ಬೆಂಗಳೂರು, ೨೦೧೬.

೮. **ಕರ್ನಾಟಕದ ಗ್ರಾಮ ಸೂಚಿ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫.

೯. ಕಲಬುರ್ಗಿ ಎಂ.ಎಂ., **ಮಹಾರಾಷ್ಟ್ರದ ಕನ್ನಡ ಶಾಸನಗಳು,** ಮುಂಬಯಿ ವಿಶ್ವವಿದ್ಯಾಲಯ, ೧೯೮೭.

೧೦. ಕಲಬುರ್ಗಿ ಎಂ.ಎಂ., **ಕನ್ನಡ ನಾಮ ವಿಜ್ಞಾನ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೮೯.

೧೧. ಕಲಬುರ್ಗಿ ಎಂ.ಎಂ., **ಕರ್ನಾಟಕದ ಕೈಫಿಯತ್ತುಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೧೨. ಕಲಬುರ್ಗಿ ಎಂ.ಎಂ., **ಮಾರ್ಗ ಸಂಪುಟ, ೧-೨-೩,** ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು, ೧೯೯೮.

೧೩. ಕೀರ್ತಿನಾಥ ಕುರ್ತುಕೋಟಿ, **ಉರಿಯನಾಲಗೆ,** ಮನೋಹರ ಗ್ರಂಥಮಾಲಾ, ಧಾರವಾಡ, ೧೯೯೩.

೧೪. ಕುಮಾರಸ್ವಾಮಿ ಕೆ.ಎಸ್., **ಪ್ರಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರ್ಯರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬.

೧೫. ಕೃಷ್ಣಭಟ್ಟ ಸೇಡಿಯಾಪು, **ಕೆಲವು ದೇಶನಾಮಗಳು,** ಸಾಹಿತ್ಯ ಸಂಘ, ಮಣಿಪಾಲ, ೧೯೭೫.

೧೬. ಕೃಷ್ಣಮೂರ್ತಿ ಹನೂರು, **ಮ್ಯಾಸಬೇಡರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೩.

೧೭. ಕೊಪ್ಪಾ ಎಸ್.ಕೆ., **ತರ್ದವಾಡಿನಾಡು ಒಂದು ಅಧ್ಯಯನ,** ಪ್ರತಿಭಾ ಪ್ರಕಾಶನ, ಇಂಡಿ, ೧೯೯೦.

೧೮. ಗುರುಮೂರ್ತಿ ಪೆಂಡಕೂರು, **ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೧೯. ಗುರುಮೂರ್ತಿ ಕೆ.ಜಿ., **ಸ್ಥಳನಾಮಗಳ ಅಧ್ಯಯನ ಮತ್ತಿತರ ಪ್ರಬಂಧಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭.

೨೦. ಗುರುಲಿಂಗ ಕಾಪಸೆ (ಸಂ), **ಶತಮಾನದ ಲಲಿತ ಪ್ರಬಂಧಗಳು,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೧.

೨೧. ಗೋಪಾಲಕೃಷ್ಣ ವಿ., **ಸ್ಥಳನಾಮ ಅಧ್ಯಯನಗಳು,** ವಿದ್ಯಾಗಿರಿ ಪ್ರಕಾಶನ, ಕೋಲಾರ, ೧೯೮೭.

೨೨. ಚಂದ್ರಪ್ಪ ಎನ್., **ಮೊಂಡರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೨೩. ಚಕ್ರವರ್ತಿ ಶ್ರೀನಿವಾಸ ಗೋಪಾಲಾಚಾರ್ಯ, **ಸಂಸ್ಕೃತ-ಕನ್ನಡ ಶಬ್ದಕೋಶ ಭಾಗ-೩,** ಶ್ರೀ ಕೌಸ್ತುಭಸೌಧ, ಬೆಂಗಳೂರು, ೧೯೮೪.

೨೪. ಚನ್ನಕ್ಕ ಪಾವಟೆ (ಎಲೆಗಾರ), **ಸಂಸ್ಕೃತಿ ಸಂಶೋಧನೆ,** ಚನ್ನಗಂಗಾ ಪ್ರಕಾಶನ, ಧಾರವಾಡ, ೧೯೯೫.

೨೫. ಚಿದಾನಂದಮೂರ್ತಿ ಎಂ., **ವಾಗರ್ಥ,** ಬಾಪ್ಕೋ ಪ್ರಕಾಶನ, ಬೆಂಗಳೂರು, ೧೯೮೧.

೨೬. ಚಿದಾನಂದಮೂರ್ತಿ ಎಂ., **ಭಾಷಾವಿಜ್ಞಾನದ ಮೂಲ ತತ್ವಗಳು,** ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು, ೧೯೮೨.

೨೭. ಚಿದಾನಂದಮೂರ್ತಿ ಎಂ., **ಸಂಶೋಧನಾ ತರಂಗ-೨,** ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೦.

೨೮. ಚಿದಾನಂದಮೂರ್ತಿ ಎಂ., **ಹೊಸತು ಹೊಸತು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩.

೨೯. ಜವರೇಗೌಡ ದೇ., **ಸ್ಥಳನಾಮ ವ್ಯಾಸಂಗ,** ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೯೦.

೩೦. ಜೋಗನ್‌ಶಂಕರ್, **ದೇವದಾಸಿ ಸಂಪ್ರದಾಯ,** ವಿವೇಚನಾ ಪ್ರಕಾಶನ, ವಿಮೋಚನಾ ದೇವದಾಸಿ ಪುನರ್ವಸತಿ ಸಂಘ, ಅಥಣಿ, ೧೯೯೩.

೩೧. ದಾದಾಪೀರ್ ಬಿ.ಸಿ., **ಪಿಂಜಾರರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೩೨. ದಿವಾಕರ್ ಆರ್.ಬಿ. ಮತ್ತು ಕುಮಾರ್ ಆರ್.ಬಿ., **ಕರ್ನಾಟಕದಲ್ಲಿ ಕುಮಾರರಾಮನ ಹಬ್ಬ ಜಾತ್ರೆಗಳು,** ಗಂಗೋತ್ರಿ ಪ್ರಕಾಶನ, ರಾಮಸಾಗರ, ೨೦೧೪.

೩೩. ದೇವೇಂದ್ರಕುಮಾರ ಸಿ. ಹಕಾರಿ, **ಡೊಂಬರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೩೪. ದೇಸಾಯಿ ಪಿ.ಬಿ., **ವಿಜಯನಗರ ಸಾಮ್ರಾಜ್ಯ,** ಸ್ಮಾರಕೋತ್ತರ ಮಂಡಳಿ, ಧಾರವಾಡ, ೧೯೨೬.

೩೫. ನಂಜಯ್ಯ ಹೊಂಗನೂರು, **ಸ್ಥಳನಾಮಗಳು,** ಪ್ರಸಾರಾಂಗ, ಮಾನಸ ಗಂಗೋತ್ರಿ, ಮೈಸೂರು, ೨೦೦೯.

೩೬. ನಾಗಚಂದ್ರ, **ಜನಪ್ರಿಯ ಕನ್ನಡ ಗಾದೆಗಳು,** ಸೃಷ್ಟಿ ಪಬ್ಲಿಕೇಷನ್, ಬೆಂಗಳೂರು, ೧೯೯೮.

೩೭. ನಾಗಯ್ಯ ಜೆ.ಎಂ., **ಬಳ್ಳಾರಿ ಜಿಲ್ಲೆಯ ಶಾಸನಗಳು,** ಗುಲ್ಬರ್ಗಾ ವಿಶ್ವವಿದ್ಯಾಲಯ, ೧೯೯೨.

೩೮. ನಾಗರಾಜಯ್ಯ ಹಂ.ಪ., **ದ್ರಾವಿಡ ಭಾಷಾವಿಜ್ಞಾನ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೧.

೩೯. ನಾಗರಾಜಯ್ಯ ಹಂ.ಪ., **ಚಂದ್ರಕೊಡೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೪೦. ನಾಗೇಶ ಎಚ್.ವಿ., **ಗ್ರಾಮ ವ್ಯಾಸಂಗ,** ಚಂದ್ರನಾಥ ಪ್ರಕಾಶನ, ಧಾರವಾಡ, ೧೯೮೧.

೪೧. ನಾಯಕ್ ಡಿ.ಬಿ., **ಲಂಬಾಣಿ ಜನಪದ ಸಾಹಿತ್ಯ,** ಬಂಜಾರ ಪ್ರಕಾಶನ, ಗುಲ್ಬರ್ಗಾ, ೨೦೦೦.

೪೨. ನಾರಾಯಣ ಕೆ.ವಿ., **ಮತ್ತೆ ಭಾಷೆಯ ಸುತ್ತಮುತ್ತ,** ಬೆಂಗಳೂರು ವಿಶ್ವವಿದ್ಯಾಲಯ, ೧೯೯೪.

೪೩. ನಾರಾಯಣ ಕೆ.ವಿ., **ದ್ವಿಭಾಷಿಕತೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೪೪. ನಾರಾಯಣ ಕೆ.ವಿ., (ಸಂ), **ಸ್ಥಳನಾಮಗಳ ಪರಿವರ್ತನೆ ಮತ್ತು ಪ್ರಭಾವ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೪೫. ನಾರಾಯಣ ಕೆ.ವಿ. (ಸಂ), **ಭಾಷೆ ವಿಶ್ವಕೋಶ–೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೪೬. ನಾರಾಯಣ ಕೆ.ವಿ., (ಸಂ), **ವ್ಯಕ್ತಿನಾಮಗಳ ಸ್ವರೂಪ ಮತ್ತು ವಿಶ್ಲೇಷಣೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೪೭. ನೇಗಿನಹಾಳ್ ಎಂ.ಬಿ., **ನೇಗಿನಹಾಳ ಪ್ರಬಂಧಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪೮. ಪರಮಶಿವಯ್ಯ ಜಿ.ಶಂ., **ಮೇದಾರ ಕಲ್ಲು ಮತ್ತು ಇತರ ಪ್ರಬಂಧಗಳು**, ಸಾಹಿತ್ಯ ಸದನ ಮಾನಸ ಗಂಗೋತ್ರಿ, ಮೈಸೂರು, ೧೯೭೦.

೪೯. ಪಾಟೀಲಪುಟ್ಟಪ್ಪ, **ಸಮಗ್ರ ಪಾಪು ಪ್ರಪಂಚ**, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೨೦೦೦.

೫೦. ಪುರುಷೋತ್ತಮ ಬಿಳಿಮಲೆ ಮತ್ತು ಚೆಲುವರಾಜು (ಸಂ), **ಹಂಪಿ ಜಾನಪದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೫೧. ಬಸವರಾಜ ಮಲಶೆಟ್ಟಿ, **ಬಳ್ಳಾರಿ ಜಿಲ್ಲೆಯ ಜನಪದ ಕಥೆಗಳು**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫.

೫೨. ಬೆನಗಲ್ ರಾಮರಾವ್ ಮತ್ತು ಪಾನ್ಯಂ ಸುಂದರಶಾಸ್ತ್ರಿ, **ಪುರಾಣನಾಮ ಚೂಡಾಮಣಿ** ಪ್ರಕಾಶಕರು, ಪ್ರೊ. ಲಕ್ಷ್ಮೀನಾರಾಯಣ ಅರೋರಾ, ಮೈಸೂರು, ೨೦೦೧.

೫೩. ಮಂಜುನಾಥ ಬೇವಿನಕಟ್ಟಿ, **ಸಾಂಸ್ಕೃತಿಕ ಪದಕೋಶ–೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೫೪. ಮಲ್ಲೇಪುರಂ ಜಿ. ವೆಂಕಟೇಶ, (ಸಂ), **ಶಂಬಾಕೃತಿ ಸಮೀಕ್ಷೆ**, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೨.

೫೫. ಮಹದೇವ ಸಿ., ಸುಬ್ಬಣ್ಣ ರೈ ಎ. ಮತ್ತು ಮಾಧವ ಪೆರಾಜೆ, **ಹೊಸಪೇಟೆ ತಾಲ್ಲೂಕು ದರ್ಶನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೫೬. ರಘುಪತಿಭಟ್ಟ ಕೆಮ್ತೂರು, **ತುಳುನಾಡಿನ ಸ್ಥಳನಾಮಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೧.

೫೭. ರಘುಪತಿಭಟ್ಟ ಕೆಮ್ತೂರು, **ಹೆಸರಲ್ಲೇನಿದೆ**, ಚೇತನಾ ಪ್ರಿಂಟರ್ಸ್, ಬೆಂಗಳೂರು, ೧೯೮೯.

೫೮. ರಮೇಶ ಬೇ.ಗೊ., **ಜನಪ್ರಿಯ ಮುನ್ನೂರು ಸ್ಥಳನಾಮಗಳು**, ನವಕರ್ನಾಟಕ, ಪಬ್ಲಿಕೇಶನ್ಸ್, ಬೆಂಗಳೂರು, ೧೯೯೫.

೫೯. ರಾಜಶೇಖರ ಬಣಕಾರ, **ಬಾಗಳಿಯ ದೇವಾಲಯಗಳು,** ದೇಗುಲ ಪ್ರಕಾಶನ, ಬಾಗಳಿ, ಹರಪನಹಳ್ಳಿ, ೧೯೯೯.

೬೦. ರಾಮಕೃಷ್ಣ ಕೆ., **ನಾಮದ ಬಲ ಮತ್ತು ಇತರ ಪ್ರಬಂಧಗಳು,** ಗೀತಾಬುಕ್ ಹೌಸ್, ಮೈಸೂರು, ೧೯೬೮.

೬೧. ಲಕ್ಕಪ್ಪಗೌಡ ಎಚ್.ಜೆ., (ಪ್ರ.ಸಂ.), **ಜಾನಪದ ಕೈಪಿಡಿ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭.

೬೨. ಲಕ್ಷ್ಮಣ ತೆಲಗಾವಿ (ಸಂ), **ಹರತಿಯ ಸಿರಿ,** ಹೆಚ್.ವಿ. ವೀರನಾಯಕರ ನೆನಪಿನ ಸಂಪುಟ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೧೯೮೭.

೬೩. ಲಲಿತ ಎ.ಸಿ., **ಕಾಡುಕುರುಬರು ಮತ್ತು ಜೇನುಕುರುಬರು,** ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೩.

೬೪. ವೀಣಾ ಎಂ.ಪಿ., **ಮನೆ, ಸಮಾಜ ಮತ್ತು ಸಂಸ್ಕೃತಿ,** ನೆಲೆಮನೆ ಪ್ರಕಾಶನ, ಬೆಂಗಳೂರು, ೨೦೦೦.

೬೫. ವೀರಣ್ಣ ದಂಡೆ, **ಕನ್ನಡ ಜಾನಪದ ಪ್ರಜ್ಞೆ,** ಕವಿಮಾರ್ಗ ಪ್ರಕಾಶನ, ಕಲ್ಬುರ್ಗಿ, ೧೧೯೩.

೬೬. ವೀರೇಶ ಬಳ್ಳಾರಿ, **ಬಳ್ಳಾರಿ ತಾಲೂಕಿನ ಸ್ಥಳನಾಮಗಳು,** ಸೃಷ್ಟಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೧೧.

೬೭. ವಿಶ್ವನಾಥ, **ಸ್ಥಳನಾಮಗಳು,** ಸಂವಹನ ಪ್ರಕಾಶನ, ಮೈಸೂರು, ೧೯೯೫.

೬೮. ಶಂಕರ್‌ಜೋಗನ್, **ಗ್ರಾಮಸಮಾಜ,** ಜೀವ ಪ್ರಕಾಶನ, ಮೈಸೂರು, ೧೯೯೫.

೬೯. ಶಂಬಾ ಜೋಶಿ, **ಕಣ್ಮರೆಯಾದ ಕನ್ನಡ,** ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೧೯೩೩.

೭೦. ಶಂಬಾ ಜೋಶಿ, **ಎಡೆಗಳು ಹೇಳುವ ಕಂನಾಡ ಕತೆ,** ಮಾಧವ ಬಲ್ಲಾಳ ಬಂಧುಗಳು, ಧಾರವಾಡ, ೧೯೪೭.

೭೧. ಶಂಬಾ ಜೋಶಿ, **ಕಂನುಡಿಯ ಜೀವಾಳ,** ಸಮಾಜ ಪುಸ್ತಕಾಲಯ, ಧಾರವಾಡ, ೧೯೭೩.

೭೨. ಶಶಿಕಲಾ ಹೆಚ್., (ಸಂ), **ನಾಮವ್ಯಾಸಂಗ,** ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೨.

೭೩. ಶಿರೂರು ಬಿ.ವಿ., **ಶ್ರವಣಬೆಳ್ಗೊಳ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

೭೪. ಶಿವಶಂಕರ ಚಕ್ಕೆರೆ, **ಗೊರವರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೭೫. ಶ್ರೀಧರ ಎಸ್.ಎನ್., **ಇಂದಿನ ಕನ್ನಡ ರಚನೆ ಮತ್ತು ಬಳಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೭೬. ಶೇಷಾದ್ರಿ ಬಿ., (ಸಂ), **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೭೭. ಸಂಗಮೇಶ ಸವದತ್ತಿಮಠ, **ದ್ರಾವಿಡ ಭಾಷಾವಿಜ್ಞಾನ,** ರೂಪರಶ್ಮಿ ಪ್ರಕಾಶನ, ಗುಲ್ಬರ್ಗಾ, ೧೯೯೦.

೭೮. ಸಂಗಮೇಶ ಸವದತ್ತಿಮಠ, **ಭಾಷಾಲೇಖ,** ರೂಪರಶ್ಮಿ ಪ್ರಕಾಶನ, ಗುಲ್ಬರ್ಗಾ, ೧೯೯೯.

೭೯. ಸದಾಶಿವಪ್ಪ ಕುಂ.ಬಾ, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ,** (ಸಂಶೋಧಿತ ಲೇಖನಗಳು) ಮಾಲತೇಶ ಪ್ರಕಾಶನ, ಹರಪನಹಳ್ಳಿ, ೧೯೯೦.

೮೦. ಸುಂದರಂ ಅರ್ವಿಯಸ್ (ಸಂ), **ಕರ್ನಾಟಕದ ಚರಿತ್ರೆ ಸಂ–೧,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೧. ಸೂರ್ಯನಾಥ ಕಾಮತ್ (ಸಂ), **ಇತಿಹಾಸ ದರ್ಶನ, ಸಂಪುಟ–೧೧,** ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೯.

೮೨. ಸೋಮಶೇಖರ ಇಮ್ರಾಪುರ, **ಜನಪದ ಒಗಟುಗಳು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೯.

೮೩. ಸೋಮಶೇಖರಗೌಡ, **ಭಾಷೆರಚನೆ ಮತ್ತು ಬಳಕೆ,** ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೦೦.

೮೪. ಹಾಲಪ್ಪ ಲಿಂಗದಳ್ಳಿ, **ಬಳ್ಳಾರಿ ಪರಿಸರದ ಹಾಲುಮತ ದೈವಗಳು,** ಹಾಲುಮತ ಸಂಸ್ಕೃತಿ ಸಂಶೋಧನಾ ಪ್ರತಿಷ್ಠಾನ, ಹೊಸಪೇಟೆ, ೨೦೧೫.

**ಪ್ರಕಟಿತ ಪಿಎಚ್.ಡಿ. ಮಹಾ ಪ್ರಬಂಧಗಳು**

೧. ಕರಿಯಪ್ಪ ಜೆ. ಮಾಳಿಗೆ, **ಬಳ್ಳಾರಿ ಜಿಲ್ಲೆಯ ಅವಧೂತರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೨. ಕರಿಶೆಟ್ಟಿ ರುದ್ರಪ್ಪ, **ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫.

೩. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೯೬.

೪. ದುರ್ಗಾದಾಸ ಕೆ.ಆರ್., **ಬಳ್ಳಾರಿ ಜಿಲ್ಲೆಯ ಬಯಲಾಟಗಳು,** ಸಮತಾ ಪ್ರಕಾಶನ, ಬೆಳಗಾವಿ, ೧೯೬೬.

೫. ದೇವೇಂದ್ರಪ್ಪ ಜಾಜಿ, **ಆಂಧ್ರ-ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು,** ವಿಕಾಸ ಪ್ರಕಾಶನ, ಹೊಸಪೇಟೆ, ೨೦೦೪.

೬. ಪೂಜಾರ್ ವಿ.ಜಿ., **ಗುಲ್ಬರ್ಗಾ ತಾಲ್ಲೂಕಿನ ಸ್ಥಳನಾಮಗಳು,** ಭಾಷಿಕ, ಸಾಂಸ್ಕೃತಿಕ ಅಧ್ಯಯನ, ಗುಲಬರ್ಗಾ ವಿಶ್ವವಿದ್ಯಾಲಯ, ೧೯೯೦.

೭. ವಿಶ್ವನಾಥಯ್ಯ ಸಿ.ಎಂ., **ಕಡೂರು ತಾಲೂಕಿನ ಸ್ಥಳನಾಮಗಳು,** ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ೨೦೦೪.

೮. ಸಣ್ಣಪಾಪಯ್ಯ, **ಚಿತ್ರದುರ್ಗ ಪರಿಸರದ ವ್ಯಕ್ತಿನಾಮಗಳು,** ಬಂಡಾರ ಪ್ರಕಾಶನ, ಮಸ್ಕಿ, ೨೦೦೯.

**ಅಪ್ರಕಟಿತ ಪಿಎಚ್.ಡಿ. ಮಹಾ ಪ್ರಬಂಧಗಳು**

೧. ಅಂಗಡಿ ಎಸ್.ಎಸ್., **ಮಿಶನರಿಗಳ ದ್ವಿಭಾಷಿಕ ನಿಘಂಟುಗಳ ತೌಲನಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯.

೨. ಅರುಣಾದೇವಿ ಎಂ., **ಹಾಸನ ತಾಲ್ಲೂಕಿನ ಸ್ಥಳನಾಮಗಳು,** ಮೈಸೂರು ವಿಶ್ವವಿದ್ಯಾಲಯ, ೧೯೯೬.

೩. ಅರುಣ್‌ಕುಮಾರ, **ಕನ್ನಡ ಜಾನಪದ ಅಧ್ಯಯನದ ತಾತ್ವಿಕ ನೆಲೆಗಳು,** ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮-೦೯.

೪. ಉಳ್ಳೇಶಪ್ಪ ಎಂ., **ಸ್ವಾತಂತ್ರ್ಯ ನಂತರ ಹೊಸಪೇಟೆ ತಾಲೂಕಿನ ಸಾಂಘಿಕ ನೆಲೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭-೦೮.

೫. ಕರಿಬಸಪ್ಪ ಎ., **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೬. ಕೃಷ್ಣಪರಮೇಶ್ವರಭಟ್ಟ, **ಕೋಲಾರ ಜಿಲ್ಲೆಯ ಕನ್ನಡ-ತೆಲುಗು ದ್ವಿಭಾಷಿಕ ಪರಿಸರ ಒಂದು ಅಧ್ಯಯನ,** ಮೈಸೂರು ವಿಶ್ವವಿದ್ಯಾಲಯ, ೧೯೯೬.

೭. ಕೃಷ್ಣವೇಣಿ ಆರ್., **ಹುಲಿಗೆಮ್ಮ ಜಾನಪದದಲ್ಲಿ ಮಹಿಳಾ ಪ್ರತಿನಿಧೀಕರಣ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭-೦೮.

೮. ಖಂಡೋಬ ಪಿ.ಕೆ., **ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ,** ತೇಜಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ, ೧೯೯೧.

೯. ಗಂಗಾಧರಯ್ಯ ಎಸ್.ಎಂ., **ಶಂಬಾ: ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೦. ಗೋಪಾಲಕೃಷ್ಣ ವಿ., **ಕೋಲಾರ ಜಿಲ್ಲೆಯ ಸ್ಥಳನಾಮಗಳ ಸಮಾಜೋಭಾಷಿಕ ಅಧ್ಯಯನ,** ಬೆಂಗಳೂರು ವಿಶ್ವವಿದ್ಯಾಲಯ, ೧೯೮೯.

೧೧. ಗೋವಿಂದ, **ಬಳ್ಳಾರಿ ಜಿಲ್ಲೆಯ ಗ್ರಾಮ ದೇವತೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೧೨. ನಂಜಯ್ಯ ಎಂ., **ಚಾಮರಾಜನಗರ ತಾಲೂಕಿನ ಸ್ಥಳನಾಮಗಳು,** ಮೈಸೂರು ವಿಶ್ವವಿದ್ಯಾಲಯ, ಹಂಪಿ, ೨೦೦೦.

೧೩. ನಟರಾಜ ಡಿ.ಕೆ., **ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಥಳನಾಮಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೪. ನಾಗರಾಜ ಎಂ., **ಕರ್ನಾಟಕ ಮಡಿವಾಳರು: ಒಂದು ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೧೫. ನಾಗರಾಜ, **ಮೈಲಾರಲಿಂಗನ ಆಚರಣೆ ಒಂದು ಸಾಮಾಜಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೬. ನಾರಾಯಣ ಗಿರಿಯಪ್ಪ, **ಕನಕಗಿರಿ ಸಂಕಥನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೧೭. ನಿಂಗಪ್ಪ, **ಕೊಪ್ಪಳ ಜಿಲ್ಲೆಯ ದೈವಗಳು: ಜನಪದೀಯ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೧೮. ಪಾಂಡುರಂಗಬಾಬು ಡಿ., **ಆದಿಜಾಂಬವರ ಕನ್ನಡ,** ಮೈಸೂರು ವಿಶ್ವವಿದ್ಯಾಲಯ, ೧೯೯೫.

೧೯. ಬಾಲಪ್ಪ ಗೋಳಪ್ಪ, **ಬಾಗಲ್‌ಕೋಟೆ ಜಿಲ್ಲೆಯ ಸ್ಥಳನಾಮಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೦. ಭಾಗ್ಯಲಕ್ಷ್ಮಿ ಎಂ., **ಬಳ್ಳಾರಿ ಪರಿಸರದ ಕನ್ನಡ-ತೆಲುಗು ದ್ವಿಭಾಷಿಕತೆ, ಸಮಾಜೋಭಾಷಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೨೧. ಮಲ್ಲಿಕಾರ್ಜುನಗೌಡ, **ಕರ್ನಾಟಕಾಂಧ್ರ ಗಡಿಭಾಗದಲ್ಲಿನ ಹಿಂದೂ-ಮುಸ್ಲಿಂ ಬಾಂಧವ್ಯ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೨೨. ಮೊಗಳ್ಳಿ ಗಣೇಶ, **ಕರ್ನಾಟಕ ಗ್ರಾಮ ದೈವಗಳ ಸಂಸ್ಕೃತಿ ವಿಕಾಸ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨೩. ರಾಜಣ್ಣ ಜಿ.ವಿ., **ಕನ್ನಡ ಸಂಸ್ಕೃತಿ: ಶಂಬಾ ಅವರ ಆಲೋಚನೆಗಳು,** ಕನ್ನಡ ವಿಶ್ವವಿದ್ಯಾಲಯ, ೧೯೯೭.

೨೪. ರಾಜಕುಮಾರ ಕೆ., **ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨೫. ಲಲಿತಾಂಬ, **ಸಂಡೂರು ತಾಲೂಕು ಒಂದು ಚಾರಿತ್ರಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೨೬. ಲಿಂಗಣ್ಣ, **ದೆವ್ವವನ್ನು ಕುರಿತ ಭಾಷಿಕ ಸಂಕಥನದ ನೆಲೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೨೭. ಲೋಕರಾಜ ದೊಡ್ಡಮನಿ, **ಬಳ್ಳಾರಿ ಜಿಲ್ಲೆಯ ದುರುಗಾಮುರುಗಿಯವರು ಒಂದು ಸಮಾಜಶಾಸ್ತ್ರೀಯ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨೮. ವಿಶ್ವನಾಥ, **ಸಕಲೇಶಪುರ ಪರಿಸರದ ಸ್ಥಳನಾಮಗಳು,** ದೇವಿ ಪ್ರಕಾಶನ, ಮೈಸೂರು, ೧೯೯೬.

೨೯. ವೀರಭದ್ರಶರ್ಮ ಕೆ.ಎಂ., **ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು,** ಗುಲ್ಬರ್ಗಾ ವಿಶ್ವವಿದ್ಯಾಲಯ, ೧೯೯೬.

೩೦. ವೈಜನಾಥ ಭಂಡೆ, **ಬೀದರ್ ಜಿಲ್ಲೆಯ ಸ್ಥಳನಾಮಗಳು,** ಗುಲ್ಬರ್ಗಾ ವಿಶ್ವವಿದ್ಯಾಲಯ, ೧೯೯೦.

೩೧. ಶಾಂತವ್ವ ನಾಗಪ್ಪ, **ಯಮನೂರು ಗ್ರಾಮ ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

೩೨. ಶಿವಲೀಲಾ, **ಕಮಲಾಪುರದ ಒಂದು ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೩೩. ಸಿದ್ದೇಶ್ವರಿ ಎ.ಎನ್., **ಬಳ್ಳಾರಿ ಜಿಲ್ಲೆಯ ಆಚರಣೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩.

೩೪. ಸುರೇಶ ಕೆ.ಸಿ., **ರಾಮನಗರ ಜಿಲ್ಲೆಯ ಸ್ಥಳನಾಮಗಳ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೩೫. ಹರಿಜನ ಮಲ್ಲಿಕಾರ್ಜುನ, **ಚಳ್ಳಗುರಿಕೆ ಎರ್ರಿತಾತ ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

**ಎಂ.ಫಿಲ್. ಸಂಪ್ರಬಂಧಗಳು**

೧. ಅಯ್ಯಾಳಿ ಯರ್ರಿಸ್ವಾಮಿ, **ಹಂಪಿ ಪರಿಸರದ ಐತಿಹ್ಯಗಳು,** ವಿಶ್ಲೇಷಣೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨. ಇಬ್ರಾಹಿಂ ಸಾಬ್, **ಕೊಪ್ಪಳ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬-೦೭.

೩. ಉಮಾಪತಿ ಬಿ., **ಕಡಲುಬಾಳು ಆಂಜನೇಯ ಸ್ವಾಮಿ: ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೪. ಕೊಟ್ರೇಶ ಎಂ., **ಉಚ್ಚಂಗಿದುರ್ಗ ಒಂದು ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೫. ಗಂಗಾಧರ ಟಿ., **ಬಳ್ಳಾರಿ ಜಿಲ್ಲೆಯ ಬೇಡರ ಸಮುದಾಯದ ಕ್ರೀಡೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೬. ಜಗದೀಶಮಠದ, **ಕೈಫಿಯತ್ತುಗಳಲ್ಲಿ ನಿರೂಪಿತವಾದ ಸ್ಥಳನಾಮಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೭. ಪ್ರೇಮನಂದ, **ಕೋಗಳಿ ಆಂಜನೇಯ ಸಂಕಥನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬–೦೭.

೮. ಬಸವರಾಜ ಡಿ., **ದಂಡಿದುರುಗಮ್ಮ ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೯. ಬಸವರಾಜ ಎ.ಕೆ., **ಕೊಟ್ಟೂರು ಗ್ರಾಮಾಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೦. ಮಂಗಳಾ, **ಸಂಡೂರು ಪರಿಸರದ ಬಯಲಾಟಗಳು ಒಂದು ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭–೦೮.

೧೧. ಮಧು ಎಂ.ಎನ್., **ಹೊಸಪೇಟೆ ಪ್ರದೇಶದ ಚಾರಿತ್ರಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೧೨. ಮಲ್ಲಿಕಾರ್ಜುನ ಹಿರೇಮಠ, **ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೩. ಮಾಧವ ಪೆರಾಜೆ, **ಹೊಸಪೇಟೆ ತಾಲೂಕಿನ ಗಂಡುಜೋಗಮ್ಮರ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೩–೯೪.

೧೪. ಮೈಲಾರಪ್ಪ ಬಿ., **ಮೊಳಕಾಲ್ಮುರು ತಾಲೂಕಿನ ಸ್ಥಳನಾಮಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೧೫. ಮೌಲನ ಬಿ., **ಹುಲಿಗಿ ಪರಿಸರದ ಶಾಸನಗಳು ಮತ್ತು ದೇವಾಲಯಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೧೬. ರಮೇಶ ಕೆ., **ಉಜ್ಜನಿ ಗ್ರಾಮಾಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧–೦೨.

೧೭. ರವೀಂದ್ರಕುಮಾರ ಜೆ., **ಮೌಖಿಕ ಚರಿತ್ರೆ ಮತ್ತು ಹಂಪೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೧೮. ರಾಜಶೇಖರ ಜಮದಂಡಿ, **ಹೊಸೂರಮ್ಮ, ಸಾಂಸ್ಕೃತಿಕ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬.

೧೯. ಸವಿತಾ, **ಸಂಡೂರು ಪರಿಸರ ಗ್ರಾಮದೈವಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫–೦೬.

೨೦. ಸಿದ್ಧನಗೌಡ ಜೆ.ಬಿ., **ತುಂಗಭದ್ರನದಿ ಪರಿಸರದ ಧಾರ್ಮಿಕ ಕ್ಷೇತ್ರಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

**ಇಂಗ್ಲಿಷ್ ಗ್ರಂಥಗಳು**

1. Bellary district, Gazetter, Mysore state, Govt press, Bangalore, 1972.
2. Burrow T. and M.B. Emeneau, A Dravidian etymological Dictionary, Clarendon press, Oxford, 1968.
3. Gardinar allen H. The theory proper names a controversial essay, Oxford university press, Oxford, 1968.
4. Hockett C.F. Mans place in nature, united state of America, 1973.
5. Javaregouda D. A study of village names of Mysore district, Dajagow treest, Mysore.
6. Kalburgi M.M., Kannada onamastics, The place name society of India, Mysore, 1997.
7. Mishra B.D. Socio linguistics analysis of place names of sagar district abstract, Osmania University, 1972.
8. Mohan K.R. Toponomy of the inscription of southern Karnataka (from the earliest to 1336 A.D.) Ph.D. Mysore University, 1991.
9. Peter trudgill, Sociolinguistics, An introduction penguin books LTD, England, 1947.
10. Raghupathi Kempthur, A Glossary of placename elements in tulu and Kannada, Janavadi prakashana, Gundmi, 1989.
11. Ramachandramurthy S.S. A study of telugu place names (Based on inscription form the erliest to 13th century), Agamkala prakashana, 1985.
12. Reddy G.N., A study of Telugu sementics, Venkateswara University press, Tirupati, 1966.

13. Studies in Indian place names, place name society of India Mysore, 1978-2001, Vol, 1 to 13 and 20,21.

14. Thurson Edger, Caste and tribes of south India, 7 volumes, Madras, 1909.

15. Wain wright F.T. Archology and place names and history, Routledge and kegonpaul, London, 1962.

**ನಿಘಂಟುಗಳು**

೧. ಕನ್ನಡ ಕನ್ನಡ ಇಂಗ್ಲೀಷ ನಿಘಂಟು

೨. ಕನ್ನಡ ರತ್ನಕೋಶ

೩. ಕನ್ನಡ ಕನ್ನಡ ರತ್ನಕೋಶ

೪. ಕನ್ನಡ ನಿಘಂಟುಗಳು, ಎಂಟು ಸಂಪುಟಗಳು

೫. ಸಂಕ್ಷಿಪ್ತ ಕನ್ನಡ ನಿಘಂಟು

೬. ಸಿರಿಗನ್ನಡ ಅರ್ಥಕೋಶ

೭ Dravidian etymological dictionary.

**ಪತ್ರಿಕೆಗಳು**

ಇತಿಹಾಸ ದರ್ಶನ ವಾರ್ಷಿಕ

ಸಾಧನೆ

ಕರ್ನಾಟಕ ಭಾರತಿ

ಜೀವನ ಪತ್ರಿಕೆ

ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ರುಜುವಾತು

ಜೀವನ

ಸಾಕ್ಷಿ

ಶೂದ್ರ

ಪ್ರಭಾತ

ಕಲಾದರ್ಶನ

ಸ್ವದೇಶಾಭಿಮಾನ

ಸತ್ಯಶುದ್ಧನಾಯಕ

**ಶಾಸನ ಸಂಪುಟಗಳು**

೧. ಬಳ್ಳಾರಿ ಜಿಲ್ಲೆಯ ಶಾಸನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. Epigraphia India, ಎಲ್ಲ ಸಂಪುಟಗಳು

೩. Epigraphia Carnatic ಎಲ್ಲ ಸಂಪುಟಗಳು

೪. Indian antiqueri, vol-xix

೫. South Indian inscriptions, part-14.



